# ಗೋಪಾಲ ಕೃಷ್ಣ ಗೋಖಲೆ

ಅವರ

## ಜೀವನ ಚರಿತ್ರೆ, ಉಪನ್ಯಾಸ ಸಂಗ್ರಹ
## ಮತ್ತು ಗುಣಕೀರ್ತನ

ಡಿ. ವಿ. ಗುಂಡಪ್ಪನವರಿಂದ



ಕರ್ಣಾಟಕ ಪ್ರಕಟನಾಲಯ
ಬಸವನಗುಡಿ ಪೋಸ್ಟ್, ಬೆಂಗಳೂರು

## ಈ ಲೇಖಕರ ಇತರ ಗ್ರಂಥಗಳು

---

**ಕವಿತೆ :**

ವಸಂತ ಕುಸುಮಾಂಜಲಿ

ನಿವೇದನ

ಉಮರನ ಒಸಗೆ

**ನಾಟಕ :**

ವಿದ್ಯಾರಣ್ಯ ವಿಜಯ

ತಿಲೋತ್ತಮೆ

ಕನಕಾಲುಕಾ

**ಜೀವನ ಚರಿತ್ರೆ :**

ದಿವಾನ್ ರಂಗಾಚಾರ್ಲು

ವಿದ್ಯಾರಣ್ಯರ ಚರಿತ್ರೆ ಮತ್ತು ಕಾಲ

ವಿದ್ಯಾರಣ್ಯರ ಸಮಕಾಲೀನರು

**ಇತರ :**

ಜೀವನಸೌಂದರ್ಯ ಮತ್ತು ಸಾಹಿತ್ಯ

ವೃತ್ತಪತ್ರಿಕೆಗಳು

—ಮೊದಲಾದುವು.



ಪ್ರಥಮ ಮುದ್ರಣ ೧೯೧೫
ಆರನೆಯ ,, ೧೯೩೦
ಏಳನೆಯ ಮುದ್ರಣ ೧೯೩೩

# ಮುನ್ನುಡಿ

ಈ ಸಾರಿಯ ಪುನರ್ಮುದ್ರಣಾವಕಾಶವು ಮೈಸೂರಿನ ವಿದ್ಯಾಪ್ರಚಾರದ ಇಲಾಖೆಯ ಆದರಣೆಯಿಂದ ದೊರೆತದ್ದು. ಇದಕ್ಕಾಗಿ ಆ ಇಲಾಖೆಯ ಅಧಿಕಾರಿಗಳಿಗೆ ಮತ್ತೊಮ್ಮೆ ಮನಃಪೂರ್ವಕವಾದ ವಂದನೆಗಳು.

ಹೀಗೆಂದ ಮೇಲೆ, ಕೇವಲ ಮಹಾಜನಾಶ್ರಯದಿಂದಲೇ ಬದುಕುವ ಯೋಗವು ಇಂಥಾ ಪುಸ್ತಕಗಳಿಗೆ ಕನ್ನಡ ನಾಡಿನಲ್ಲಿ ಇನ್ನೂ ಬಂದಿಲ್ಲವೆಂದು ಹೇಳಿದ ಹಾಗಾಯಿತು. ಅಂಥಾ ಕಾಲ ಬರುವವರೆಗೂ ಈ ಗ್ರಂಥವನ್ನು ಮತ್ತಷ್ಟು ವಿಷಯಪೂರ್ಣವನ್ನಾಗಿ ಮಾಡುವ ಆಶೆಗೆ ಎಡೆಯಿರದು. ಕಳೆದ ನಾಲ್ಕೈದು ವರ್ಷಗಳಲ್ಲಿ ಗೋಖಲೆಯವರ ಜೀವಿತ ಕಥೆಗೆ ಸಂಬಂಧಪಟ್ಟು ಸ್ವಾರಸ್ಯಕರವೂ ಬೋಧಪ್ರದವೂ ಆಗಿರುವ ಅನೇಕ ವಿಷಯಗಳು ಲೇಖಕನಿಗೆ ದೊರೆತಿವೆ. ಅವುಗಳನ್ನು ಸೇರಿಸಿ ಪುಸ್ತಕವನ್ನು ಬೆಳಸಿದರೆ ಅದರ ಗಾತ್ರವೂ ಬೆಲೆಯೂ ಪಾಠಶಾಲಾ ವಿದ್ಯಾರ್ಥಿಗಳ ದರ್ಜೆಗೆ ಮೀರಿಹೋಗಿ, ಅದಕ್ಕೆ ತಗುಲಿದ ವೆಚ್ಚವು ಪ್ರಕಟನ ಕರ್ತರ ಹೆಗಲಿಗೆ ಹೊರೆಯಾಗಿ ನಿಂತೀತು. ಇಂಥಾ ಭಯದ ನಿವಾರಣೆಯು ಮಹಾಜನರಿಂದ ಆಗಬೇಕಾಗಿದೆ.

ಹಿಂದಣ (ಆರನೆಯ) ಮುದ್ರಣದ ಪ್ರತಿಗೂ ಇದಕ್ಕೂ ವಿಷಯದಲ್ಲಿ ವ್ಯತ್ಯಾಸವೇನೂ ಇಲ್ಲ. ವಾಕ್ಯಶುದ್ಧಿಗೋಸ್ಕರ ಇಲ್ಲೊಂದು ಅಲ್ಲೊಂದು ಅಕ್ಷರವನ್ನು ಅಥವಾ ಪದವನ್ನು ತಿದ್ದಿದೆ. ಆದರೆ ಸಂಗತಿಗಳಲ್ಲಿ ಹೆಚ್ಚು ಕಡಮೆಯೇನೂ ಆಗಿಲ್ಲ.

ಕೆಲವು ಕನ್ನಡ ಮಾತುಗಳು ಎರಡು ಮೂರು ರೂಪಗಳಲ್ಲಿ ಉಪಯೋಗವಾಗಿವೆ :— "ನಡಸು, ನಡಿಸು, ನಡೆಸು" : "ಕಡಮೆ, ಕಡಿಮೆ" ;—ಇಂಥವು. ಈ ಮಾತುಗಳ ಶುದ್ಧ ರೂಪವು ಇದೊಂದೇ ಸರಿಯೆಂಬ ನಿಷ್ಕರ್ಷೆ ಇನ್ನೂ ಪಂಡಿತರೊಳಗೇ ಆಗಿರುವಂತಿಲ್ಲ. ಈ ಲೇಖಕನು ಜನಸಾಮಾನ್ಯವನ್ನೇ ಹೆಚ್ಚಾಗಿ ನಂಬಿಕೊಂಡಿರತಕ್ಕವನಾದ ಕಾರಣ, ಅವರಲ್ಲಿ ರೂಢಿಯಾಗಿ ನಿಂತು ಪಂಡಿತವರ್ಗದಿಂದ ಪೂರ್ತಿ ತಿರಸ್ಕೃತವಾಗದೆ ಇರತಕ್ಕ ಎರಡು ಮೂರು ರೂಪಗಳನ್ನೂ ಅವನು ಸದ್ಯಕ್ಕೆ ಸರಿಯೆಂದು ಅಂಗೀಕರಿಸಿದ್ದಾನೆ.

ಗ್ರಂಥದ ಮುಂದಿನ ಪರಿಷ್ಕಾರಕ್ಕೆ ತಕ್ಕ ಸೂಚನೆಗಳನ್ನು ಅನುಗ್ರಹಿಸುವ ಅಭಿಮಾನಿಗಳಿಗೆ ಅವನು ಕೃತಜ್ಞನಾಗಿರುವನು.

ಬೆಂಗಳೂರು ಸಿಟಿ,<br>ಜೂನ್, ೧೯೩೩.

ಡಿ. ವಿ. ಜಿ.

# ವಿಷಯಾನುಕ್ರಮಣಿಕೆ

## ಜೀವನ ಚರಿತ್ರೆ

## ಉಪನ್ಯಾಸ ಸಂಗ್ರಹ

## ಗುಣಕೀರ್ತನೆ . .



## ಭಾವ ಚಿತ್ರಗಳು



ಗೋಖಲೆಯವರ ಮುಖ್ಯ ಗುರು

**ಮಹಾದೇವ ಗೋವಿಂದ ರಾನಡೆ**



ಗೋಖಲೆಯವರ ಆಚಾರ್ಯರು

**ದಾದಾಭಾಯಿ ನವರೋಜಿ**

# ಗೋಖಲೆಯವರ ಜೀವಿತದ ಮುಖ್ಯ ಸಂಗತಿಗಳ

## ಕಾಲಾನುಕ್ರಮ

| | |
|---|---|
| ಜನನ .. .. .. (ಕ್ರಿಸ್ತವರ್ಷ) | ೧೮೬೬ |
| ಬಿ.ಎ. .. .. .. .. | ೧೮೮೪ |
| ಉಪಾಧ್ಯಾಯ ವೃತ್ತಿ<br>ಸಾರ್ವಜನಿಕ ಸಭಾ ಕಾರ್ಯದರ್ಶಿತ್ವ .. | ೧೮೮೫ |
| ಕಾಂಗ್ರೆಸ್ ಸ್ವಾಗತ ಕಾರ್ಯದರ್ಶಿತ್ವ .. .. | ೧೮೯೫ |
| ಇಂಗ್ಲೆಂಡಿಗೆ ಪ್ರಥಮ ಪ್ರಯಾಣ .. .. | ೧೮೯೭ |
| ಬೊಂಬಾಯಿ ಶಾಸನ ಸಭೆ .. .. .. | ೧೮೯೯ |
| ಉಪಾಧ್ಯಾಯತನದಿಂದ ವಿಶ್ರಾಂತಿ<br>ಇಂಡಿಯಾ ಶಾಸನ ಸಭೆ .. .. | ೧೯೦೨ |
| ಪೂನಾ ಪೌರಸಂಸ್ಥಾಧ್ಯಕ್ಷತೆ<br>ಭಾರತದೇಶ ಸೇವಕ ಸಂಘ<br>ಜನಪದ ಸಭಾಧ್ಯಕ್ಷತೆ .. .. | ೧೯೦೫ |
| ಇಂಗ್ಲೆಂಡಿನಲ್ಲಿ ಮಾರ್ಲೀಯವರ ಭೇಟಿ .. .. | ೧೯೦೮ |
| ಮಿಂಟೋ-ಮಾರ್ಲೀ ಸಂಸ್ಕಾರಗಳು .. .. | ೧೯೦೯ |
| ರಾನಡೆ ಸ್ಮಾರಕ ಸಂಸ್ಥೆ .. .. .. | ೧೯೧೦ |
| ಬಾಲ್ಯ ವಿದ್ಯಾಶಾಸನ .. .. .. | ೧೯೧೧ |
| ದಕ್ಷಿಣ ಆಫ್ರಿಕಾ ಪ್ರಯಾಣ .. .. .. | ೧೯೧೨ |
| ಮರಣ .. .. . .. | ೧೯೧೫ |

ಬುದ್ಧಿರಾದು ಬುದ್ಧಿರಾದು !
ಪೆದ್ದುಲ ಸುದ್ದುಲ ವಿನಕ ||

**—ತ್ಯಾಗರಾಜ**

---

ನಿಂದಂತು ನೀತಿ ನಿಪುಣಾ ಯದಿ ವಾ ಸ್ತುವಂತು |
ಲಕ್ಷ್ಮೀಸ್ಸಮಾವಿಶತು ಗಚ್ಛತು ವಾ ಯಥೇಷ್ಟಂ ||
ಅದ್ಯೈವ ವಾ ಮರಣಮಸ್ತು ಯುಗಾಂತರೇ ವಾ |
ನ್ಯಾಯ್ಯಾತ್ಪಥಃ ಪ್ರವಿಚಲಂತಿ ಪದಂ ನ ಧೀರಾಃ ||

**—ಭರ್ತೃಹರಿ**

---

ಜ್ಞಾನಿನಾ ಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕಂ ||

**—ಶ್ರೀ ವಿದ್ಯಾರಣ್ಯ**

---

*Public life must be spiritualised.*
ಸಾರ್ವಜನಿಕ ಜೀವನವನ್ನು ಧರ್ಮಾಚರಣೆಯನ್ನಾಗಿ ಮಾಡಬೇಕು.

**—ಗೋಖಲೆ**

# ಗೋಪಾಲ ಕೃಷ್ಣ ಗೋಖಲೆ

## ಪ್ರಕರಣ ೧ — ಅವತರಣಿಕೆ

### ರಾಜ್ಯ ವಿಚಾರದ ಮಹತ್ತ್ವ—ರಾಜ್ಯಕಾರ್ಯಕರ್ತ ಮತ್ತು ಕವಿ

ಶ್ರೀ ಗೋಪಾಲ ಕೃಷ್ಣ ಗೋಖಲೆಯವರು ನಮ್ಮ ದೇಶದ ರಾಜಕೀಯ ತಪಸ್ವಿಗಳಲ್ಲಿ ಅತ್ಯಂತ ಪೂಜ್ಯರಾದೊಬ್ಬರು. ತಪಸ್ಸೆಂದರೆ ಯಾವುದಾದ ರೊಂದು ಮಹೋದ್ದೇಶಕ್ಕಾಗಿ ಜೀವಿತ ಸರ್ವಸ್ವವನ್ನೂ ತೆತ್ತು, ತದೇಕ ಧ್ಯಾನದಿಂದ ಶ್ರಮಿಸುತ್ತಿರುವುದಲ್ಲವೆ? ಯಾರು ಸ್ವದೇಶದ ಸುಸ್ಥಿತಿಗೆ ರಾಜ್ಯವ್ಯವಸ್ಥೆಯ ಪರಿಷ್ಕಾರವು ಪ್ರಥಮ ಸಾಧನವೆಂಬುದನ್ನು ಕಂಡು ಕೊಂಡು, ಆ ಒಂದು ಉದ್ದೇಶಕ್ಕಾಗಿಯೇ ತಮ್ಮ ಎಲ್ಲ ಶಕ್ತಿಗಳನ್ನೂ ವಿನಿಯೋಗಿಸಿ, ಚಿತ್ತೈಕಾಗ್ರ್ಯದಿಂದ ನಿರಂತರವಾಗಿ ಉದ್ಯಮಿಸಿರುವರೋ ಅಂಥವರನ್ನು ತಪಸ್ವಿಯೆಂದು ಕರೆಯುವುದಕ್ಕೆ ತಡೆಯೇನಿದ್ದೀತು?

ಲೋಕೋಪಕಾರಿಗಳಲ್ಲಿ ಅನೇಕ ವಿಧಗಳುಂಟಷ್ಟೆ? ಬಡವರಿಗೆ ಅನ್ನವಸ್ತ್ರಗಳನ್ನು ಕೊಡುವವರು ಕೆಲವರು; ರೋಗಿಗಳ ನೋವನ್ನು ಹೋಗಲಾಡಿಸುವವರು ಕೆಲವರು; ಭಯಪಟ್ಟವರಿಗೆ ಧೈರ್ಯವನ್ನೂ ಖಿನ್ನರಾದವರಿಗೆ ಉಲ್ಲಾಸವನ್ನೂ ಉಂಟುಮಾಡತಕ್ಕವರು ಕೆಲವರು; ತಿಳಿವಿಲ್ಲದವರಿಗೆ ತಿಳಿವು ಹೇಳತಕ್ಕವರು ಕೆಲವರು; ಅನ್ಯಾಯದಿಂದ ಸಂಕಟಪಡುತ್ತಿರುವವರಿಗೆ ನ್ಯಾಯವನ್ನು ದೊರಕಿಸಿಕೊಡಲು ಹೋರಾಡು ವವರು ಕೆಲವರು. ಕೆಲವರು ತಮ್ಮ ಧನ ಧಾನ್ಯಗಳನ್ನು ದಾನಮಾಡಿ ಇತರರ ಕಷ್ಟಗಳನ್ನು ಪರಿಹರಿಸುವರು; ಕೆಲವರು ತಮ್ಮ ದೇಹಶಕ್ತಿಯನ್ನು ವಿನಿಯೋಗಿಸಿ ಪರರಿಗೆ ಬಂದಿರುವ ಅಪಾಯವನ್ನು ತಪ್ಪಿಸುವರು; ಕೆಲವರು ತಮ್ಮ ಪಾಂಡಿತ್ಯ ಕಲಾಕೌಶಲಗಳಿಂದ ಜನರ ಬುದ್ಧಿ ಮನಸ್ಸುಗಳನ್ನು

ವಿಕಾಸಗೊಳಿಸಿ ಅವರ ಭಾವನೆಗಳನ್ನು ಉನ್ನತಪಡಿಸುವರು; ಕೆಲವರು ತಮ್ಮ ಲೌಕಿಕ ಪ್ರಜ್ಞೆಯಿಂದಲೂ ಯುಕ್ತಾಯುಕ್ತ ವಿವೇಚನೆಯಿಂದಲೂ ದೂರದೃಷ್ಟಿಯಿಂದಲೂ ಜನಪದ ವ್ಯವಸ್ಥೆಯನ್ನೂ ರಾಜ್ಯಕಾರ್ಯ ವಿಧಾನ ಗಳನ್ನೂ ಪದೇ ಪದೇ ಪರೀಕ್ಷಿಸಿ, ಅವುಗಳಿಂದ ಪ್ರಜೆಗಳಿಗೆ ಅನುಕೂಲ್ಯಗಳು ಹೆಚ್ಚಿ ನಿರ್ಬಂಧಗಳು ಕಡಿಮೆಯಾಗುವಂತೆ ಮಾಡಿಸುವರು. ಹೀಗೆ, ಬಗೆ ಬಗೆಯಾಗಿರುವ ಉಪಕಾರಗಳಲ್ಲಿ ತಾತ್ಕಾಲಿಕವಾದುವು ಕೆಲವು, ಬಹುಕಾಲ ನಿಲ್ಲಬಲ್ಲುವು ಕೆಲವು; ನಾಲ್ಕಾರುಮಂದಿ ವ್ಯಕ್ತಿಗಳಿಗೆ ಮಾತ್ರ ಸೇರತಕ್ಕವು ಕೆಲವು, ಬಹುಜನ ಸಮುದಾಯಕ್ಕೆ ವ್ಯಾಪಿಸಬಲ್ಲುವು ಕೆಲವು; ಜನರ ಬಾಹ್ಯ ಸ್ಥಿತಿ ಸಂದರ್ಭಗಳನ್ನು ಸರಿಪಡಿಸತಕ್ಕುವು ಕೆಲವು, ಅವರ ಅಂತರಂಗ ವನ್ನು ಉತ್ತಮಗೊಳಿಸಬಲ್ಲುವು ಕೆಲವು.

ಎಲ್ಲ ತೆರದ ಉಪಕಾರಗಳಿಗೂ ಮೂಲಭೂತವಾದ ಕಾರ್ಯ ಕ್ಷೇತ್ರವು ರಾಜ್ಯಪರಿಷ್ಕಾರಕನದು. ಏಕೆಂದರೆ, ಎಲ್ಲ ತೆರದ ಜನರಿಗೂ ಬೇಕಾಗುವ ಎಲ್ಲ ತೆರದ ಸಹಾಯಗಳನ್ನೂ ಒದಗಿಸಿಕೊಡಬಲ್ಲ ಶಕ್ತಿಯು ರಾಜ್ಯಕ್ಕೆ, ಅಥವಾ ಸರಕಾರಕ್ಕೆ, ಇರುವಂತೆ ಯಾವ ಒಬ್ಬ ಮನುಷ್ಯನಿ ಗಾಗಲಿ, ಅಥವಾ ಕೆಲಮಂದಿಯ ಗುಂಪಿಗಾಗಲಿ, ಅಥವಾ ಬೇರೆ ಒಂದು ಸಂಸ್ಥೆಗೇ ಆಗಲಿ ಇರದು. ಎಲ್ಲ ವ್ಯಕ್ತಿಗಳನ್ನೂ ಎಲ್ಲ ಸಂಸ್ಥೆಗಳನ್ನೂ ಒಳಗೊಂಡು, ಎಲ್ಲಕ್ಕೂ ದೊಡ್ಡದೂ ಮೇಲ್ಪಟ್ಟುದೂ ಆಗಿರುವ ಸಂಸ್ಥೆ ಯಲ್ಲವೆ ರಾಜ್ಯವೆಂಬುದು? ಅಂತಹ ರಾಜ್ಯಸಂಸ್ಥೆಯನ್ನು ವಿಹಿತ ಮಾರ್ಗ ದಲ್ಲಿ ನಿಲ್ಲಿಸಿ, ಅದು ಕ್ರಮತಪ್ಪದೆ ಕೆಲಸ ನಡೆಸುವಂತೆ ನೋಡಿಕೊಳ್ಳಲು ಶ್ರಮಪಡುವ ಮಹಾಶಯನು ಎಲ್ಲರಿಗೂ ಬೇಕಾದ ಉಪಕಾರಿ. ಮರದ ಬೇರಿನ ಸತ್ತ್ವವು ಅದರ ಒಂದೊಂದು ಕೊಂಬೆಯಲ್ಲಿಯೂ, ಕಡ್ಡಿಯಲ್ಲಿಯೂ, ಎಲೆ ಹುವ್ವು ಹಣ್ಣುಗಳಲ್ಲಿಯೂ ಕೂಡ ಇರುವಂತೆ, ರಾಜ್ಯದ ಸತ್ತ್ವವು ಪ್ರಜೆಯ ಜೀವನದ ಪ್ರತಿಯೊಂದು ಭಾಗದಲ್ಲಿಯೂ ಪ್ರತಿಯೊಂದು ಅಂಶದಲ್ಲಿಯೂ ವ್ಯಾಪಿಸಿಕೊಂಡಿರುವುದು. ಕೆಲವರು ಇದನ್ನು ಒಂದೊಂದು ವೇಳೆ ಮರೆತು, "ರಾಜಕೀಯ ವಿಚಾರ ನಮಗೇಕೆ?"—ಎಂದು ಕೇಳುವು ದುಂಟು. ಸ್ವಲ್ಪ ವಿಮರ್ಶೆಮಾಡಿ ನೋಡಿದರೆ, ಜನಜೀವನದ ವಿಷಯಗಳಲ್ಲಿ

ರಾಜ್ಯದ ಸಂಬಂಧವಿಲ್ಲದ ಅಂಶವು ಒಂದೂ ಇಲ್ಲವೆಂಬುದು ಚೆನ್ನಾಗಿ ತೋರಿಬರುವುದು. ಹಳ್ಳಿ ಊರುಗಳಲ್ಲಿ ವಾಸವಾಗಿ, ಮನುಷ್ಯ ಸಮಾಜದಲ್ಲಿ ಸೇರಿಕೊಂಡು ಬದುಕುವವರಿಗೆಲ್ಲ ರಾಜ್ಯಸಂಸ್ಥೆಯ ಸಂಬಂಧವು ಒಂದು ತೆರದಲ್ಲಲ್ಲದಿದ್ದರೆ ಮತ್ತೊಂದು ತೆರದಲ್ಲಿ,—ಪ್ರತ್ಯಕ್ಷವಾಗಲ್ಲದಿದ್ದರೆ ಅಪ್ರತ್ಯಕ್ಷವಾಗಿ,—ಏವಂ ಚ ಅನಿವಾರ್ಯವಾಗಿ, ಇದ್ದೇ ಇರುವುದು. ಪಕ್ಷಿಯನ್ನು ಗಾಳಿಯೂ, ಮೀನನ್ನು ನೀರೂ ಸುತ್ತ ಮುತ್ತಿಕೊಂಡಿರುವಂತೆ, ರಾಜ್ಯ ಶಕ್ತಿಯು ಪ್ರಜೆಯನ್ನು ನಿರಂತರವೂ ಆವರಿಸಿಕೊಂಡಿರುವುದು. ಅದನ್ನು ತಪ್ಪಿಸಿಕೊಂಡು ಹೋಗುವುದು ಅವಧೂತ ಸಂನ್ಯಾಸಿಗಳ ವಿನಾ ಯಾರಿಗೂ ಸಾಧ್ಯವಲ್ಲ. ಹೀಗೆ ನಿರ್ಬಂಧವಾಗಿ ನಮ್ಮನ್ನು ಹಿಡಿದಿರುವ ರಾಜ್ಯಸಂಸ್ಥೆಯನ್ನು ಕೂಡಿದ ಮಟ್ಟಿಗೂ ಅನುಕೂಲಕರವಾದ ಸ್ಥಿತಿಯಲ್ಲಿಟ್ಟುಕೊಂಡಿರುವುದಕ್ಕೆ ಜಾಗರೂಕತೆಯಿಂದ ಶ್ರಮತೆಗೆದುಕೊಳ್ಳುವುದೊಂದೇ ನಮಗೆ ಇರತಕ್ಕ ಉಪಾಯ. ಯಾವಾತನು ಪ್ರಜೆಗಳ ಪರವಾಗಿ ನಿಂತು ಈ ಪ್ರಯತ್ನವನ್ನು ಸಂತತವಾಗಿ ವಿಚಾರಪರತೆಯಿಂದಲೂ ದೇಶಹಿತ ಬುದ್ಧಿಯಿಂದಲೂ ನಡಸುವನೋ ಅವನು ಜನರಿಗೆ ಎಲ್ಲವಿಧಗಳಲ್ಲಿಯೂ ಉಪಕಾರ ಮಾಡಿದವನಾಗುವನು.

ರಾಜ್ಯವೆಂಬುದು ಸಾವಿರಾರು ಕುಟುಂಬಗಳ ಸಮೂಹದಿಂದಾದ ಒಂದು ದೊಡ್ಡ ಕುಟುಂಬವೇ ತಾನೆ? ಈ ದೊಡ್ಡ ಕುಟುಂಬದ ಆಡಳಿತಗಳು ಸರಿಯಾಗಿಲ್ಲದೆ ಹೋದರೆ ಅದರಲ್ಲಡಗಿರುವ ಸಣ್ಣ ಕುಟುಂಬಗಳಿಗೆ ಸೌಖ್ಯವಿರಲಾರದು. ಎಲ್ಲಿ ರಾಜ್ಯದ ಕಟ್ಟುಪಾಡುಗಳು ಸಮರ್ಪಕವಾಗಿಲ್ಲವೋ ಅಲ್ಲಿ ಪ್ರಜೆಗಳ ಸ್ಥಿತಿಯೂ ಸಮರ್ಪಕವಾಗಿರದು. ರಾಜ್ಯಯಂತ್ರವು ಕೆಟ್ಟರೆ ಪ್ರಜಾಸೌಕರ್ಯಗಳಿಗೆ ಭಂಗವಾಗುವುದು. ಸರಕಾರದ ಆಡಳಿತಗಳು ಕ್ರಮ ತಪ್ಪಿದರೆ ಜನರ ಸುಖಸಂಪತ್ತುಗಳಿಗೆ ಕೊರತೆ ಬರುವುದಲ್ಲದೆ, ಅವರ ನೀತಿ ಸದ್ಗುಣಗಳಿಗೂ ಕೂಡ ಹಾನಿ ತಟ್ಟುವುದು ಖಂಡಿತ. ಪೊಲೀಸಿನವರ ಉಸ್ತುವಾರಿ ಕಡಿಮೆಯಾದರೆ ಕಳ್ಳತನ ತುಂಟತನಗಳು ಹೆಚ್ಚುವುದು ಸ್ವಾಭಾವಿಕವೇ ಅಲ್ಲವೆ ? ರಾಜ್ಯಾಧಿಕಾರಿಗಳು ಸುಳ್ಳುಗಾರರಾದರೆ, ಲಂಚ ತೆತ್ತು ಕಾರ್ಯಸಾಧನೆ ಮಾಡಿಕೊಳ್ಳತಕ್ಕ ಜನರು ಹೆಚ್ಚುವುದು ಸ್ವಾಭಾವಿಕವೇ ಅಲ್ಲವೆ ?

ಜನರ ಅಜ್ಞಾನವನ್ನೂ ದಾರಿದ್ರ್ಯವನ್ನೂ ಹೋಗಲಾಡಿಸಲು ರಾಜ್ಯವು ಪ್ರಯತ್ನಿಸದಿದ್ದರೆ, ಅವರು ವಿದ್ಯಾವಿಹೀನರೂ ದುರ್ಮಾರ್ಗಿಗಳೂ ಪಶುಸಮಾನರೂ ಆಗುವುದು ಸ್ವಾಭಾವಿಕವೇ ಅಲ್ಲವೆ? ಈ ರೀತಿ ನೋಡಿದರೆ, ರಾಜಕೀಯ ವ್ಯವಸ್ಥೆಯೇ ನಮ್ಮ ಎಲ್ಲ ನಯ ನೀತಿ ಗುಣ ಗೌರವಗಳಿಗೂ ಮೂಲವಾಗಿರುವುದು. ಇದೇ ಅರ್ಥವನ್ನೇ ಶ್ರೀಮದ್ರಾಮಾಯಣದ ಅಯೋಧ್ಯಾಕಾಂಡದಲ್ಲಿಯೂ ಶ್ರೀಮನ್ಮಹಾಭಾರತದ ಶಾಂತಿಪರ್ವದಲ್ಲಿಯೂ ಕಾಣಬಹುದು. ಅದನ್ನನುಸರಿಸಿಯೇ ಪ್ರಾಜ್ಞರು, ರಾಜ್ಯವೆಂಬುದು ಜನದ ಬಾಹ್ಯಜೀವನಾನುಕೂಲಕ್ಕೆ ಬೇಕಾದ ಏರ್ಪಾಟು ಮಾತ್ರವೇ ಅಲ್ಲವೆಂದೂ, ಅದು ಅವರ ನೀತಿ ಶಿಕ್ಷೆಗೂ ಆತ್ಮಸಂಸ್ಕಾರಕ್ಕೂ ಅವಶ್ಯವಾದ ಸಾಧನವೆಂದೂ ಹೇಳಿರುವರು. ಆ ಸಾಧನವನ್ನು ಯುಕ್ತವಾದ ರೀತಿಯಲ್ಲಿ ಕಾಪಾಡಿಕೊಳ್ಳುವುದು ಪ್ರಜೆಗಳ ಕರ್ತವ್ಯ. ಒಂದು ಕುಟುಂಬದ ಸೌಖ್ಯಕ್ಕೆ ಅದರಲ್ಲಿರತಕ್ಕವರೆಲ್ಲರೂ ಹೇಗೆ ಬಾಧ್ಯರೋ, ಒಂದು ರಾಜ್ಯದ ಸೌಖ್ಯಕ್ಕೆ ಹಾಗೆಯೇ ಅದರ ಪ್ರಜೆಗಳೆಲ್ಲರೂ—ಎಂದರೆ ಅವರಲ್ಲಿ ಪ್ರಬುದ್ಧರಾದವರೆಲ್ಲರೂ—ಬಾಧ್ಯರು. ಹೀಗೆ ರಾಜ್ಯದ ಕಾರ್ಯಗಳು ಕ್ರಮವಾಗಿ ನಡೆಯುವಂತೆ ಮಾಡಲು ಪ್ರತಿಯೊಬ್ಬ ಪ್ರಜೆಯೂ ಯಾವ ಯಾವ ಕರ್ತವ್ಯಗಳನ್ನು ನೆರವೇರಿಸಬೇಕಾಗಿರುವುದೋ ಅವುಗಳಿಗೆ ಪ್ರಜಾಧರ್ಮಗಳೆಂದು ಹೆಸರು. ಈ ಪ್ರಜಾಧರ್ಮದ ಸ್ವರೂಪವೂ ವಿವರವೂ ಭಾರತೀಯರಿಗೆ ಚೆನ್ನಾಗಿ ಅವಗಾಹನೆಗೆ ಬಾರದೆ, ಅದು ಅವರಲ್ಲಿ ವಿಶಾಲವಾಗಿ ಹರಡದೆ, ಇದ್ದ ಕಾಲದಲ್ಲಿ, ಆ ಧರ್ಮವನ್ನು ಅವರು ಮರೆಯಲಾಗದಂತೆ ಬೋಧಿಸಿ ತೋರಿಸಿಕೊಟ್ಟ ಮಹನೀಯರು ನಮ್ಮ ಕಥಾನಾಯಕರು.

ಇಂಡಿಯಾ ದೇಶದ ರಾಜ್ಯ ವ್ಯವಸ್ಥೆಯನ್ನು ಪರಿಶೋಧಿಸಿ ನೋಡಿ, ಅದರಲ್ಲಿಯ ನ್ಯೂನಾತಿರೇಕಗಳನ್ನು ತಿದ್ದಿ, ಅದು ಪ್ರಜೆಗಳ ಯೋಗಕ್ಷೇಮಗಳನ್ನು ತೃಪ್ತಿಕರವಾಗಿ ಸಾಧಿಸಿಕೊಡಲಾಗುವಂತೆ ಮಾಡಲು ಶ್ರಮಪಟ್ಟಿರುವವರಲ್ಲಿ ಗೋಖಲೆಯವರಿಗಿಂತಲೂ ಚತುರರೆಂದೂ ಸತ್ಯವ್ರತರೆಂದೂ ಸಾತ್ವಿಕರೆಂದೂ ಸಮರ್ಥರೆಂದೂ ದೂರದರ್ಶಿಗಳೆಂದೂ ಧೈರ್ಯಶಾಲಿಗಳೆಂದೂ ವಿಶಾಲ ಹೃದಯರೆಂದೂ ಪರಿಶುದ್ಧಚರಿತರೆಂದೂ ಎನ್ನಿಸಿಕೊಂಡಿರ

ತಕ್ಕವರು ಯಾರೂ ಇಲ್ಲ. ಮಹಾತ್ಮರೆಂದು ಪ್ರಖ್ಯಾತರಾಗಿರುವ ಶ್ರೀಮಾನ್ ಮೋಹನದಾಸ್ ಕರಮ್‌ಚಂದ್ ಗಾಂಧಿಯವರು ಗೋಖಲೆಯವರನ್ನು ತಮ್ಮ ಮುಖ್ಯ ರಾಜಕೀಯ ಗುರುವೆಂದೂ ದೇಶಕಾರ್ಯ ಪ್ರೇರಕರೆಂದೂ ಭಾವಿಸಿರುವರು. ಇಂತಹ ಮಹಾಪುರುಷರ ಜೀವನ ಚರಿತ್ರೆಯು ಎಷ್ಟು ಅಸಂಪೂರ್ಣವಾಗಿ ಬರೆಯಲ್ಪಟ್ಟಿದ್ದರೂ ಅದು ದೇಶಾಭಿಮಾನಿಗಳ ಆದರಣೆಗೆ ಪಾತ್ರವಾಗದೆ ಇರದು.

ಗೋಖಲೆಯವರ ರಾಜಕೀಯ ಕಾರ್ಯ ವಿಧಾನಗಳಿಗಿಂತ ನಮಗೆ ಮುಖ್ಯವಾದುವು ಅವರ ಸಾರ್ವಜನಿಕ ನೀತಿಗಳು. ರಾಜ್ಯ ವಿಚಾರದಲ್ಲಿ ಪ್ರವೃತ್ತನಾದವನ ಬಾಹ್ಯ ಸಂಧಾನ ಸಂವಿಧಾನಗಳು,—ರಣರಂಗದಲ್ಲಿ ಸೇನಾಪತಿಯಾದವನು ನಡಿಸುವ ತಂತ್ರೋಪಾಯಗಳಂತೆ,—ಪಕ್ಷ ಪ್ರತಿ ಪಕ್ಷಗಳ ಸಂದರ್ಭಗಳಿಗನುಸಾರವಾಗಿ ಆಗಿಂದಾಗ ಬದಲಾಯಿಸತಕ್ಕುವು. ಆದರೆ ಆತನಲ್ಲಿರಬೇಕಾದ ಅಂತರಂಗ ಧರ್ಮಗಳು ಎಲ್ಲ ವೇಳೆಗಳಲ್ಲಿಯೂ ಒಂದೇ ರೀತಿ ಅಪೇಕ್ಷಣೀಯವಾದುವು. ಇಂಡಿಯಾ ದೇಶವು ಈಗ ನಿಸ್ಸಂದೇಹವಾಗಿ ಪ್ರಜಾವಿಹಿತವಾದ ರಾಜ್ಯ ವ್ಯವಸ್ಥೆಯ ಕಡೆಗೆ ಮುಂಬರಿಯುತ್ತಿದೆ. ಹೋಗ ಹೋಗುತ್ತ ನಮ್ಮ ರಾಜಕೀಯ ಪ್ರಸಂಗದಲ್ಲಿ ಪರಿಪರಿಯ ಮನಸ್ಸುಗಳೂ ಪರಿ ಪರಿಯ ಧ್ವನಿಗಳೂ ಹೆಚ್ಚುಹೆಚ್ಚಾಗಿ ಸೇರುತ್ತವೆ. ಹಾಗೆ ಅವು ಸೇರಿದಂತೆಲ್ಲ ನಮಗೆ ಗೋಖಲೆಯವರ ಗುಣಗಳು ಹೆಚ್ಚು ಹೆಚ್ಚಾಗಿ ಬೇಕೆನ್ನಿಸುತ್ತವೆ. ಯಾವ ಉದಾತ್ತ ಸಂಕಲ್ಪ, ಯಾವ ನಿರ್ಮಲ ಹೃದಯ, ಯಾವ ಕ್ಷಮೆ ಮತ್ತು ನಯ, ಯಾವ ನಿಷ್ಪಕ್ಷಪಾತತೆ ಮತ್ತು ನ್ಯಾಯ ತತ್ಪರತೆ, ಯಾವ ವಿಚಾರ ಶ್ರದ್ಧೆ, ಮತ್ತು ಯಾವ ನಿರ್ಮತ್ಸರವೂ ನಿರುದ್ವೇಗವೂ ಆದ ನಿರ್ಣಯ ಬುದ್ಧಿ—ಇವುಗಳಿಗೆ ಗೋಖಲೆಯವರು ಆದರ್ಶಪ್ರಾಯರಾಗಿದ್ದರೋ ಆ ಗುಣಗಳು ನಮ್ಮ ಪ್ರಜಾನಾಯಕರಲ್ಲಿಯೂ ದೇಶಕಾರ್ಯ ಕರ್ತರಲ್ಲಿಯೂ ನೆಲೆಗೊಳ್ಳದೆ ಹೋದರೆ, ನಮಗೆ ಸ್ವರಾಜ್ಯ ಲಾಭವಾಗುವುದು ಕಷ್ಟ; ಅದು ಲಭಿಸಿದರೂ ಕ್ಷೇಮಕರವಾಗಿಯೂ ಶಾಶ್ವತವಾಗಿಯೂ ನಡೆಯುವುದು ಅತಿ ಕಷ್ಟ.

ರಾಜ್ಯಸಂಶೋಧಕನ ಕಾರ್ಯವು ವಿವಿಧೋಪಕಾರಾತ್ಮಕವಾದು ದೆಂದು ಹೇಳಿದೆವಲ್ಲವೆ? ಅವನು ಮಾಡುವ ಪ್ರಯತ್ನಗಳು ಸಾರ್ಥಕವಾಗ ಬೇಕಾದರೆ ಎಲ್ಲ ಬಗೆಯ ಉಪಕಾರಿಗಳ ಗುಣವಿಶೇಷಗಳೂ ಅವನಲ್ಲಿ ಕಲೆ ತಿರಬೇಕು. ದಾನಶೀಲನಂತೆ ಅವನು ದೀನರಲ್ಲಿ ಕನಿಕರವುಳ್ಳವನಾಗಿರಬೇಕು; ಶತ್ರುಪಕ್ಷಕ್ಕೆ ಹೆದರದ ಶೂರನಂತೆ ಅವನು ಧೈರ್ಯಶಾಲಿಯಾಗಿರಬೇಕು; ವಿಜ್ಞಾನಶೋಧಕನಂತೆ ಅವನು ಸತ್ಯಾಂಶವನ್ನು ಹುಡುಕಿ ತೆಗೆಯುವುದರಲ್ಲಿ ಪ್ರಮಾಣಪರನಾಗಿರಬೇಕು; ಪಂಡಿತನಂತೆ ಅವನು ಜ್ಞಾನಸಂಪಾದನ ನಿರತ ನಾಗಿಯೂ ಊಹಾಪೋಹ ಸಮರ್ಥನಾಗಿಯೂ ಇರಬೇಕು; ಕಲಾ ಕುಶಲ ನಂತೆ ಅವನು ಮಾನುಷಸ್ವಭಾವ ಸೂಕ್ಷ್ಮಜ್ಞನಾಗಿಯೂ ಭಾವಪ್ರಕಾಶನ ಚತುರನಾಗಿಯೂ ಇರಬೇಕು; ಕವಿಯಂತೆ ಅವನು ಉದಾತ್ತ ಮನಸ್ಕ ನಾಗಿ, ಉದಾರಿಯಾಗಿ ಎಲ್ಲರ ಅಂತರಂಗ ಧರ್ಮಗಳನ್ನೂ ತನ್ನ ಹೃದಯ ದೊಳಗೇ ಅನುಭವಿಸಬಲ್ಲವನಾಗಿರಬೇಕು.

ತತ್ತ್ವವನ್ನರಸಿ ನೋಡಿದರೆ, ಕವಿಗೂ ರಾಜ್ಯಪರಿಷ್ಕಾರಕನಿಗೂ ಅನೇಕ ವಿಷಯಗಳಲ್ಲಿ ಸಾಮ್ಯ ತೋರುತ್ತದೆ. ಮಹಾಕವಿಯು ತನ್ನ ಸುತ್ತಮುತ್ತಲೂ ಇಲ್ಲದಿರುವ ಉತ್ತಮ ಲೋಕವೊಂದನ್ನು ತನ್ನ ಮನಸ್ಸಿನಲ್ಲಿಯೇ ಸೃಷ್ಟಿಮಾಡಿಕೊಳ್ಳುತ್ತಾನೆ; ರಾಜ್ಯವಿಚಾರಕರ್ತನು ದೇಶದಲ್ಲಿ ಸದ್ಯಃ ಕಾಣಬಾರದಿರುವ ಉತ್ತಮಸ್ಥಿತಿಯೊಂದನ್ನು ತನ್ನಲ್ಲಿ ಭಾವಿಸಿಕೊಳ್ಳುತ್ತಾನೆ. ಕವಿಯ ಆ ಸೃಷ್ಟಿಗೆ ಅವನ ಲೋಕ ಹಿತಚಿಂತ ನೆಯೇ ಮೂಲಕಾರಣ; ರಾಜ್ಯವಿಚಾರಕರ್ತನಿಗೂ ಹಾಗೆಯೇ. ಕವಿಯು ತನ್ನ ಪ್ರಪಂಚದಲ್ಲಿಯ ವ್ಯಾಪಾರಗಳಿಗೆ ತಕ್ಕಂತೆ ಪಾತ್ರಗಳನ್ನು ನಿರ್ಮಿಸಿ, ಅವರನ್ನು ತಕ್ಕ ಸಂದರ್ಭಗಳಲ್ಲಿ ನಿಲ್ಲಿಸಿ, ಅವರಿಂದ ತಕ್ಕ ನಡೆ ನುಡಿಗಳನ್ನು ಆಡಿಸುವುದರಲ್ಲಿ ಜಾಣತನವನ್ನೂ ಯುಕ್ತಿಯನ್ನೂ ತೋರಿಸುತ್ತಾನೆ. ರಾಜ್ಯ ಸಂಸ್ಕಾರನು ತನ್ನ ಮನಸ್ಸಿನಲ್ಲಿರುವ ಉತ್ತಮ ಸಂಕಲ್ಪಕ್ಕೆ ಬೇಕಾದಂತೆ ಸಾಧನ ಸಾಮಗ್ರಿಗಳನ್ನು ಕಲ್ಪಿಸಿಕೊಂಡು, ಜನರ ಅಭಿಪ್ರಾಯ ಗಳನ್ನು ತಿದ್ದಿ, ಹೊಸ ಸನ್ನಿವೇಶಗಳನ್ನು ಉಂಟುಮಾಡಿಸುವುದರಲ್ಲಿ ಜಾಣ್ಮೆಯನ್ನೂ ಸಾಹಸವನ್ನೂ ತೋರಿಸುತ್ತಾನೆ. ಕವಿಯ ಕೆಲಸವು

ಸರಿಯಾಗಿ ನಡೆಯುವುದಕ್ಕೆ ಪ್ರಪಂಚ ಪರಿಸ್ಥಿತಿಯ ಜ್ಞಾನವೂ ಪ್ರತಿಭೆಯೂ ಲೋಕಕಾರುಣ್ಯವೂ ನ್ಯಾಯೈಕಪಕ್ಷಪಾತಿತ್ವವೂ ಆವಶ್ಯಕ ; ಈ ಗುಣಗಳಿಲ್ಲ ದಿದ್ದರೆ ರಾಜ್ಯವಿಚಾರಕರ್ತನಿಂದಲೂ ಯಾರಿಗೂ ಮೇಲಾಗದು. ಕವಿಯು ಜನರಿಗೆ ರಸಾನುಭವಮಾಡಿಸಿ ಅವರ ಮನಸ್ಸಿನಲ್ಲಿ ಉಚ್ಚ ಭಾವನೆಗಳಿಗೆ ಅವಕಾಶವನ್ನುಂಟಾಗಿಸುತ್ತಾನೆ ; ರಾಜ್ಯ ಸಂಸ್ಕಾರಕರ್ತನು ಪ್ರಜೆಗಳಿಗೆ ಉತ್ತಮ ಜೀವನವು ಸಾಧ್ಯವಾಗುವಂತೆಮಾಡಿ ಅವರ ಶಾಂತಿ ಸೌಜನ್ಯಗಳ ಅಭಿವೃದ್ಧಿಗೆ ಅವಕಾಶವನ್ನುಂಟುಮಾಡುತ್ತಾನೆ. ಮುಖ್ಯವಾಗಿ, ಯಾವ ಜೀವನ ಸೌಂದರ್ಯವೂ ಯಾವ ಸುಗುಣ ಸೌಭಾಗ್ಯವೂ ಮಹಾಕವಿ ಯಾದವನ ದಿವ್ಯ ದೃಷ್ಟಿಗೆ ಅತಿಶಯವಾಗಿ ಗೋಚರಿಸುವುವೋ ಅವು ಗಳನ್ನೇ—ಆ ಉದಾತ್ತ ಸ್ಥಿತಿಯನ್ನೇ, ಆ ಸಾತ್ವಿಕ ಸಂಪತ್ತನ್ನೇ, ಆ ಸಾಧುವೃತ್ತಿ ಸೌಕರ್ಯಗಳನ್ನೇ—ಸ್ವಲ್ಪ ಸ್ವಲ್ಪವಾಗಿಯಾದರೂ ಜನರಿಗೆ ಸಾಕ್ಷಾತ್ತಾಗಿ ಒದಗಿಸಿಕೊಡಲು ರಾಜ್ಯ ಸಂಸ್ಕಾರಿಯು ತನ್ನ ಕಾರ್ಯ ಚಾತುರ್ಯದಿಂದ ಪ್ರಯತ್ನಿಸುವನು.

"ಕವಿಯು ಮಾಡುವ ಕೆಲಸವು ಚಿರಕಾಲ ನಿಲ್ಲತಕ್ಕುದು, ರಾಜ್ಯ ಪರಿಷ್ಕಾರಕನ ಕೆಲಸವು ತಾತ್ಕಾಲಿಕವಾದುದು,"—ಎಂದು ಹೇಳಲಾಗು ವುದಿಲ್ಲ. ಜಗತ್ತಿನ ಗ್ರಂಥರಾಶಿಯಲ್ಲಿ ಜನರ ಆದರಣೆಗೆ ಎಲ್ಲ ಕಾಲಗಳಲ್ಲಿಯೂ ಒಂದೇ ರೀತಿ ಪಾತ್ರವಾಗಿರುವ ಕಾವ್ಯಗಳು ಕೆಲವು ಮಂದಿ ಮಹಾಕವಿ ಗಳವು ಮಾತ್ರವೇ ; ಉಳಿದ ಎಷ್ಟೋ ಮಂದಿ ಕವಿಗಳ ಕಗ್ಗಗಳು ಜನರಿಗೆ ಮರೆತುಹೋಗಿ, ಅವರ ಹೆಸರುಗಳು ಕೂಡ ಬಹು ಮಂದಿಗೆ ಅಳಿಸಿಹೋದಂ ತಿವೆ. ಅದರಂತೆಯೇ ರಾಜ್ಯನೀತಿಗಳನ್ನು ವಿಮರ್ಶಿಸಿ ಪರಿಪಾಲಿಸಿದವರಲ್ಲಿ ಅತಿ ಶ್ರೇಷ್ಠರಾದವರ ಹೆಸರುಗಳು ಕಾಲದ ದೆಸೆಯಿಂದ ಚ್ಯುತಿಹೊಂದದೆ ಸಕಲ ದೇಶ ಸಂಮಾನ್ಯವಾಗಿರುತ್ತವೆ. ಅವರಲ್ಲಿ ಸಾಮಾನ್ಯರಾದವರು ಮಾತ್ರ ತಮ್ಮ ಜೀವಮಾನದಲ್ಲಿ ಬಂದ ಪ್ರಾಶಸ್ತ್ಯದಿಂದಲೇ ಸಂತುಷ್ಟ ರಾಗಬೇಕಾಗಿರುವುದು. ಕ್ರಾಮ್‌ವೆಲ್, ಗ್ಲ್ಯಾಡ್‌ಸ್ಟನ್, ಮೆಜ್ಜಿನಿ, ಕವೂರ್, ಬಿಸ್ಮಾರ್ಕ್, ಟುರ್ಗೋ, ಗ್ಯಾಂಬೆಟ, ಲಿಂಕನ್, ದಾದಾಭಾಯಿ ನವರೋಜಿ, ರಂಗಾಚಾರ್ಲು—ಮುಂತಾದ ರಾಜ್ಯಪರಿಷ್ಕಾರಕರ ಹೆಸರುಗಳು

ಶಾಶ್ವತವಾಗಿ ತಮ್ಮ ತಮ್ಮ ದೇಶಗಳ ಚರಿತ್ರೆಯಲ್ಲಿ ಪ್ರಸಿದ್ಧವಾಗಿರುವುದು ಮಾತ್ರವೇ ಅಲ್ಲದೆ, ಸಕಲ ಮಾನವಕುಲದ ಚರಿತ್ರೆಯಲ್ಲಿಯೂ ಗಣ್ಯವಾಗಿ ಬೆಳಗುವುವು.

ಕವಿಗೂ ರಾಜ್ಯಪರಿಷ್ಕಾರಕರ್ತನಿಗೂ ಮೇಲೆ ತೋರಿಸಿದಂತೆ ಪರಸ್ಪರ ಗಾಢವಾದ ಸಂಬಂಧವುಂಟೆಂಬುದನ್ನು ಸೂಚಿಸುವುದಕ್ಕೇ ಅಲ್ಲವೆ ನಮ್ಮ ಸೋಮೇಶ್ವರ ಕವಿಯು—"ಕವಿಯೇ ರಾಜನ ಕಣ್ಣಲ್ಲೆ" ಎಂದು ಹೇಳಿರುವುದು? ಅದೇ ಅರ್ಥವನ್ನೇ ಇನ್ನೊಂದು ದೃಷ್ಟಿಯಿಂದ "ಕವಿಗಂ ರಾಜನೆ ಕೈಯಲ್ಲೆ" ಎಂದು ಹೇಳಿದರೂ ತಪ್ಪಾಗದು. ದೇಶಾಭಿಮಾನವೆಂಬ ಮನೋಧರ್ಮವನ್ನು ಒಬ್ಬ ಮನುಷ್ಯನೆಂದು ನಾವು ಭಾವಿಸುವುದಾದರೆ, ಆ ವ್ಯಕ್ತಿಗೆ ಕವಿಯು ಕಣ್ಣಿನಂತೆಯೂ ರಾಜ್ಯತಂತ್ರ ಚತುರನು ಕೈಯಂತೆಯೂ ಇರುವರು. ಎಂದರೆ, ದೇಶಾಭಿಮಾನವು ಎಂತಹ ಮಾರ್ಗವನ್ನು ಹಿಡಿದರೆ ಹಿತಕಾರಿಯಾಗುವುದೆಂಬುದನ್ನು ಉತ್ತಮ ಕಾವ್ಯವು ತೋರಿಸುವುದು; ಆ ಮಾರ್ಗದಲ್ಲಿ ಜನರನ್ನು ನಡಿಸುವುದಕ್ಕೆ ಬೇಕಾಗುವ ಕಾರ್ಯ ಶಕ್ತಿಯನ್ನು ರಾಜ್ಯತಂತ್ರವು ಉಂಟುಮಾಡಿಕೊಡುವುದು. ಇದೇ ಅಭಿಪ್ರಾಯವನ್ನೇ ಮತ್ತೊಂದು ರೀತಿಯಲ್ಲಿ ಸೂಚಿಸಬಹುದು. ದೇಶದೇವತೆಗೆ ಮಹಾಕವಿಗಳೇ ಮಂತ್ರಪಾಠಕರು; ರಾಜ್ಯತಂತ್ರಜ್ಞರೇ ಅರ್ಚಕರು. ಅಥವಾ ಕಾವ್ಯವೇ ಆಕೆಯ ಧ್ವನಿ; ರಾಜ್ಯ ಪರಿಷ್ಕಾರವೇ ಆಕೆಯ ಅಂಗಾಂಗ ಪರಿಚಲನೆ. ದೇಶಲಕ್ಷ್ಮಿಯ ಒಂದು ಕೈಯಲ್ಲಿ ಕಾವ್ಯವೆಂಬ ಪುಷ್ಪವೂ ಇನ್ನೊಂದು ಕೈಯಲ್ಲಿ ರಾಜ್ಯಶಕ್ತಿಯೆಂಬ ಆಯುಧವೂ ಇರುವುವೆಂದಾದರೂ ಹೇಳಬಹುದು. ಕವಿಗೂ ರಾಜ್ಯತಂತ್ರ ಶೋಧಕರಿಗೂ ಇರತಕ್ಕ ಅನ್ಯೋನ್ಯಭಾವವು ಇಂತಹುದು. ಇದಕ್ಕೆ ನಿದರ್ಶನಗಳನ್ನು ನಾನಾದೇಶಗಳ ಚರಿತ್ರಗಳಲ್ಲಿ ಕಾಣಲಾಗುವುದು. ಒಂದೆರಡನ್ನು ನೆನಪಿಗೆ ತರುವುದಕ್ಕೆ ಮಾತ್ರ ಇಲ್ಲಿ ಸ್ಥಳ ತೆಗೆದುಕೊಳ್ಳಬಹುದು. ಇಂಗ್ಲೆಂಡಿನ ಪ್ರಸಿದ್ಧ ರಾಜ್ಯಸಂಸ್ಕಾರಕರ್ತನಾದ ಕ್ರಾಮ್‌ವೆಲ್ಲನೂ ಮಹಾಕವಿಯಾದ ಮಿಲ್ಟನ್ನನೂ ಸಹೋದ್ಯೋಗಿಗಳಾಗಿದ್ದವರು. ಆ ಪ್ರಜಾಪ್ರಮುಖನ ಮಹಿಮೆಯನ್ನು ಆ ಕವಿಯು ಕೊಂಡಾಡಿರುವನು; ಆ ಕವಿಯ ಪ್ರೇರಣೆ

ಅನುಮೋದನೆಗಳ ಬಲವು. ಆ ಪ್ರಜಾಪ್ರಮುಖನಿಗೆ ಅಮೋಘವಾಗಿದ್ದುವು. ಇಂಗ್ಲೆಂಡಿನ ಮತ್ತೊಬ್ಬ ರಾಜ್ಯತಂತ್ರ ಸಂಶೋಧಕನಾದ ಎಡ್ಮಂಡ್ ಬರ್ಕ್ ಮಹಾಶಯನು ತಾನೇ ಮಹಾಕವಿ ಪಂಕ್ತಿಯಲ್ಲಿಯೂ ಸೇರಿಸಲ್ಪಟ್ಟಿರುವನು. ಆ ದೇಶದ ಇನ್ನೊಬ್ಬ ಪ್ರಖ್ಯಾತ ರಾಜ್ಯತಂತ್ರಜ್ಞನಾದ ಗ್ಲಾಡ್‌ಸ್ಟನ್ನನು ಹೋಮರ್ ಮಹಾಕವಿಯ ಭಕ್ತನಾಗಿದ್ದನೆಂಬುದೂ, ಅದೇ ಇಂಗ್ಲೆಂಡಿನ ಲಾರ್ಡ್ ಮಾರ್ಲೀ ಮಂತ್ರಿಯು ಹಾಗೆಯೇ ಅನೇಕ ಮಹಾಕವಿಗಳ ಕೃತಿಗಳಿಂದ ಜೀವನ ರಹಸ್ಯವನ್ನು ತಿಳಿದುಕೊಂಡಿದ್ದವನೆಂಬುದೂ ಎಲ್ಲರಿಗೂ ತಿಳಿದ ವಿಷಯಗಳು. ಇಟಲಿಯ ಜಗತ್ಪ್ರಸಿದ್ಧ ದೇಶಭಕ್ತನೂ ರಾಜ್ಯ ಪರಿಶೋಧಕನೂ ಆದ ಮೆಜ್ಜಿನಿಯು ಡ್ಯಾಂಟೇ ಮಹಾಕವಿಯು ತೋರಿದ ಬೆಳಕಿನಿಂದ ತನ್ನ ಜೀವನ ಪಥವನ್ನು ಕಂಡು ಹೆಜ್ಜೆಯಿಡುತ್ತಿದ್ದನು. ಇದಕ್ಕೆ ಪ್ರತಿಯಾಗಿ, ಮಹಾಕವಿಗಳಾದ ವರ್ಡ್ಸ್ ವರ್ತ್, ಬೈರನ್, ಷೆಲ್ಲೀ, ಗಯ್‌ಟೆ—ಮುಂತಾದವರು ರಾಜ್ಯ ಪರಿಷ್ಕಾರ ವಿಚಾರಗಳನ್ನು ತಮ್ಮ ಕಾವ್ಯಗಳಲ್ಲಿ ತೆಗೆದುಕೊಂಡು, ಪ್ರಜಾಸ್ವಾತಂತ್ರ್ಯ ಪ್ರಜಾಭ್ಯುದಯಗಳ ವಿಚಾರದಲ್ಲಿ ತಮ್ಮ ಆಶೆ ಆಶಯಗಳನ್ನು ಸೂಚಿಸಿರುವರು. ನಮ್ಮ ದೇಶದಲ್ಲಿಯೂ ಸಹ ವಾಲ್ಮೀಕಿ ವ್ಯಾಸ ಕಾಳಿದಾಸರುಗಳು ತಮ್ಮ ಕಾವ್ಯಗಳಿಗೆ ರಾಜರನ್ನು ನಾಯಕರನ್ನಾಗಿಟ್ಟುಕೊಂಡು, ರಾಜಧರ್ಮ ಪ್ರಜಾಧರ್ಮಗಳನ್ನು ವಿಶೇಷವಾಗಿ ಪ್ರತಿಪಾದಿಸಿರುವರು. ನಮ್ಮ ರಾಜರುಗಳಾದರೋ, ಆರ್ಷೇಯ ಕಾಲದಿಂದ ಕವಿಪಂಡಿತರುಗಳನ್ನೇ ತಮ್ಮ ಮಂತ್ರಿಗಳನ್ನಾಗಿಯೂ ಉಪದೇಶಕರನ್ನಾಗಿಯೂ ಇಟ್ಟುಕೊಂಡಿರುತ್ತಿದ್ದರು. ವಿಜಯನಗರದ ಬುಕ್ಕ ರಾಜನು ವಿದ್ವತ್ಕವಿಗಳಾದ ಮಾಧವ-ವಿದ್ಯಾರಣ್ಯ ಸ್ವಾಮಿಗಳವರನ್ನೂ, ಮಹಾರಾಷ್ಟ್ರದ ಛತ್ರಪತಿ ಶಿವಾಜಿಯು ಕವಿಗಳಾದ ರಾಮದಾಸಸ್ವಾಮಿಗಳವರನ್ನೂ ರಾಜಕೀಯ ವಿಷಯಗಳಲ್ಲಿಯೂ ತಮ್ಮ ಮುಖ್ಯ ಗುರುಗಳನ್ನಾಗಿ ಇಟ್ಟುಕೊಂಡಿದ್ದರೆಂಬ ಸಂಗತಿಯು ಸರ್ವತ್ರ ವಿದಿತವಾಗಿದೆ.

ಪ್ರಕೃತ, ನಮ್ಮ ಕಥಾನಾಯಕರಾದ ಗೋಖಲೆಯವರು ರಾಜ್ಯ ಪರಿಷ್ಕಾರ ಕಾರ್ಯದಲ್ಲಿ ಪಡೆದ ಜಯಕ್ಕೂ ಖ್ಯಾತಿಗೂ ಅವರಲ್ಲಿದ್ದ ಕವಿ

ಸಹಜಗಳಾದ ಗುಣಗಳೇ ಬಹುಮಟ್ಟಿಗೆ ಕಾರಣಗಳೆಂಬುದಕ್ಕೆ ಸಂದೇಹವಿಲ್ಲ. ಅವರು ಸತ್ಕಾವ್ಯ ಪ್ರಿಯರಾಗಿ, ಅದರಿಂದ ತಮ್ಮ ಉದಾತ್ತಚಿತ್ತತೆಯನ್ನು ದೃಢಪಡಿಸಿಕೊಂಡಿದ್ದರು. ಅಷ್ಟೇ ಅಲ್ಲದೆ,—ಜನಜೀವನಕ್ಕೆ ಬೇಕಾದ ಶುಭ ಸೌಂದರ್ಯಗಳಾವುವೆಂಬುದನ್ನು ಕಂಡುಕೊಳ್ಳುವ ಪ್ರತಿಭೆ; ಅವುಗಳನ್ನು ಸಾಧಿಸುವ ಪ್ರಯತ್ನದಲ್ಲಿ ಉಜ್ಜ್ವಲವಾದ ಉತ್ಸಾಹ; ಅನ್ಯಾಯ ಕೃತ್ರಿಮಗಳ ಖಂಡನೆಯಲ್ಲಿ ವೀರಾವೇಶ; ಸಮಸ್ತ ಜನರ ವಿಷಯದಲ್ಲಿಯೂ ಆರ್ದ್ರಹೃದಯತೆ; ಸಂದರ್ಭ ಮರ್ಮಕ್ಕನುಗುಣವಾಗಿ, ನಿಜವನ್ನು ಮರೆಮಾಚದ ನಯವನ್ನೂ, ಗಾಂಭೀರ್ಯವನ್ನು ಬಿಡದ ರೋಷವನ್ನೂ ಪ್ರಕಾಶಪಡಿಸಬಲ್ಲ ತೇಜೋವಿಶಿಷ್ಟವಾದ ವಾಕ್ಯಶಕ್ತಿ—ಈ ಕವಿ ಲಕ್ಷಣಗಳು ಗೋಖಲೆಯವರ ಜೀವಿತ ಚರ್ಯೆಯಲ್ಲಿ ತುಂಬಿದ್ದುವು. ಆದುದರಿಂದ ಅವರ ವೃತ್ತಾಂತವು ದೇಶದ ರಾಜಕೀಯ ಚರಿತ್ರೆಯ ಒಂದು ಮುಖ್ಯ ಭಾಗದಂತೆ ಮಾತ್ರವೇ ಅಲ್ಲದೆ, ಪವಿತ್ರ ಭಾವನೆಗಳನ್ನು ಉಂಟಾಗಿಸಬಲ್ಲ ಒಂದು ಕಾವ್ಯದಂತೆಯೂ ಜನರ ವಿಶ್ವಾಸವನ್ನು ಅಪೇಕ್ಷಿಸತಕ್ಕುದಾಗಿದೆ.

---

## ಪ್ರಕರಣ ೨—ಜನ್ಮ, ಜೀವನವೃತ್ತಿ

ಮನೆತನ—ವಿದ್ಯಾಭ್ಯಾಸ—ಉದ್ಯೋಗ—ಫರ್ಗ್ಯುಸನ್ ಕಲಾಶಾಲೆ—ಭಾಷಾಜ್ಞಾನ—ಗಣಿತ ಚರಿತ್ರೆ ಅರ್ಥಶಾಸ್ತ್ರಗಳು—ವಿದ್ಯಾರ್ಥಿಗಳ ವಿಶ್ವಾಸ

ಶ್ರೀ ಗೋಪಾಲ ಕೃಷ್ಣ ಗೋಖಲೆಯವರು ೧೮೬೬ ನೆಯ ಇಸವಿ ಮೇ ೯ ರಲ್ಲಿ ಬೊಂಬಾಯಿ ಪ್ರಾಂತದ ರತ್ನಗಿರಿ ಜಿಲ್ಲೆಯ ಚಿಪ್ಲೂನ್ ತಾಲ್ಲೂಕಿನ ಕಟ್ಲುಕ್ ಎಂಬ ಹಳ್ಳಿಯಲ್ಲಿ ಹುಟ್ಟಿದರು.

ಅವರ ಹೆಸರಿನ ಮೂರು ಪದಗಳಲ್ಲಿ (೧) ಗೋಪಾಲ (ಅಥವಾ ಗೋಪಾಲರಾವ್) ಎಂಬುದು ಸ್ವಂತ ನಾಮಧೇಯ; (೨) ಕೃಷ್ಣ (ಅಥವಾ ಕೃಷ್ಣರಾವ್) ಎಂಬುದು ಅವರ ತಂದೆಯವರದು; (೩) ಗೋಖಲೆ ಎಂಬುದು ಮನೆತನಕ್ಕೆ ಒಂದುದು. ಈ ಮನೆತನದ ಹೆಸರನ್ನೇ ಮನೆಯ ಹೊರಗಡೆ ಸಾಮಾನ್ಯವಾಗಿ ಬಳಸುವುದು ಮಹಾರಾಷ್ಟ್ರರ ಪದ್ಧತಿ.

ಗೋಖಲೆಯವರು "ಚಿತ್ಪಾವನ್" ಎಂಬ ಮಹಾರಾಷ್ಟ್ರ ಬ್ರಾಹ್ಮಣ ಪಂಗಡಕ್ಕೆ ಸೇರಿದವರು. ಅವರ ಪೂರ್ವಿಕರಿಗೆ ಧೈರ್ಯಶಾಲಿಗಳೆಂದೂ ಸಾಹಸಪರರೆಂದೂ ಮಾನಿಷ್ಠರೆಂದೂ ಹೆಸರು ಬಂದಿತ್ತು; ಆದರೆ ಅವರಲ್ಲಿ ಯಾರೂ ಐಶ್ವರ್ಯವಂತರಾಗಲಿಲ್ಲ. ವಿಸ್ತಾರವಾದ ಸಂಸಾರದ ಭಾರವೂ ಸಹಜವಾದ ಔದಾರ್ಯವೂ ಅವರ ಬಡತನದ ಜೊತೆಗೆ ಸೇರಿದ್ದುವು. ಹೀಗೆ ಗೋಖಲೆಯವರಿಗೆ ಪಿತ್ರಾರ್ಜಿತವಾಗಿ ಬಂದ ಆಸ್ತಿ ವಂಶಗೌರವ ಗುಣ ಗೌರವಗಳು ಮಾತ್ರವೇ.

ಗೋಖಲೆಯವರ ತಂದೆ ಕೃಷ್ಣರಾಯರಿಗೆ ಕೊಲ್ಲಾಪುರ ಸಂಸ್ಥಾನದ ಉಪಸಂಸ್ಥಾನವಾದ ಕಾಗಳ್ ಎಂಬಲ್ಲಿ ಒಂದು ಸಣ್ಣ ಉದ್ಯೋಗವಿತ್ತು. ಅವರು ಗೋಖಲೆಯವರ ೧೩ ನೆಯ ವರ್ಷದಲ್ಲಿ (೧೮೭೯) ದೈವಾಧೀನರಾದರು.

ಗೋಖಲೆಯವರ ತಾಯಿಯ ಹೆಸರು ಸತ್ಯಭಾಮಾಬಾಯಿಯೆಂದು. ಆಕೆ ಮೃದು ಸ್ವಭಾವದವರಾಗಿಯೂ ನೇಮನಿಷ್ಠೆಗಳುಳ್ಳವರಾಗಿಯೂ ದಾನ ಧರ್ಮಶೀಲರಾಗಿಯೂ ಇದ್ದರು. ಗೋಖಲೆಯವರ ಒಡಹುಟ್ಟಿದವರು ಇನ್ನೈದು ಮಂದಿ. ಅವರಲ್ಲಿ ಗೋವಿಂದರಾಯರು ಅಣ್ಣಂದಿರು, ಉಳಿದವರು ಅಕ್ಕತಂಗಿಯರು.

ಗೋಖಲೆಯವರಿಗೆ ಅನಂತಜೀ ಪಂತರೆಂಬ ದೊಡ್ಡತಂದೆಯವರೊಬ್ಬರಿದ್ದರು. ಕೃಷ್ಣರಾಯರು ಮೃತಿಯೊಂದಿದ ಬಳಿಕ ಕುಟುಂಬ ಪೋಷಣೆಯ ಭಾರವು ಈ ದೊಡ್ಡಪ್ಪಂದಿರ ಮತ್ತು ಅಣ್ಣ ಗೋವಿಂದರಾಯರ ಮೇಲೆ ಹೊತ್ತಿತು. ಇವರಿಬ್ಬರೂ ತಮ್ಮಲ್ಲಿಟ್ಟಿದ್ದ ವಾತ್ಸಲ್ಯವನ್ನೂ, ತಮಗಾಗಿ ಅವರು ಪಟ್ಟ ಶ್ರಮೆಯನ್ನೂ ಗೋಖಲೆಯವರು ಸಂತತವಾಗಿ ಸ್ಮರಿಸಿ, ಕಡೆಯವರೆಗೂ ಅವರಲ್ಲಿ ಪಿತೃನಿರ್ವಿಶೇಷವಾದ ಭಕ್ತಿಯನ್ನಿಟ್ಟಿದ್ದರು.

ದೃಢಸಂಕಲ್ಪವೂ ವ್ಯವಸಾಯದಲ್ಲಿ ನಿರತವಾದ ಬುದ್ಧಿಯೂ ಇದ್ದರೆ, "ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನಾಗನೆ"? ಶ್ರದ್ಧೆಯೆಂಬ ದೊಡ್ಡ ಗುಣವು ಗೋಖಲೆಯವರಲ್ಲಿ ಮೊದಲಿನಿಂದಲೂ ಇದ್ದ ಕಾರಣ, ಅವರ ಬಡತನವೂ ಪಿತೃವಿಯೋಗವೂ ವಿದ್ಯಾಭ್ಯಾಸಕ್ಕೆ ಅಡ್ಡಿಯಾಗಲಿಲ್ಲ.

ಕಾಗಳಿನಲ್ಲಿ ಅವರು ಪ್ರಾಥಮಿಕ ಶಿಕ್ಷಣವನ್ನು ಮುಗಿಸಿಕೊಂಡು, ತರುವಾಯ ಇಂಗ್ಲಿಷ್ ವಿದ್ಯಾರ್ಜನೆಗಾಗಿ ಕೊಲ್ಲಾಪುರಕ್ಕೆ ಹೋಗಿ, ಅಲ್ಲಿಯ ರಾಜಾರಾಮ್ ವಿದ್ಯಾಶಾಲೆಯನ್ನು ಸೇರಿ, ತಮ್ಮ ಅಣ್ಣಂದಿರು ಕೊಡುತ್ತಿದ್ದ ಸ್ವಲ್ಪ ಸಹಾಯದಿಂದಲೂ ಅತಿಶಯವಾದ ಸ್ವಪ್ರಯಾಸದಿಂದಲೂ ಜೀವಿಸಿ, ಅಲ್ಲಿ ಎಫ್. ಎ. ಪರೀಕ್ಷೆಯವರೆಗೂ ವ್ಯಾಸಂಗಮಾಡಿ, ಬಳಿಕ ಬೊಂಬಾಯಿಯ ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿ ಬಿ. ಎ. ಪರೀಕ್ಷೆಗೆ ಓದಿ, ೧೮೮೪ ರಲ್ಲಿ ತೇರ್ಗಡೆ ಹೊಂದಿದರು.

ವಿದ್ಯಾರ್ಥಿದಶೆಯಲ್ಲಿ ಗೋಖಲೆಯವರು ವಿಶೇಷ ಪ್ರಶಂಸೆಗೆ ಪಾತ್ರರಾದವರೇನೂ ಅಲ್ಲ. ಅವರು ಆಟಪಾಟಗಳಲ್ಲಿ ಸಾಮಾನ್ಯರಂತೆ ಇದ್ದವರು. ಆದರೆ ಹಿಡಿದ ಕೆಲಸವನ್ನು ಚೆನ್ನಾಗಿ ಮಾಡಬೇಕೆಂಬ ಉತ್ಸಾಹವು ಆಗಲೂ ಅವರಿಗೆ ವಿಶೇಷವಾಗಿತ್ತು; ಅಲ್ಲದೆ ಅವರ ಜ್ಞಾಪಕಶಕ್ತಿಯು ಆಗಲೇ ಎಲ್ಲರ ಗಮನಕ್ಕೂ ಬಂದಿತ್ತು. ಆ ಶಕ್ತಿಯನ್ನು ಅವರು ದೊಡ್ಡವರಾದಮೇಲೆ ಅಭಿವೃದ್ಧಿಪಡಿಸಿಕೊಂಡರು. ಅವರು ಮುಂದೆ ಉಪಾಧ್ಯಾಯರಾದಾಗ, ವಿದ್ಯಾರ್ಥಿಗಳಿಗೆ (ಡಿಕ್ಟೇಷನ್) ಉಕ್ತಲೇಖನಕ್ಕಾಗಿ, ಹಿಂದೆ ತಾವು ಓದಿದ್ದ ಪುಸ್ತಕ ಪತ್ರಿಕೆಗಳಿಂದ,—ಅವುಗಳನ್ನು ಎದುರಿನಲ್ಲಿಟ್ಟುಕೊಳ್ಳದೆ,—ನೆನಪಿನಿಂದಲೇ ಅನೇಕ ಪುಟಗಳನ್ನು ಧಾರಾಳವಾಗಿ ಹೇಳುತ್ತಿದ್ದರಂತೆ. ಯಾವಾಗಲಾದರೂ ಪ್ರಾಸ್ತಾವಿಕವಾಗಿ ಕೇಳಿದ್ದ ಸಂಗತಿಗಳು ಕೂಡ ಅವರ ನೆನಪಿನಲ್ಲಿ ವಿಶದವಾಗಿ ನಿಂತಿರುತ್ತಿದ್ದುವು. ಈ ಧಾರಣಾಬಲದಿಂದಲೇ ಅವರಿಗೆ ಒಳ್ಳೆಯ ಭಾಷಾಶೈಲಿಯು ಸ್ವಾಧೀನವಾಗಿತ್ತು. ಕಡೆಯ ೩-೪ ವರ್ಷಗಳಲ್ಲಿ ಮಾತ್ರ ತಮ್ಮ ಸ್ಮೃತಿಶಕ್ತಿಯು ಕುಂದುತ್ತಿತ್ತೆಂದು ಅವರು ವಿಷಾದಿಸುತ್ತಿದ್ದರಂತೆ.

ಆ ಕಾಲದಲ್ಲಿ ಬಿ. ಎ. ಪರೀಕ್ಷೆಯನ್ನು ಕೊಟ್ಟವರು ಈಗಿಗಿಂತಲೂ ಸುಲಭವಾಗಿ ಸರಕಾರದಲ್ಲಿ ಉದ್ಯೋಗವನ್ನು ಸಂಪಾದಿಸಬಹುದಾಗಿತ್ತು; ಅಥವಾ "ಲಾ" ಪರೀಕ್ಷೆಯನ್ನೋ, "ಎಂಜಿನಿಯರ್" ಪರೀಕ್ಷೆಯನ್ನೋ ಕೊಟ್ಟು, ಹೆಚ್ಚಾಗಿ ಧನಾರ್ಜನೆ ಮಾಡಬಹುದಾಗಿತ್ತು. ಗೋಖಲೆಯವರು ಆ ಎರಡು ತೆರದ ಓದುಗಳನ್ನೂ ಸ್ವಲ್ಪಕಾಲ ಕೈಕೊಂಡಿದ್ದರೂ, ಕಡೆಗೆ ಆ

ದಾರಿಗಳಲ್ಲಾವುದನ್ನೂ ಹಿಡಿಯದೆ, ಬಡಬದುಕನ್ನೇ ವರಿಸಿ, ಆಗತಾನೆ ಪುಣೆಯಲ್ಲಿ ಸ್ಥಾಪಿತವಾಗಿದ್ದ "ನ್ಯೂ ಇಂಗ್ಲಿಷ್ ಸ್ಕೂಲ್" ಎಂಬ ಪಾಠಶಾಲೆಯಲ್ಲಿಯೂ, ಬಳಿಕ ಅದರ ಪೂರ್ಣರೂಪವಾದ ಫರ್ಗ್ಯುಸನ್ ಕಲಾಶಾಲೆಯಲ್ಲಿಯೂ ಉಪಾಧ್ಯಾಯ ವೃತ್ತಿಯನ್ನವಲಂಬಿಸಿದರು. ಆ ವಿದ್ಯಾಶಾಲೆಯನ್ನು (ಡೆಕ್ಕನ್ ಎಡ್ಯುಕೇಷನ್ ಸೊಸೈಟಿ) "ದಾಕ್ಷಿಣಾತ್ಯ ವಿದ್ಯಾ ಸಮಿತಿ" ಎಂಬ ಸಂಸ್ಥೆಯವರು ನಡಸುತ್ತಿದ್ದರು. ಆ ಸಂಸ್ಥೆಯನ್ನು ಸ್ಥಾಪಿಸಿದವರು ಆವೇಳೆಗಾಗಲೇ ದೇಶಸೇವೆಯಲ್ಲಿ ಬದ್ಧಕಂಕಣರಾಗಿದ್ದ ವಿದ್ವಾಂಸರು. ಅವರಲ್ಲಿ ಆಪ್ಟೆ, ಅಗರ್‌ಕರ್, ತಿಲಕ್—ಇವರ ಹೆಸರುಗಳು ಪ್ರಸಿದ್ಧಗಳಾಗಿವೆ. ಇವರ ದೇಶಸೇವೋತ್ಸಾಹದ ಪ್ರಥಮಾಂಕುರವು ೧೮೮೦ ರಲ್ಲಿ ತಲೆಯೆತ್ತಿತು. ಆಗ ಅವರು ಸ್ಥಾಪಿಸಿದ "ನ್ಯೂ ಇಂಗ್ಲಿಷ್ ಸ್ಕೂಲ್" ಎಂಬ ಪಾಠಶಾಲೆಯೇ ಐದು ವರ್ಷಗಳ ಬಳಿಕ ಮೇಲೆ ಹೇಳಿರುವ ಫರ್ಗ್ಯುಸನ್ ಕಾಲೇಜಿಗೆ ಬೀಜಪ್ರಾಯವಾಯಿತು. ಆ ವಿದ್ಯಾಲಯವನ್ನೇ ಅಲ್ಲದೆ, ಅವರು "ಕೇಸರಿ" ಎಂಬ ಮರಾಠೀ ವಾರಪತ್ರಿಕೆಯನ್ನೂ, "ಮಹರಾಟಾ" ಎಂಬ ಇಂಗ್ಲಿಷ್ ವಾರಪತ್ರಿಕೆಯನ್ನೂ, ಅವುಗಳನ್ನು ಅಚ್ಚು ಮಾಡುವುದಕ್ಕೆ "ಆರ್ಯಭೂಷಣ ಪ್ರೆಸ್" ಎಂಬ ಮುದ್ರಣಾಲಯವನ್ನೂ, ಇನ್ನೂ ಕೆಲವು ಇತರ ದೇಶೋಪಕಾರಕ ಸಂಸ್ಥೆಗಳನ್ನೂ ಪ್ರತಿಷ್ಠಿಸಿದ್ದರು. ಕೆಲವು ವರ್ಷಗಳಾದ ತರುವಾಯ, ಈ ಸಮಾರಂಭಗಳನ್ನು ಹೂಡಿದ್ದವರಲ್ಲೊಬ್ಬರಾದ ಅಗರ್‌ಕರ್ ಎಂಬವರಿಗೂ ಮತ್ತೊಬ್ಬರಾದ ಬಾಲಗಂಗಾಧರ ತಿಲಕರವರಿಗೂ ಭಿನ್ನಾಭಿಪ್ರಾಯಗಳುಂಟಾಗಲು, ಕ್ರಮೇಣ ಅವರ ಸಂಘವು ಒಡೆದು, ಆ ಸಂಸ್ಥೆ ಸ್ವತ್ತುಗಳು ಬೇರೆಬೇರೆಯಾಗಿ ಹಂಚಿಕೆಯಾದುವು. ಅದರಂತೆ "ಕೇಸರಿ," "ಮಹರಾಟಾ" ಪತ್ರಿಕೆಗಳು ತಿಲಕರ ಕೈಸೇರಿದವು. ಮುದ್ರಣಾಲಯವು ಬೇರೊಬ್ಬರಿಗೆ ಹೋಗಿ ಈಗ ಗೋಖಲೆಯವರ "ದೇಶಸೇವಕ ಸಂಘದ ಸ್ವಾಧೀನಾನುಭವದಲ್ಲಿದೆ. ಅಗರ್ಕರ್ ಅವರು ಸಮಾಜ ಸಂಸ್ಕರಣ ವಿಚಾರವನ್ನು ಹರಡಲು "ಸುಧಾರಕ" ಎಂಬ ಹೊಸ ವಾರಪತ್ರಿಕೆಯೊಂದನ್ನು ಹೊರಡಿಸಿದರು. ತಿಲಕರವರು "ಡೆಕ್ಕನ್ ವಿದ್ಯಾ ಸಮಿತಿ" ಯನ್ನು ಬಿಟ್ಟು, ಫರ್ಗ್ಯುಸನ್ ಕಾಲೇಜಿನ ಸಂಬಂಧವನ್ನು ತೊರೆದರು. ಆ ಕಥೆಯು

ನ್ನೆಲ್ಲಾ ಪೂರ್ತಿಯಾಗಿ ಹೇಳಲು ಇದು ಸ್ಥಳವಲ್ಲ. ಗೋಖಲೆಯವರ ತಾರುಣ್ಯದಲ್ಲಿ ಎಂತಹ ಸಂಭ್ರಮ ಎಂತಹ ಚಲನವಲನಗಳು ಮಹಾರಾಷ್ಟ್ರದ ಮಧ್ಯರಂಗವಾದ ಪೂನಾ ಪಟ್ಟಣದಲ್ಲಿ ಹರಡುತ್ತಿದ್ದವೆಂಬುದನ್ನು ಸೂಚಿಸುವುದಿಷ್ಟೇ ಇಲ್ಲಿ ನಮ್ಮ ಉದ್ದೇಶ. ಮಹಾರಾಷ್ಟ್ರರ ರಾಜಕೀಯ ಶಕ್ತಿಯು ಪೇಷ್ವೆಗಳ ಪತನದೊಂದಿಗೆ ನಷ್ಟವಾಗಿದ್ದರೂ, ಅವರ ಸ್ವದೇಶ ಭಕ್ತಿಯೆಂಬ ಬೆಂಕಿಯ ಕಣಗಳು ಅದರೊಡನೆ ಆರಿಹೋಗಲಿಲ್ಲ. ಅವು ಕೆಲವು ಕಾಲ ಬೂದಿಯಲ್ಲಿ ಅಡಗಿದಂತೆ ಇದ್ದು, ಗೋಖಲೆಯವರು ಪ್ರಬುದ್ಧರಾಗುವ ವೇಳೆಗೆ ಪುನಃ ಪ್ರಜ್ವಲಿಸಲಾರಂಭಿಸಿದ್ದುವು. ಅವರು ಡೆಕ್ಕನ್ ವಿದ್ಯಾ ಸಮಿತಿಯ ಸದಸ್ಯತ್ವವನ್ನು ಕೈಕೊಂಡು, ಉಳಿದ ಆಶೆಗಳನ್ನೆಲ್ಲ ವರ್ಜಿಸಿದ್ದೇ ಆ ದೇಶಸೇವಾ ಯಜ್ಞದ ಅಗ್ನಿಕುಂಡದಲ್ಲಿ ಅವರು ಅರ್ಪಿಸಿದ ಮೊದಲನೆಯ ಆಹುತಿ. ದೇಶೀಯ ಬಾಲಕರಿಗೆ ಪ್ರೌಢ ವಿದ್ಯಾಭ್ಯಾಸಕ್ಕೆ ಅನುಕೂಲಪಡಿಸಿಕೊಡಬೇಕೆಂಬುದೇ ಆ ಸಮಿತಿಯ ಉದ್ದೇಶ. ತಿಂಗಳಿಗೆ ೭೫ ರೂಪಾಯಿಗಿಂತ ಹೆಚ್ಚಾದ ಸಂಬಳವನ್ನೂ, ೩೦ ರೂಪಾಯಿಗಿಂತ ಹೆಚ್ಚಾದ (ಪೆನ್ಷನ್) ವಿಶ್ರಾಂತಿವೇತನವನ್ನೂ ಅಪೇಕ್ಷಿಸದೆ ೨೦ ವರ್ಷಕಾಲ ಹಾಗೆ ಕೆಲಸಮಾಡುವುದಕ್ಕೆ ಒಪ್ಪುವ ವಿದ್ವಾಂಸರು ಆ ಸಂಘದ (ಮೆಂಬರ್) ಸದಸ್ಯರಾಗಲು ಅರ್ಹರೆಂದೆಣಿಸಲ್ಪಟ್ಟಿದ್ದರು. ಗೋಖಲೆಯವರು ದೇಶೋಪಕಾರದಲ್ಲಿ ಉತ್ಸಾಹವುಳ್ಳವರಾಗಿಯೂ, ಬಡ ಹುಡುಗರ ವಿದ್ಯಾಭ್ಯಾಸಕ್ಕಿರುವ ಕಷ್ಟಗಳನ್ನು ಬಲ್ಲವರಾಗಿಯೂ ಇದ್ದ ಕಾರಣ. ಮೇಲೆ ವಿವರಿಸಿದ ನಿಬಂಧನೆಗಳಿಗೆ ಅವರು ಸಮ್ಮತಿಪಟ್ಟು, ೩೫ ರೂಪಾಯಿಗಳ ಪ್ರಾರಂಭವೇತನವನ್ನೇ ಒಪ್ಪಿಕೊಂಡು, ಆ ಸಮಿತಿಯ ಆಜೀವ ಸದಸ್ಯರಾಗಿ ಸೇರಿ, ಫರ್ಗುಸನ್ ವಿದ್ಯಾಶಾಲೆಯಲ್ಲಿ ಬೋಧಕೋದ್ಯೋಗವನ್ನು ಅಂಗೀಕರಿಸಿದರು. ಬಾಲ್ಯದಲ್ಲಿ ರಿಕ್ತತೆಯ ದುಃಖಗಳನ್ನನುಭವಿಸಿರುವವನಿಗೂ, ಅಂಥವನ ಬಂಧುಬಳಗಗಳಿಗೂ, ಅವನು ವಿದ್ಯಾವಂತನಾದ ಬಳಿಕ ಹೆಚ್ಚು ವೇತನದ ದೊಡ್ಡ ಉದ್ಯೋಗವನ್ನು ಸಂಪಾದಿಸಬೇಕೆಂದೂ, ಅದರಿಂದ ತಮ್ಮ ದಾರಿದ್ರ್ಯವು ತೊಲಗಿ ಈ ಲೋಕದ ಸುಖವೈಭವಗಳು ತಮಗೆ ಯಥೇಷ್ಟವಾಗಿ ದೊರೆಯಬೇಕೆಂದೂ ಆಶೆ ಆತುರಗಳಿರುವುದು ಅಸ್ವಾ

ಭಾವಿಕವಲ್ಲ; ಅದೊಂದು ತಪ್ಪೆಂದು ಹೇಳುವುದಕ್ಕೂ ಆಗುವುದಿಲ್ಲ. ಹೀಗೆ ಸರ್ವಸಾಮಾನ್ಯವಾಗಿ ಹುಟ್ಟುವ ಆಕಾಂಕ್ಷೆಗೆ ಗೋಖಲೆಯವರು ಎಡೆಕೊಡದ ತ್ಯಾಗಮಾರ್ಗವನ್ನು ಹಿಡಿದುದು ಅವರ ಮುಂದಿನ ಜೀವನ ವ್ರತದ ಸೂಚನೆಯೆನ್ನಬಹುದು. ಇಲ್ಲಿಂದ ಮುಂದಕ್ಕೆ ಪೂನಾ ಪಟ್ಟಣವೇ ಗೋಖಲೆಯವರ ಎಲ್ಲ ಜೀವಿತ ಕಾರ್ಯಕ್ಕೂ ಮುಖ್ಯ ಕ್ಷೇತ್ರವಾಯಿತು.

ಗೋಖಲೆಯವರು ಕೆಲವು ಕಾಲ ಇಂಗ್ಲಿಷ್ ಭಾಷೆ ಸಾಹಿತ್ಯಗಳನ್ನೂ, ಕೆಲವು ಕಾಲ ಗಣಿತಶಾಸ್ತ್ರವನ್ನೂ, ಕೆಲವು ಕಾಲ ಚರಿತ್ರೆ, ಅರ್ಥಶಾಸ್ತ್ರ ಗಳನ್ನೂ ಪಾಠಹೇಳುತ್ತಿದ್ದರು. ಆ ಕಾಲದಲ್ಲಿ ಒಂದೊಂದು ಶಾಸ್ತ್ರಕ್ಕೂ ಒಂದೊಂದು ಗ್ರಂಥಕ್ಕೂ ಒಬ್ಬೊಬ್ಬ ಉಪಾಧ್ಯಾಯನು ಬೇರೆಬೇರೆಯಾಗಿರು ತ್ತಿರಲಿಲ್ಲ. ಗೋಖಲೆಯವರ ಗುಣಗಳಲ್ಲಿ ಶ್ರದ್ಧೆಯು ಬಲು ದೊಡ್ಡದೆಂದು ಮೇಲೆ ಸೂಚಿಸಿದೆ. ಯಾವ ಶಾಸ್ತ್ರದಲ್ಲಿ ಅವರಿಗೆ ಪರಿಚಯವು ಕಡಿಮೆ ಯೆಂದು ಇತರರು ಹೇಳುತ್ತಿದ್ದರೋ ಆ ಶಾಸ್ತ್ರದಲ್ಲಿಯೇ ತಾವು ಗಟ್ಟಿಗ ರೆನ್ನಿಸಿಕೊಳ್ಳಬೇಕೆಂಬುದು ಗೋಖಲೆಯವರ ಹಟವಂತೆ. ಅದಕ್ಕಾಗಿ ಅವರು ರಾತ್ರಿಯೆಲ್ಲ ದೀಪದ ಮುಂದೆ ಕುಳಿತು ಗ್ರಂಥಗಳನ್ನೋದಿ, ಬೇಸರ ಪಡದೆ ಚಿಂತನೆಮಾಡಿ, ಮಾರನೆಯ ದಿನ ಪಾಠಹೇಳ ಬರುತ್ತಿದ್ದರು. ಈ ರೀತಿ ಶ್ರಮಪಡುತ್ತಿದ್ದುದರಿಂದ ಅವರ ಬುದ್ಧಿಯು ಮತ್ತಷ್ಟು ಸೂಕ್ಷ್ಮವೂ ವಿಕಸಿತವೂ ಆಗಿ, ಅವರ ಶಿಷ್ಯರಿಗೆ ಪ್ರಯೋಜನವು ಅಧಿಕವಾಯಿತು.

ಪಾಠಶಾಲೆಗಳಲ್ಲಿ ಗಣಿತ ಶಾಸ್ತ್ರವನ್ನು ಬೋಧಿಸುವುದಕ್ಕಾಗಿ ಅವರು ಇಂಗ್ಲಿಷಿನಲ್ಲಿ ಎರಡು ಪುಸ್ತಕಗಳನ್ನು ಬರೆದರು. ಅವು ಪ್ರಸಿದ್ಧಗಳಾಗಿ, ಇತರ ಭಾಷೆಗಳಲ್ಲಿ ತರ್ಜುಮೆಯಾಗಿ, ಈಗಲೂ ಉಪಯೋಗದಲ್ಲಿವೆ. ಗಣಿತ ಶಾಸ್ತ್ರ ಪರಿಶ್ರಮದಿಂದ, ಅವರಿಗೆ ಮುಂದೆ ರಾಜ್ಯದ ಆದಾಯ ವ್ಯಯಗಳನ್ನು ವಿಮರ್ಶೆ ಮಾಡುವ ಕೆಲಸವೂ ದೇಶದ ಸಂಪತ್ತಿಗೆ ಸಂಬಂಧಪಟ್ಟ ಲೆಕ್ಕಗ ಳನ್ನು ಪರಿಶೀಲಿಸುವ ಕೆಲಸವೂ ಸುಲಭವಾದುವಲ್ಲದೆ, ಯಾವ ವಿಚಾರವನ್ನೇ ಆಗಲಿ ಬುಡಮುಟ್ಟ ಪರೀಕ್ಷಿಸಿ, ಹೇಳಬೇಕಾದುದನ್ನು ನಿಷ್ಕರ್ಷೆಯಾಗಿ, ಹೆಚ್ಚು ಕಡಿಮೆಗಳಿಲ್ಲದಂತೆಯೂ ಶಂಕೆ ಸಂದೇಹಗಳಿಗೆ ಅವಕಾಶವಿಲ್ಲದಂತೆಯೂ ಹೇಳುವ ಅಭ್ಯಾಸವು ಅವರಲ್ಲಿ ನೆಲೆಗೊಂಡಿತು.

ಇಂಗ್ಲಿಷ್ ಕಾವ್ಯಗಳನ್ನು ಪಾಠಹೇಳುವುದರಲ್ಲಿ ಇಂಡಿಯಾ ದೇಶದ ವಿದ್ಯಾರ್ಥಿಗಳಿಗೋಸ್ಕರ ಪಡಬೇಕಾಗಿರುವ ಹೆಚ್ಚು ಶ್ರಮವನ್ನು ಪಡಲು ಗೋಖಲೆಯವರು ಹಿಂದೆಗೆಯುತ್ತಿರಲಿಲ್ಲ. ಕಷ್ಟವಾದ ವಾಕ್ಯಗಳಿಗೆ ಅರ್ಥ ಹೇಳುವುದಕ್ಕೂ ಆಂಗ್ಲೇಯ ಚರಿತ್ರೆಗೆ ಸಂಬಂಧಪಟ್ಟ ವಿಷಯಗಳನ್ನು ಆಮೂಲಾಗ್ರವಾಗಿ ವಿವರಿಸುವುದಕ್ಕೂ ಅವರು ಬೇಕಾದಷ್ಟು ಕಾಲವನ್ನು ಕೊಡುತ್ತಿದ್ದರು. ಮೊದಮೊದಲು ಇಂಗ್ಲಿಷಿನಲ್ಲಿ ಮಾತನಾಡುವುದು ಗೋಖಲೆಯವರಿಗೆ ಅಷ್ಟೇನೂ ಸುಲಭವಾಗಿರಲಿಲ್ಲವಂತೆ. ಆಗ ಅವರು ಆ ಭಾಷೆಯಲ್ಲಿ ಪಾಂಡಿತ್ಯವನ್ನು ಸಂಪಾದಿಸಬೇಕೆಂದು ಪ್ರತಿಜ್ಞೆಮಾಡಿ, ಅನೇಕ ಪ್ರಸಿದ್ಧ ವಾಗ್ಮಿಗಳ ಉಪನ್ಯಾಸಗಳನ್ನು ಓದಿ ಕಂಠಪಾಠಮಾಡಿದರಂತೆ. ಅವುಗಳ ಜೊತೆಗೆ ಅನೇಕ ಮೂಲಗ್ರಂಥಗಳನ್ನೂ ಅವರು ಪಾಠಹೇಳುವುದಕ್ಕಾಗಿ ಓದಬೇಕಾಯಿತು. ಇದರಿಂದಲೂ, ವಿದ್ಯಾರ್ಥಿಗಳೊಡನೆ ಸಂಭಾಷಣೆ ನಡಸಬೇಕಾಗಿದ್ದುದರಿಂದಲೂ ಅವರ ಶಬ್ದಸಾಮಗ್ರಿಯು ಬೆಳೆದು, ಅವರ ವಾಕ್ಯಶೈಲಿಯು ಸರಳವೂ ಸರಸವೂ ಆಗಿ, ಭಾಷೆಯು ಅವರಿಗೆ ವಿಧೇಯವಾಯಿತು. ಬರವಣಿಗೆಯಲ್ಲಾಗಲಿ, ಬಾಯಮಾತಿನಲ್ಲಾಗಲಿ, ಅಪಶಬ್ದಗಳು ಬೀಳದಂತೆ ಅವರು ಜಾಗರೂಕರಾಗಿರುತ್ತಿದ್ದರು. ಅವರ ಲೇಖನ ಭಾಷಣಗಳು ಬಹುಮಟ್ಟಿಗೆ ಅನ್ಯಭಾಷೆಯಲ್ಲಿಯೇ ಇದ್ದರೂ, ಅವು ಉಚಿತ ಪದಪ್ರಯೋಗದಿಂದಲೂ, ಆಡಂಬರವಿಲ್ಲದ ಹೃದಯಂಗಮವಾದ ಸರಣಿಯಿಂದಲೂ ಪಂಡಿರತನ್ನು ತಲೆದೂಗಿಸಿವೆ. ಈ ಶಕ್ತಿಯನ್ನು ಅವರು ಕಷ್ಟಪಟ್ಟು ಸಂಪಾದಿಸಿದ್ದರು. ಮಾತೃಭಾಷೆಯಲ್ಲಿ ಅವರಿಗಿದ್ದ ಮಮತೆಯೂ ಪಾಂಡಿತ್ಯವೂ ಸಾಮಾನ್ಯವಾದುವೇನೂ ಅಲ್ಲ. ಅವರು ಮರಾಠಿಯಲ್ಲಿಯೂ ಉತ್ತಮ ಶೈಲಿಯಲ್ಲಿ ಮಾತನಾಡಬಲ್ಲವರಾಗಿಯೂ ಬರೆಯಬಲ್ಲವರಾಗಿಯೂ ಇದ್ದರು. ಆದರೆ ದೇಶಭಾಷೆಗೆ ಅವಕಾಶಗಳು ಆ ಕಾಲದಲ್ಲಿ ಈಗಿನಷ್ಟು ವಿಶೇಷವಾಗಿರಲಿಲ್ಲ.

ಚರಿತ್ರೆಯ ಪಾಠಗಳನ್ನು ಹೇಳುವುದರಲ್ಲಿ ಗೋಖಲೆಯವರಿಗೆ ಇತರ ವಿಷಯಗಳಲ್ಲಿದ್ದುದಕ್ಕಿಂತ ಉತ್ಸಾಹ ಹೆಚ್ಚಾಗಿತ್ತು. ಅವರ ಮುಂದಿನ ಕಥೆಯನ್ನು ನೋಡಿದರೆ ಈ ಉತ್ಸಾಹವು ಅವರಿಗಿದ್ದುದು ಸಹಜವೆಂದು

ತೋರುವುದು. ಏಕೆಂದರೆ, ದೇಶವಿದೇಶಗಳ ಇತಿಹಾಸವು ವಾಸ್ತವವಾಗಿ ರಾಜವೈಭವ ಪ್ರಶಂಸೆಯೂ ಅಲ್ಲ, ಯುದ್ಧವರ್ಣನೆಯೂ ಅಲ್ಲ, ಅಂತಃಪುರ ಕಥೆಯೂ ಅಲ್ಲ. ಅದು ಜನ ಜನಾಂಗಗಳ ಯೋಗಕ್ಷೇಮಗಳ ಪೂರ್ವಾಪರ ವಿಮರ್ಶೆ. ಒಂದು ದೇಶದ ಜನರು ಬದುಕುತ್ತಿದ್ದುದು ಹೇಗೆ, ಅವರು ಕಷ್ಟಗಳನ್ನು ನೀಗಿದುದು ಹೇಗೆ, ಮೇಲ್ಮೆಯನ್ನು ಪಡೆದುದು ಹೇಗೆ— ಎಂಬೀ ವಿಚಾರಗಳನ್ನು ವಿವರಿಸಿ ಹೇಳುವುದೇ ಚರಿತ್ರೆ. ನಮಗಿಂತ ಹಿಂದೆ ಬದುಕಿದವರ ಹಾನಿ ವೃದ್ಧಿಗಳ ಮಾತನ್ನು ಚರಿತ್ರೆಯೆಂದು ಕರೆಯುತ್ತೇವೆ; ನಮ್ಮ ಕಾಲದವರ ಹಾನಿ ವೃದ್ಧಿಗಳ ಮಾತನ್ನು ರಾಜಕೀಯ ಪ್ರಸಂಗವೆನ್ನುತ್ತೇವೆ. ಯಾವುದು ನಮಗೆ ಈಗ ದೇಶ ಚರಿತ್ರೆಯಾಗಿದೆಯೋ ಅದು ಹಿಂದೆ ಒಂದಾನೊಂದು ಕಾಲದಲ್ಲಿ ರಾಜಕೀಯ ಪ್ರಸಂಗವಾಗಿದ್ದಿರಬೇಕು. ಈಗ ನಮಗೆ ಯಾವುದು ರಾಜಕೀಯ ಪ್ರಸಂಗವಾಗಿದೆಯೋ ಅದು ಮುಂದಕ್ಕೆ ದೇಶಚರಿತ್ರೆಯೆಂದೇ ಎನ್ನಿಸಿಕೊಳ್ಳುವುದು. ಚರಿತ್ರೆಗೂ ರಾಜ್ಯವಿಚಾರಕ್ಕೂ ಪರಸ್ಪರ ಸಂಬಂಧವು ಇಷ್ಟು ಗಾಢವಾಗಿರುವುದರಿಂದ, ದೇಶದ ಮೇಲು ಬೀಳುಗಳ ಚಿಂತೆಗೇ ಮೊದಲಿನಿಂದ ಮನಸ್ಸುಕೊಟ್ಟಿದ್ದ ಗೋಖಲೆಯವರು ಇತಿಹಾಸ ಬೋಧನೆಯಲ್ಲಿ ಅತ್ಯಂತಾಸಕ್ತರಾಗಿದ್ದುದು ಸ್ವಾಭಾವಿಕವಾಗಿಯೇ ಇದೆ. ಪಾಶ್ಚಾತ್ಯ ದೇಶಗಳ ತಾತ್ಕಾಲಿಕ ಪರಿಸ್ಥಿತಿಯನ್ನೂ ಸಮಾರಂಭಗಳನ್ನೂ ಚೆನ್ನಾಗಿ ತಿಳಿದುಕೊಳ್ಳುವುದಕ್ಕೋಸ್ಕರ ಅವರು "ಲಂಡನ್ ಟೈಮ್ಸ್" ಮೊದಲಾದ ಪ್ರಸಿದ್ಧ ಪತ್ರಿಕೆಗಳನ್ನು ಕ್ರಮವಾಗಿ, ಸಾವಧಾನವಾಗಿ, ಓದುತ್ತಿದ್ದರು. ಪಾಠಹೇಳುವ ಕಾಲದಲ್ಲಿ, ಪೂರ್ವ ಚರಿತ್ರೆಯ ಯಾವುದಾದರೊಂದು ಸಂಗತಿಗೆ ಪ್ರಕೃತ ಸಂದರ್ಭವಾವುದಾದರೂ ಹೋಲುವುದಾಗಿ ಕಂಡರೆ, ಅದನ್ನು ಅವರು ವಿದ್ಯಾರ್ಥಿಗಳಿಗೆ ವಿಶದಪಡಿಸಿ, ಅವರ ಐತಿಹಾಸಿಕ ವಿಚಾರಶಕ್ತಿಯನ್ನು ಬಲಪಡಿಸುತ್ತಿದ್ದರು. ಐರ್ಲೆಂಡ್ ದೇಶಕ್ಕೂ ಇಂಡಿಯಾ ದೇಶಕ್ಕೂ ಇದ್ದ ಸಾಮ್ಯವನ್ನು ಅವರು ಆಗಾಗ ತೋರಿಸಿಕೊಟ್ಟು, ಆ ದೇಶದ ಸ್ವಾತಂತ್ರ್ಯಕ್ಕಾಗಿಯೂ ಸಂಪದಭಿವೃದ್ಧಿಗಾಗಿಯೂ ಐರಿಷ್ ದೇಶಾಭಿಮಾನಿಗಳು ಮಾಡುತ್ತಿದ್ದ ಸ್ವಾರ್ಥತ್ಯಾಗವನ್ನೂ ಸಂತತ ಸಾಹಸಗಳನ್ನೂ ಅವರು ಕೊಂಡಾಡುತ್ತಿದ್ದರು.

ಯೂರೋಪ್ ಖಂಡದ ರಾಷ್ಟ್ರಗಳಲ್ಲಿ ಪ್ರಜಾಪ್ರಾಬಲ್ಯವು ಕ್ರಮೇಣ ಹೇಗೆ ಹಬ್ಬಿತು, ಆ ಜನರಲ್ಲಿ ವಿವಿಧ ವಿದ್ಯೆಗಳೂ ಕಲೆ ಕೈಗಾರಿಕೆಗಳೂ ಹೇಗೆ ದಿನ ದಿಂದ ದಿನಕ್ಕೆ, ವರ್ಷದಿಂದ ವರ್ಷಕ್ಕೆ, ಸಂತತವಾಗಿ ಬೆಳೆದುವು—ಎಂಬು ದನ್ನು ತೋರಿಸುವುದರಲ್ಲಿ ಗೋಖಲೆಯವರಿಗೆ ಸಂತೋಷವು ಮಿಗಿಲಾಗಿತ್ತು.

ಅರ್ಥಶಾಸ್ತ್ರ ಬೋಧನೆಯಲ್ಲಿಯೂ ಅವರಿಗೆ ಉತ್ಸಾಹವು ಹೆಚ್ಚಾ ಗಿತ್ತು. ಆ ಶಾಸ್ತ್ರಕ್ಕೆ ಸಂಬಂಧಪಟ್ಟ ಪ್ರಮಾಣ ಗ್ರಂಥಗಳ ಪರಿಚಯ ವನ್ನು ಅವರು ಚೆನ್ನಾಗಿ ಸಂಪಾದಿಸಿದ್ದರಲ್ಲದೆ, ತಾವೇ ಒಂದೆರಡು ವಿಷಯ ಗಳನ್ನು ಸ್ವತಂತ್ರವಾಗಿ ಸಮಾಲೋಚಿಸಿ, ಅವುಗಳ ಮೇಲೆ ಒಂದು ಪುಸ್ತಕ ವನ್ನು ಬರೆಯಬೇಕೆಂದು ಕೂಡ ಸಂಕಲ್ಪಿಸಿದ್ದರು. ಆದರೆ ಆ ಕೆಲಸಕ್ಕೆ ಬೇಕಾದಷ್ಟು ವ್ಯವಧಾನವು ಅವರಿಗೆ ದೊರೆಯಲಿಲ್ಲ. ಉಪಾಧ್ಯಾಯ ಪದವಿಯಿಂದ ನಿವೃತ್ತಿ ಪಡೆದ ಬಳಿಕಲಂತೂ ಅರ್ಥಶಾಸ್ತ್ರ ವಿಚಾರವು ಅವರ ಜೀವನದ ಮುಖ್ಯ ಕಾರ್ಯಕ್ಕೆ ಮುಖ್ಯಾಂಗವಾಯಿತು. ರಾಜ್ಯಕೋಶ ಸ್ಥಿತಿಯ ವಿಮರ್ಶೆ, ದೇಶದ ವ್ಯಾಪಾರಗಳ ಲಾಭನಷ್ಟ ವಿಮರ್ಶೆ, ದೇಶೀ ಯರ ಆರ್ಜನೆ ವ್ಯಯಗಳ ವಿಮರ್ಶೆ—ಈ ಆರ್ಥಿಕ ಪರೀಕ್ಷಾ ಕಾರ್ಯಗಳಲ್ಲಿ ಗೋಖಲೆಯವರು ತೋರಿಸಿದ ಶಾಸ್ತ್ರ ಪರಿಜ್ಞಾನವೂ, ವಿಷಯ ನಿರೂಪ ಣೆಯ ಬಗೆಯೂ, ಚರ್ಚಾಕ್ರಮವೂ, ಈಗಲೂ ಎಲ್ಲರಿಗೂ ಮೇಲ್ಪಂಕ್ತಿ ಯಾಗಿವೆ. ಅವರು ಈ ವಿಚಾರಗಳಲ್ಲಿ ಹೇಳಿದ ಅಭಿಪ್ರಾಯಗಳು ಈಗಲೂ ಪ್ರಮಾಣ ವಚನಗಳೆಂದು ಸಭೆಗಳಲ್ಲಿಯೂ ಪತ್ರಿಕೆಗಳಲ್ಲಿಯೂ ನಡೆಯುವ ಜಿಜ್ಞಾಸಗಳಲ್ಲಿ ಉದಾಹರಿಸಲ್ಪಡುತ್ತವೆ.

ಗೋಖಲೆಯವರ ವಿದ್ಯಾಪ್ರದಾನ ರೂಪವಾದ ದೇಶಸೇವೆಯು ೧೮ ವರ್ಷ—೧೮೮೪ ರಿಂದ ೧೯೦೨ ರ ವರೆಗೂ—ನಡೆಯಿತು. ಅದರ ಜೊತೆಗೆ ಅವರು ಕೆಲವು ವರ್ಷಗಳ ಕಾಲ ಡೆಕ್ಕನ್ ವಿದ್ಯಾ ಸಮಿತಿಯ ಕಾರ್ಯದರ್ಶಿ ಯಾಗಿಯೂ ಇದ್ದರು. ಅದಲ್ಲದೆ ದಿನೇ ದಿನೇ ಪ್ರವರ್ಧಮಾನವಾಗುತ್ತಿದ್ದ ಫರ್ಗ್ಯುಸನ್ ಕಲಾಶಾಲೆಗೆ ವಿಸ್ತಾರವಾದ ಕಟ್ಟಡವು ಆವಶ್ಯಕವಾಗಿ ಬಂದ ಕಾರಣ, ಅದನ್ನು ಕಟ್ಟಿಸಲು ೧೮೯೨ ರಲ್ಲಿ ಪ್ರಯತ್ನ ನಡೆದು, ಅದನ್ನು ಪೂರ್ತಿಗೊಳಿಸುವ ಭಾರವು ವಿಶೇಷವಾಗಿ ಗೋಖಲೆಯವರನ್ನೇ ಹೊಂದಿತು.

ಇದಕ್ಕೆ ಬೇಕಾದ ದ್ರವ್ಯ ಸಹಾಯವನ್ನು ಸಂಪಾದಿಸುವುದಕ್ಕೋಸ್ಕರ ಅವರು ವಿರಾಮ ದಿವಸಗಳಲ್ಲಿ ಬೊಂಬಾಯಿ ಪಟ್ಟಣಕ್ಕೂ ಆ ಆಧಿಪತ್ಯದ ಇತರ ಸ್ಥಳಗಳಿಗೂ ಸಂಚಾರ ಬೆಳಸಬೇಕಾಯಿತು. ಈ ದೇಶಾಟನೆ ಯಲ್ಲಿ ಅವರಿಗೆ ಅನೇಕ ಸನ್ಮಿತ್ರರ ಲಾಭವಾಯಿತು. ಬಗೆಬಗೆಯ ಜನರೊಡನೆ ನಡೆದುಕೊಳ್ಳುವ ರೀತಿಯೂ, ಅವರ ಔದಾರ್ಯ ಗುಣವನ್ನು ಉತ್ತೇಜನ ಗೊಳಿಸುವ ಮಾತು ಕಥೆಗಳ ರೀತಿಯೂ, ಅವರು ಇಲ್ಲವೆಂದಾಗ ಅಸಮಾ ಧಾನ ತೋರದೆ, ಬೇಸರಪಡದೆ, ಸಹನೆಯಿಂದ ಇನ್ನೊಬ್ಬರಲ್ಲಿ ಮತ್ತೊಬ್ಬರಲ್ಲಿ ಹೋಗಿ ಬೇಡಿ ಪಡೆಯುವ ರೀತಿಯೂ ಈ ಕಾಲದಲ್ಲಿ ಗೋಖಲೆಯವರ ಅಭ್ಯಾಸಕ್ಕೆ ಬಂದುವು. ಈ ಅಭ್ಯಾಸವು ಅವರು ಮುಂದೆ ಮುಂದೆ ಕೈಕೊಂಡ ರಾಷ್ಟ್ರೀಯ ಸಮಾರಂಭಗಳಿಗೆ ಅನುಕೂಲವಾಯಿತು. ಗೋಖಲೆಯವರ ಪ್ರಯತ್ನ ವಿಶೇಷದಿಂದ ಬೇಕಾದಷ್ಟು ಧನ ಸಹಾಯವು ದೊರೆತು, ಫರ್ಗ್ಯುಸನ್ ಕಾಲೇಜಿನ ಈಗಿನ ಕಟ್ಟಡವೂ ಅದಕ್ಕೆ ಸೇರಿರುವ ವಿದ್ಯಾರ್ಥಿ ನಿಲಯವೂ ೧೮೯೫ ರಲ್ಲಿ ಸಂಪೂರ್ಣವಾಗಿ ಸಿದ್ಧವಾದುವು. ಆ ಕಾಲೇಜಿನ ಆಡಳಿತದಲ್ಲಿಯೂ, ಅದರ ಯಾಜಮಾನ್ಯವನ್ನು ವಹಿಸಿದ್ದ ವಿದ್ಯಾ ಸಮಿತಿಯ ಆಡಳಿತದಲ್ಲಿಯೂ, ಆ ಸಂಸ್ಥೆಗಳ ಸದಸ್ಯರೊಳಗೆ ಆಗಾಗ ಭಿನ್ನಾಭಿಪ್ರಾಯಗಳು ಕಾಣಿಸಿಕೊಂಡು, ವೈಷಮ್ಯಗಳು ತಲೆದೋರಿ, ಕೆಲಸವು ಕೆಡುವುದೆಂಬ ಹೆದರಿಕೆಗೆ ಅವಕಾಶವಾಗುತ್ತಿತ್ತು. ಅಂತಹ ಸಂದರ್ಭಗಳಲ್ಲೆಲ್ಲಾ ಗೋಖಲೆಯವರು ನಾನಾ ಪಕ್ಷಗಳವರಿಗೂ ಸಮಾಧಾನ ಹೇಳಿ, ಎಲ್ಲರನ್ನೂ ಐಕಮತ್ಯಕ್ಕೆ ಹಿಂದಿರುಗಿಸಿ, ಕಾರ್ಯಗಳು ಸುಸೂತ್ರ ವಾಗಿ ನೆರವೇರುವಂತೆ ಮಾಡುತ್ತಿದ್ದರು. ಆ ಸಮಿತಿಯ ಸದಸ್ಯರುಗಳೆಲ್ಲರೂ ಗೋಖಲೆಯವರಲ್ಲಿ ಒಂದೇ ರೀತಿಯಾದ ನಂಬಿಕೆಯನ್ನಿಟ್ಟಿದ್ದ ಕಾರಣ, ಆ ಸಮಿತಿಯ ಪರವಾಗಿ ಯಾವ ಮಾತನಾಡಬೇಕಾಗಿದ್ದರೂ ಗೋಖಲೆ ಯವರೇ ಅದರ ಪ್ರತಿನಿಧಿಯಾಗಿ ನಿಲ್ಲುವಂತಾಗಿತ್ತು.

೧೮೯೫ ರಲ್ಲಿ ಗೋಖಲೆಯವರು ಬೊಂಬಾಯಿ ವಿಶ್ವವಿದ್ಯಾ ಪೀಠದ (ಯೂನಿವರ್ಸಿಟಿಯ) ಆಲೋಚನಾ ಮಂಡಲಿಗೆ (ಸೆನೆಟಿಗೆ) ಸದಸ್ಯ ರಾಗಿ ಆರಿಸಲ್ಪಟ್ಟರು. ಈ ಪದವಿಯು ಅವರಿಗೆ ಕಡೆಯವರೆಗೂ ಕೈತಪ್ಪಲಿಲ್ಲ.

ವಿಶ್ವವಿದ್ಯಾಪೀಠದ ಆಡಳಿತವನ್ನೂ ಪ್ರೌಢ ವಿದ್ಯಾಶಾಲೆಗಳ ಪಾಠಕ್ರಮ ಗಳನ್ನೂ ನಮ್ಮ ದೇಶದ ಪರಿಸ್ಥಿತಿಗೂ ಆವಶ್ಯಕತೆಗಳಿಗೂ ಸರಿಪಡುವಂತೆ ತಿದ್ದಿಸಲು ಅವರು ಬಹುವಾಗಿ ಪ್ರಯಾಸಪಟ್ಟರು. ಈ ದೇಶದ ಜನರಲ್ಲಿ ರಾಜಕೀಯ ಜಾಗೃತಿಯುಂಟಾಗಿರುವುದನ್ನು ನೋಡಿ ಸಹಿಸಲಾರದ ಕೆಲವರು ದೇಶ ವಿದೇಶ ಚರಿತ್ರೆಯನ್ನು ನಿರ್ಬಂಧ ಪಾಠ ಪಟ್ಟಿಕೆಯಿಂದ ತೆಗೆದುಹಾಕಿ ಅಮುಖ್ಯವನ್ನಾಗಿ ಮಾಡುವಂತೆ ಪ್ರಯತ್ನ ನಡಸಲು, ಗೋಖಲೆಯವರು ಅದಕ್ಕೆ ಅಡ್ಡ ನಿಂತುದೇ ಅಲ್ಲದೆ; ಬಿ.ಎ. ಪರೀಕ್ಷೆಗೆ ರಾಜ್ಯಶಾಸ್ತ್ರವನ್ನೂ, ಬಿ.ಎ., ಎಂ.ಎ., ಪರೀಕ್ಷೆಗಳಿಗೆ ಇಂಡಿಯಾ ದೇಶಕ್ಕನ್ವ ಯಿಸುವಷ್ಟು ಅರ್ಥಶಾಸ್ತ್ರವನ್ನೂ ಸಹ ಪಠ್ಯವಿಷಯಗಳನ್ನಾಗಿ ಸೇರಿಸ ಬೇಕೆಂದು ವಾದಿಸಿದರು. ವಿದ್ಯಾಪ್ರಚಾರದ ವಿಷಯದಲ್ಲಿ ಅವರು ಮಾಡಿದ ಇತರ ಕೆಲಸಗಳನ್ನು ಕುರಿತು ಮತ್ತೊಂದು ಸಲ ಪ್ರಸ್ತಾವಿಸಬೇಕಾಗುವುದು.

ವಿದಾರ್ಥಿಗಳು ಗೋಖಲೆಯವರ ಸ್ವಲ್ಪ ವೇತನ ತೃಪ್ತಿತೆಯನ್ನೂ ಬೋಧನೋತ್ಸಾಹವನ್ನೂ ನೋಡಿ ಅತಿಶಯವಾದ ಕೃತಜ್ಞತೆ ವಿಶ್ವಾಸ ಗಳನ್ನು ತೋರುತ್ತಿದ್ದುದು ಆಶ್ಚರ್ಯವೇನೂ ಅಲ್ಲ. ನೈಜವಾದ ಒಳ್ಳೆಯ ತನವನ್ನು ಕಂಡರೆ ಎಂಥವರಿಗೆ ತಾನೆ ಮನಸ್ಸು ತಾನಾಗಿ ಒಲಿಯುವುದಿಲ್ಲ? ವಿದ್ಯಾರ್ಥಿಗಳಿಗೆ ಗೋಖಲೆಯವರು ಬಹು ಸುಲಭರಾಗಿದ್ದರು. ಆದರೂ ಅವರೊಡನೆ ನಯ ಭಯಗಳಿಲ್ಲದೆ ಹದ್ದುಮೀರಿ ನಡೆದುಕೊಳ್ಳುವುದಕ್ಕೆ ಯಾರಿಗೂ ಆಗುತ್ತಿರಲಿಲ್ಲ. ಅವರು ವಿದ್ಯಾರ್ಥಿಗಳೊಡನೆ ಅವಕಾಶ ದೊರೆ ತಂತೆಲ್ಲಾ ಕಲೆತು, ಅವರ ಕಷ್ಟ ಕೊರತೆಗಳನ್ನು ವಿಚಾರಿಸಿ, ಅವರಿಗೆ ಹಿತೋಪದೇಶಮಾಡುತ್ತಲೂ, ಪಾಠಗಳಲ್ಲಿ ಸಹಾಯಮಾಡುತ್ತಲೂ, ಇತರ ವಿಧಗಳಲ್ಲಿ ಅವರ ಪುರೋಭಿವೃದ್ಧಿಗೆ ಮಾರ್ಗದರ್ಶಕರಾಗುತ್ತಲೂ ಇದ್ದರು. ಅವರು ಮುಂದೆ ಪ್ರಜಾನಾಯಕರಾಗಿ ದೇಶಸಂಚಾರಮಾಡುತ್ತಿದ್ದಾಗ ಅವರು ಹೋದ ಸ್ಥಳಗಳಲ್ಲೆಲ್ಲಾ ವಿದ್ಯಾರ್ಥಿಗಳು ಅವರ ದರ್ಶನಕ್ಕೆಂದು ತಂಡೋಪತಂಡವಾಗಿ ಹೋಗಿ, ಮಾತನಾಡಿ, ಆಶೀರ್ವಾದ ಪಡೆದು ಬರುತ್ತಿದ್ದರು. ಮೇಧಾಶಕ್ತಿಯನ್ನೂ ಉತ್ತಮ ಶೀಲವನ್ನೂ ಪಡೆದ ಯುವಕರ ವಿಷಯದಲ್ಲಿ ಗೋಖಲೆಯವರು ವಿಶೇಷ ವಾತ್ಸಲ್ಯವನ್ನು

ತೋಗುತ್ತಿದ್ದರು. ದೇಶೋದ್ಧಾರಕ್ಕೆ ತರುಣರು ಹೇಗೆ ಸಹಾಯವಾಗಬಹುದೆಂಬುದನ್ನು ಕುರಿತು ಅವರು ಸಭೆಗಳಲ್ಲಿ ಉಪನ್ಯಾಸಮಾಡುತ್ತಿದ್ದುದಲ್ಲದೆ, ತಮ್ಮ ಬಳಿಗೆ ಬಂದವರಿಗೆ ಅವರ ಸಂದರ್ಭವರಿತು ಬುದ್ಧಿವಾದ ಹೇಳುತ್ತಿದ್ದರು. ಪ್ರತಿಯೊಬ್ಬ ವಿದ್ಯಾರ್ಥಿಯೂ ತಾನು ದೊಡ್ಡವನಾದಮೇಲೆ ಪುಸ್ತಕಗಳಿಗೆ ಧೂಪಹಾಕದೆ, ತನಗೆ ಅನುಕೂಲವಿದ್ದಂತೆ ಯಾವುದಾದರೊಂದು ಶಾಸ್ತ್ರ ಪರಿಶ್ರಮಕ್ಕೆ ವಿಶೇಷ ಗಮನಕೊಟ್ಟು, ಅದರಲ್ಲಿ ಪಾರಂಗತನಾಗಲು ಯತ್ನಿಸುವುದರ ಮೂಲಕ, ದೇಶದ ಜ್ಞಾನಸಧನವನ್ನೂ ಕೀರ್ತಿಯನ್ನೂ ಹೆಚ್ಚಿಸಬೇಕೆಂದು ಅವರು ಬೋಧಿಸುತ್ತಿದ್ದರು. ಅವರ ಪ್ರೇರಣೆಯಿಂದ ದೇಶಸೇವೆಯ ದಾರಿಯಲ್ಲಿ ಹೊರಟು ಪ್ರಸಿದ್ಧಿಗೆ ಬಂದವರು ಅನೇಕರಿರುವರು. ಗೋಖಲೆಯವರಿಗೆ ಕಡೆಯವರೆಗೂ ವಿದ್ಯಾರ್ಥಿಗಳ ಪ್ರೀತಿ ಗೌರವಗಳು ಮತ್ತಾರಿಗೂ ಲಭಿಸದಷ್ಟು ಅತಿಶಯವಾಗಿ ದೊರೆತಿದ್ದುವು. ಅದರಿಂದ ಅವರಿಗೆ ಆಗುತ್ತಿದ್ದ ಸಂತೋಷವನ್ನು ಇನ್ನಾವ ಸಂತೋಷವೂ ಮೀರಿಸಬಲ್ಲುದಾಗಿರಲಿಲ್ಲ.

---

## ಪ್ರಕರಣ ೩ — ರಂಗ ಪ್ರವೇಶ

ರಾನಡೆಯವರ ಪ್ರಭಾವ—ಜನಪದ ಮಹಾಸಭೆ—ಪ್ರಜಾ ಸೇವೆ—ಇಂಗ್ಲೆಂಡಿಗೆ ಪ್ರಯಾಣ—ಪಶ್ಚಾತ್ತಾಪದ ಸಂದರ್ಭ—ಪೌರಸಭೆ—ಬೊಂಬಾಯಿ ಶಾಸನ ಸಭೆ

ಗೋಖಲೆಯವರು ಫರ್ಗ್ಯುಸನ್ ವಿದ್ಯಾಶಾಲೆಯಲ್ಲಿ ಬೋಧಕರಾಗಿದ್ದ ಕಾಲದಲ್ಲಿ ಮತ್ತೊಬ್ಬ ಮಹಾರಾಷ್ಟ್ರ ಮಹನೀಯರು ಪೂನಾ ಪಟ್ಟಣದಲ್ಲಿ ವಾಸಮಾಡುತ್ತಿದ್ದರು. ಅವರ ಹೆಸರು ಮಹಾದೇವ ಗೋವಿಂದ ರಾನಡೆ ಎಂದು. ಅವರು ದೊಡ್ಡ ವಿದ್ವಾಂಸರಾಗಿ, ಸರಕಾರದಲ್ಲಿ ದೊಡ್ಡ ಅಧಿಕಾರ ಗೌರವವನ್ನು ಸಂಪಾದಿಸಿ, ಕಡೆಗೆ ಬೊಂಬಾಯಿ ಹೈ ಕೋರ್ಟಿನ ಜಡ್ಜಿ ಪದವಿಗೆ ಹತ್ತಿದ್ದರು. ಆ ಪ್ರಖ್ಯಾತ ಪುರುಷರು ನಮ್ಮ ದೇಶದ ಚರಿತ್ರೆ, ಆರ್ಥಿಕ ಸಂಪತ್ತು, ರಾಜಕೀಯ ಸ್ಥಿತಿ, ಸಾಮಾಜಿಕ ಸ್ಥಿತಿ, ಮತಾಚಾರಗಳು—ಇವುಗಳನ್ನು ಕುರಿತ ವಿಷಯ ವಿಚಾರಣೆಯಲ್ಲಿಯೇ ಸರ್ವದಾ ಮಗ್ನರಾಗಿ, ದೇಶಾಭ್ಯುದಯಕಾರಕಗಳಾದ ಅನೇಕ ಉದಾತ್ತ ತತ್ತ್ವಗಳನ್ನು ಉಪ

ನ್ಯಾಸಗಳ ಮೂಲಕವೂ ಲೇಖನಗಳ ಮೂಲಕವೂ ಬೋಧಿಸುತ್ತಿದ್ದರು. ಈ ರಾನಡೆಯವರ ಅಭಿಮಾನವನ್ನು ಗೋಖಲೆಯವರು ಸಂಪಾದಿಸಿ, ಅವರ ಮೇಲ್ಪಂಕ್ತಿಯನ್ನನುಸರಿಸುತ್ತ, ಅವರ ಬಳಿ ವಿವಿಧ ಗ್ರಂಥಗಳನ್ನು ಪಾಠ ಮಾಡಿ, ದೇಶಕಾರ್ಯ ರೀತಿಯ ಜ್ಞಾನವನ್ನು ಸಂಗ್ರಹಿಸುತ್ತಿದ್ದರು. ಅವರ ಈ ಶಿಷ್ಯ ವೃತ್ತಿಯು ೧೪ ವರ್ಷಕಾಲ ನಡೆಯಿತು. ಗೋಖಲೆಯವರ ಅರ್ಥ ಶಾಸ್ತ್ರ ವ್ಯಾಸಂಗಕ್ಕೆ ಬೀಜಬಿತ್ತಿ ಅದನ್ನು ಬೆಳಿಸಿದವರು ರಾನಡೆಯವರೇ. ಗೋಖಲೆಯವರು ರಾನಡೆಯವರಲ್ಲಿ ಎಂತಹ ಗುರುಭಕ್ತಿಯನ್ನಿಟ್ಟಿದ್ದರೆಂಬುದು ಈ ಗ್ರಂಥದಲ್ಲಿ ಮುಂದೆ ಕೊಟ್ಟಿರುವ ಅವರ ರಾನಡೇ ಗುಣಕಥನದಿಂದ ಸ್ವಲ್ಪಮಟ್ಟಿಗೆ ವ್ಯಕ್ತವಾಗುವುದು.

ಒಂದುಕಡೆ ಅಧ್ಯಾಪಕರಾಗಿಯೂ, ಇನ್ನೊಂದುಕಡೆ ಅಧ್ಯೇತೃಗಳಾಗಿಯೂ ಇದ್ದ ಕಾಲದಲ್ಲಿಯೇ, ರಾಜಕೀಯ ಕಾರ್ಯರಂಗದೊಳಕ್ಕೂ ಗೋಖಲೆಯವರಿಗೆ ಪ್ರವೇಶವಾಯಿತು. ಪುಣೆಯಲ್ಲಿ ಆಗ "ಸಾರ್ವಜನಿಕ ಸಭಾ" ಎಂಬ ಒಂದು ರಾಜಕೀಯ ಸಂಘವಿತ್ತು. ದೇಶೀಯರ ಯೋಗಕ್ಷೇಮಗಳಿಗೆ ಸಂಬಂಧಪಟ್ಟ ವಿಚಾರಗಳನ್ನು ಚರ್ಚಿಸಿ, ಅದರಿಂದ ಆದ ಸಿದ್ಧಾಂತಗಳನ್ನು ಸರಕಾರದವರ ಪರ್ಯಾಲೋಚನೆಗೆ ತರುವುದೇ ಆ ಸಭೆಯ ಉದ್ದೇಶವಾಗಿತ್ತು. ಗೋಖಲೆಯವರು ಆ ಸಭೆಗೆ ಕಾರ್ಯದರ್ಶಿಯಾಗಿಯೂ, ಆ ಸಭೆಯು ಪ್ರಕಟಿಸುತ್ತಿದ್ದ ತ್ರೈಮಾಸಿಕ ಪತ್ರಿಕೆಗೆ (ಎಡಿಟರ್) ಸಂಪಾದಕರಾಗಿಯೂ ನಿಯಮಿತರಾದರು. ಸ್ವಲ್ಪಕಾಲದಮೇಲೆ "ಸುಧಾರಕ"ವೆಂಬ ಮರಾಠೀ ಇಂಗ್ಲಿಷ್ ವಾರ ಪತ್ರಿಕೆಗೂ ಅವರು ಚಾಲಕರಾಗಬೇಕಾಯಿತು. ಈ ದ್ವಿಭಾಷೀಯ ಪತ್ರಿಕೆಯು ಅಗರ್‌ಕರ್ ಅವರದೆಂದು ಹಿಂದೆ ತಿಳಿದಿರುವೆವು. ಅಗರ್‌ಕರ್ ಅವರು ಅತ್ಯುತ್ತಮ ಮರಾಠೀ ಲೇಖಕರು, ಮತ್ತು ತೀವ್ರಗತಿಯ ಸಮಾಜ ಸಂಸ್ಕಾರ ವಾದಿಗಳು. ಅವರು ಆ ಪತ್ರಿಕೆಯ ದೇಶಭಾಷಾ ಭಾಗವನ್ನು ತಾವೇ ನಡಿಸುವವರಾಗಿ, ಇಂಗ್ಲಿಷ್ ಭಾಗವನ್ನು ಗೋಖಲೆಯವರಿಗೊಪ್ಪಿಸಿದ್ದರು. ಈ ಪತ್ರಿಕಾ ಲೇಖನೋದ್ಯೋಗದಿಂದ ದೇಶಕ್ಕೂ ಲೇಖಕರಿಗೂ ಕೂಡ ಪ್ರಯೋಜನವಾಯಿತೆಂದು ಹೇಳಬೇಕಾದುದಿಲ್ಲ. ಜನರಿಗೆ ಹೊಸ ತಿಳಿವಳಿಕೆ

ದೊರೆಯಿತು; ಗೋಖಲೆಯವರ ಲೇಖಣಿಯು ಕುದುರಿತು. ಇಷ್ಟೇ ಅಲ್ಲದೆ, ಬೊಂಬಾಯಿ ಪ್ರಾಂತದ "ಪ್ರೊವಿನ್ಷಲ್ ಕಾನ್ಫರೆನ್ಸ್" ಎಂಬ ಪ್ರಜಾ ಸಮ್ಮೇಳನಕ್ಕೂ, ಆಮೇಲೆ ಪುಣೆಯಲ್ಲಿ ನಡೆದ "ಕಾಂಗ್ರೆಸ್" ಎಂಬ ಮಹಾ ಜನಪದ ಸಭೆಗೂ ೧೮೯೫ರಲ್ಲಿ ಗೋಖಲೆಯವರು ಕಾರ್ಯದರ್ಶಿಯಾಗಿ ಕೆಲಸ ಮಾಡಬೇಕಾಯಿತು. ಈಗ ಕಾಂಗ್ರೆಸ್ಸನ್ನು ಕುರಿತು ಒಂದೆರಡು ಮಾತನ್ನು ಹೇಳುವುದು ಇಲ್ಲಿ ಅವಶ್ಯವಾಗಿದೆ.

"ಇಂಡಿಯನ್ ನ್ಯಾಷನಲ್ ಕಾಂಗ್ರೆಸ್" ಎಂಬ ಭಾರತ ಜನ ಮಹಾಸಭೆಯು ೧೮೮೪-೮೫ನೆಯ ಇಸ್ವಿಗಳಲ್ಲಿ ಹುಟ್ಟಿತು. ಸರಕಾರದ ಆಡಳಿತಗಳಲ್ಲಿಯ ಹೆಚ್ಚು ಕಡಿಮೆಗಳಿಂದ ಪ್ರಜೆಗಳಿಗೆ ಆಗಿರುವ ಕುಂದು ಕೊರತೆಗಳನ್ನು ವಿವರಿಸಿ, ರಾಜ್ಯಭಾರ ನಿರ್ವಾಹ ಕ್ರಮವನ್ನು ತಿದ್ದುಪಾಟಿಗೆ ತರುವುದೂ, ದೇಶೀಯರಲ್ಲಿ ಐಕಮತ್ಯವನ್ನು ಬೆಳೆಯಿಸುವುದೂ ಆ ಮಹಾ ಸಭೆಯ ಮುಖ್ಯೋದ್ದೇಶಗಳಾಗಿದ್ದುವು. ಅದಕ್ಕೆ ಹಿಂದೆ ಅನೇಕ ವರ್ಷಗಳಿಂದಲೂ ಇಂಡಿಯಾ ದೇಶದ ಜನಪ್ರಮುಖರು ರಾಜಕೀಯ ವಿಚಾರಗಳಲ್ಲಿ ಅಸಮಾಧಾನಗೊಂಡಿದ್ದರು. ವಿದೇಶೀಯರು ಈ ದೇಶದಲ್ಲಿ ನಡಸುತ್ತಿದ್ದ ಪ್ರಭುತ್ವದ ರೀತಿಯು ನಮ್ಮ ಜನರಿಗೆ ಸಮರ್ಪಕವಾಗದೆ ಹೋದುದೂ, ದೇಶ ಪರಿಪಾಲನಾಕಾರ್ಯದಲ್ಲಿ ಸ್ವದೇಶೀಯರಿಗೇ ಹೆಚ್ಚು ಅಧಿಕಾರವಿರಬೇಕೆಂಬ ಅಪೇಕ್ಷೆಯು ನಮ್ಮ ವಿದ್ಯಾವಂತರಲ್ಲಿ ತಲೆದೋರಿದುದೂ ಸ್ವಾಭಾವಿಕವಾಗಿಯೇ ಇವೆ. ಪ್ರಜೆಗಳ ಈ ಅಸಂತೃಪ್ತಿಯು ಬಹು ದಿವಸಗಳಿಂದ ಬಹು ವಿಧಗಳಲ್ಲಿ ಪ್ರಕಾಶಕ್ಕೆ ಬರುತ್ತಿದ್ದರೂ, ಅದನ್ನು ಕಾರ್ಯಕಾರಿಯಾಗುವ ರೂಪಕ್ಕೆ ತಿರುಗಿಸುವುದಕ್ಕಾಗಿ, ನಿಖಿಲ ಭರತಖಂಡದ ಪ್ರತಿನಿಧಿಗಳೂ ನಾನಾಭಾಗಗಳಿಂದ ಬಂದು ಒಂದೆಡೆಯಲ್ಲಿ ಒಟ್ಟುಗೂಡಿ, ಮಹಾಜನರ ಅಭಿಪ್ರಾಯವನ್ನು ಏಕಕಂಠದಿಂದ ನುಡಿಯಬೇಕೆಂಬ ಪ್ರಯತ್ನವು ೧೮೮೪ಕ್ಕೆ ಹಿಂದೆ ನಡೆದಿರಲಿಲ್ಲ. ಅದರ ಯೋಚನೆಯು ಮೊದಲು ಆ ವರ್ಷದ ಡಿಸೆಂಬರು ತಿಂಗಳಲ್ಲಿ, ಮದ್ರಾಸು ಪಟ್ಟಣದಲ್ಲಿ, ಬೇರೊಂದು ಕಾರ್ಯಕ್ಕಾಗಿ ಸೇರಿದ್ದ ೧೫-೨೦ ಮಂದಿಯಲ್ಲಿ ಪ್ರಾರಂಭವಾಯಿತು. ನಮ್ಮ ದೇಶದ ಚರಿತ್ರೆಯಲ್ಲಿ ಪ್ರಸಿದ್ಧರಾದ ದಾದಾಭಾಯಿ ನವರೋಜಿ,

ಸರ್ ಸುರೇಂದ್ರನಾಥ ಬಾನರ್ಜಿ, ಸರ್ ಸುಬ್ರಹ್ಮಣ್ಯಯ್ಯರ್, ಕಾಶೀನಾಥ ತ್ರ್ಯಂಬಕ ಟೆಲಂಗ್, ವಿ. ಎನ್. ಮಾಂಡಲಿಕ್, ನರೇಂದ್ರನಾಥ ಸೇನ್— ಮೊದಲಾದವರು ಈ ಮಹಾಸಭೆಯ ಪ್ರಥಮ ಸೂಚಕರ ಪೈಕಿ ಸೇರಿದ್ದರು. ಮುಂದಿನ ವರ್ಷ—ಎಂದರೆ ೧೮೮೫ರಲ್ಲಿ, ಗೋಖಲೆಯವರು ಫರ್ಗ್ಯುಸನ್ ಕಾಲೇಜಿನಲ್ಲಿ ಉಪಾಧ್ಯಾಯರಾದ ಸ್ವಲ್ಪಕಾಲದೊಳಗೆ,—ಮತ್ತು ಮೈಸೂರಿನ ಪ್ರಜಾಪ್ರತಿನಿಧಿ ಸಭೆಯು ಸ್ಥಾಪಿತವಾಗಿ ನಾಲ್ಕು ವರ್ಷಗಳಾಗಿದ್ದಾಗ—ಆ ಯೋಚನೆಯು ಪೂನಾ ಪಟ್ಟಣದಲ್ಲಿ ಕಾರ್ಯರೂಪಕ್ಕೆ ಒರುವುದಾಗಿತ್ತು. ಆದರೆ, ಅಲ್ಲಿ ಕಾಲರಾ ವ್ಯಾಧಿಯು ತಲೆದೋರಿದ ಕಾರಣದಿಂದ, ಅಲ್ಲಿ ಸೇರಬೇಕಾಗಿದ್ದ ಸಭೆಯು ಅದೇ ಡಿಸೆಂಬರಿನಲ್ಲಿ ಬೊಂಬಾಯಿ ಪಟ್ಟಣದಲ್ಲಿ ಸೇರಿತು. ಆಗ ೭೦-೮೦ ಮಂದಿ ಸಭಿಕರು ಇದ್ದರು. ಅವರೇ ಆ ಮಹಾಸಭೆಯ ಪ್ರತಿಷ್ಠಾಪಕರು. ಆ ಸಭೆಯ ದ್ವಿತೀಯ ಸಮ್ಮೇಳನವು ೧೮೮೬ರ ಡಿಸೆಂಬರಿನಲ್ಲಿ ಕಲ್ಕತ್ತೆಯಲ್ಲಿ ನಡೆಯಿತು; ಆಗ ೫೦೦ ಮಂದಿ ದೇಶದ ಪ್ರತಿನಿಧಿಗಳಾಗಿ ಬಂದಿದ್ದರು. ಹೀಗೆ ಸ್ವಲ್ಪಸ್ವಲ್ಪವಾಗಿ, ಆಡಂಬರ ಗಲಭೆಗಳಿಲ್ಲದೆ ಪ್ರಾರಂಭವಾದ ಜನಪದ ಮಹಾಸಭೆಯು ವರ್ಷದಿಂದ ವರ್ಷಕ್ಕೆ ದೊಡ್ಡದಾಗುತ್ತಾ, ಒಂದೊಂದು ವರ್ಷ ಇಂಡಿಯಾ ದೇಶದ ಒಂದೊಂದು ಪ್ರಾಂತದ ಮುಖ್ಯ ಪಟ್ಟಣದಲ್ಲಿ ಸೇರುತ್ತಾ, ರಾಜ್ಯಯಂತ್ರದ ನಾನಾ ಭಾಗ ವಿಭಾಗಗಳ ನ್ಯೂನಾತಿರೇಕಗಳನ್ನು ತೋರಿಸಿಕೊಡುತ್ತಾ, ಜನರಿಗೆ ತಮ್ಮ ಹಕ್ಕುಬಾಧ್ಯತೆಗಳನ್ನೂ ಸರಕಾರಕ್ಕೆ ಅದರ ಕರ್ತವ್ಯಗಳನ್ನೂ ಸಾರಿ ಹೇಳುತ್ತಾ ಬೆಳೆದು, ಭಾರತೀಯರ ದೇಶವಾತ್ಸಲ್ಯ ಪ್ರಜಾಧರ್ಮಗಳಿಗೆ ಪ್ರತಿಬಿಂಬವೂ ಪ್ರೇರಕವೂ ಸಹ ಆಗಿ, ಬರಬರುತ್ತ ಹತ್ತಾರು ಸಾವಿರ ಮಂದಿಯನ್ನಾಕರ್ಷಿಸಿಕೊಂಡು, ಅನೇಕ ಶಾಖೋಪಶಾಖೆಗಳಿಂದೊಡಗೂಡಿ, ಈಗ ಲೋಕ ವಿಖ್ಯಾತವಾಗಿದೆ. ಅದಕ್ಕೆ ಈ ಔನ್ನತ್ಯವನ್ನು ಸಂಪಾದಿಸಿಕೊಟ್ಟವರಲ್ಲಿ ಗೋಖಲೆಯವರೂ ಒಬ್ಬರು. ಅವರ ಕಾಲದಲ್ಲಿ ಮಹಾಸಭೆಯ ಉದ್ದೇಶ ಕಾರ್ಯರೀತಿಗಳು ಹೇಗೆ ವಿಸ್ತಾರಗೊಂಡವೆಂಬುದನ್ನು ಆ ಸಭೆಯು ೧೯೦೮ರಲ್ಲಿ ಅಂಗೀಕರಿಸಿದ ಮೊದಲನೆಯ ನಿಬಂಧನೆಯಿಂದ ತಿಳಿಯಬಹುದು. ಅದರ ರಚನೆಯಲ್ಲಿ ಅವರ ಕೈ ಸೇರಿದ್ದಿ

ಕಾದ ಕಾರಣ, ಅದೇ ಅವರ ರಾಜಕೀಯ ಮತದ ಸಂಕ್ಷೇಪ ನಿರೂಪಣೆ ಯೆಂದು ನಾವು ಭಾವಿಸಬಹುದು. ಆ ನಿಬಂಧನೆಯು ಹೀಗಿರುವುದು :—

"ಭಾರತೀಯ ಜನಪದ ಮಹಾಸಭೆಯ ಉದ್ದೇಶಗಳಾವುವೆಂದರೆ :— ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಸ್ವರಾಜ್ಯ* ಸಂಪನ್ನಗಳಾಗಿರುವ (ಎಂದರೆ, ತಮ್ಮ ತಮ್ಮ ಆಳಿಕೆಯ ಜವಾಬ್ದಾರಿಯನ್ನು ತಾವು ತಾವೇ ವಹಿಸಿಕೊಂಡಿರುವ, ಕೆನಡಾ, ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕಾ ಮುಂತಾದ) ಅಂತರ್ಗತರಾಷ್ಟ್ರಗಳು ಎಂಥಾ ರಾಜಕೀಯ ವ್ಯವಸ್ಥೆಯನ್ನು ಪಡೆದುಕೊಂಡಿವೆಯೋ ಅಂಥಾ ಸ್ವರಾಜ್ಯ ಕ್ರಮವನ್ನೇ ಇಂಡಿಯಾ ದೇಶದ ಪ್ರಜಾಜನರೂ ಸಂಪಾದಿಸಬೇಕೆಂಬುದು ; ಮತ್ತು ಆ ಚಕ್ರಾಧಿಪತ್ಯಕ್ಕೆ ಸಂಬಂಧಪಟ್ಟಿರುವ ಎಲ್ಲ ಅಧಿಕಾರಗಳಲ್ಲಿಯೂ ಬಾಧ್ಯತೆಗಳಲ್ಲಿಯೂ ಆ ಅಂತರ್ಗತ ರಾಷ್ಟ್ರಗಳವರಿಗೆ ಸಮಾನವಾಗಿ ಇಂಡಿಯದವರೂ ಭಾಗ ಪಡೆಯಬೇಕೆಂಬುದು—ಇವು. ಈ ಉದ್ದೇಶಗಳನ್ನು ಶಾಸನ ವಿಹಿತವಾದ ರೀತಿಯಲ್ಲಿ, ಈಗಿರುವ ರಾಜ್ಯಪದ್ಧತಿಯನ್ನು ಕ್ರಮ ಕ್ರಮವಾಗಿ ಮಾರ್ಪಡಿಸಿಕೊಂಡು ಬರುವುದರಿಂದಲೂ, ಜನೈಕಮತ್ಯವನ್ನು ಬಲಪಡಿಸುವುದರಿಂದಲೂ, ಪ್ರಜಾಧರ್ಮಕ್ಕೆ ಉತ್ತೇಜನ ಕೊಡುವುದರಿಂದಲೂ, ದೇಶದಲ್ಲಿರುವ ಬುದ್ಧಿಶಕ್ತಿ, ನಯ ನೀತಿಗಳು, ಧನ ಸಂಪತ್ತು, ಯಂತ್ರ ಕಾರ್ಮಿಕ ಸಾಮಗ್ರಿ—ಇವುಗಳನ್ನು ಸಂಯೋಜನೆ ಮಾಡಿಸಿ, ಅಭಿವೃದ್ಧಿಗೊಳಿಸುವುದರಿಂಲೂ ನೆರವೇರಿಸಿಕೊಳ್ಳಬೇಕಾಗಿದೆ."

* "ಸ್ವರಾಜ್ಯ"ವೆಂಬ ಮಾತಿಗೆ ಅರ್ಥ ಮಾಡುವುದರಲ್ಲಿ "ಸ್ವ" ಎಂಬ ಉಪಪದದ ನಿಜವಾದ ಅಭಿಪ್ರಾಯವನ್ನು ಕೆಲವರು ಮರೆಯುವುದುಂಟು. "ಸ್ವ" ಎಂಬುದು ಇಲ್ಲಿ ಒಬ್ಬ ರಾಜನ, ಅಥವಾ ಒಂದು ಕುಲದ, ಪರವಾಗಿ ಉಪಯೋಗಿಸಲ್ಪಟ್ಟಿಲ್ಲ ; ಅದು ದೇಶದ ಅಶೇಷ ಪ್ರಜಾಜನರ ಪರವಾಗಿ ಉಪಯೋಗಿಸಲ್ಪಟ್ಟಿದೆ. ಅದು ಜಾತಿ ಸೂಚಕ ಮಾತ್ರವಲ್ಲ : ಪ್ರಕಾರ ಸೂಚಕವೂ ಹೌದು. ಇಂಡಿಯಾ ದೇಶದಿಂದ ಬ್ರಿಟಿಷರು ಹೊರಟುಹೋಗಿ, ಅವರ ಸ್ಥಾನದಲ್ಲಿ ಒಬ್ಬ ಭಾರತೀಯನು ನಿರಂಕುಶ ಪ್ರಭುವಾಗಿ ನಿಂತರೆ ಅದು ನಿಜವಾದ "ಸ್ವರಾಜ್ಯ"ವಾಗಲಾರದು ; ಕೇವಲ ರಾಜ್ಯಾಧಿಕಾರಿಗಳು ದೇಶೀಯರಾದ ಮಾತ್ರದಿಂದಲೂ ಅದು "ಸ್ವರಾಜ್ಯ"ವೆನಿಸದು. ರಾಜ್ಯಸೂತ್ರಗಳು ಪ್ರಜಾಜನದ ಕೈಗೆ ದೊರೆತಾಗಲೇ ದೇಶಕ್ಕೆ ದಿಟವಾಗಿ "ಸ್ವರಾಜ್ಯ" ಬಂದಂತೆ ಆಗುವುದು. ರಾಜರೂ, ರಾಜ್ಯಾಧಿಕಾರಿಗಳೂ ಸ್ವದೇಶೀಯರಾಗಿರುವುದರ ಜೊತೆಗೆ, ಅವರನ್ನು ವಿಚಾರಣೆಗೊಳಪಡಿಸಿ, ತಿದ್ದಿ, ನಡಸುವ ಸ್ವತಂತ್ರಾಧಿಕಾರವು ಪ್ರಜಾಜನ ಸಮುದಾಯದ ಕೈಯಲ್ಲಿರಬೇಕು. ಅದೇ ಸ್ವರಾಜ್ಯ.

ದೇಶಾಭ್ಯುದಯದ ರೀತಿ ಸಾಧನಗಳ ವಿವರಗಳೆಲ್ಲವೂ ಈ ವಾಕ್ಯದಲ್ಲಿ ಗರ್ಭೀಕೃತವಾಗಿವೆ. ಆ ವಿವರಗಳನ್ನು ಈ ಕೆಳಗಿನಂತೆ ವಿಸ್ತರಿಸಬಹುದು :—

೧. ಹಿಂದೂ, ಮುಸಲ್ಮಾನ್, ಜೈನ, ಪಾರಸೀಕ ಮುಂತಾದ ನಾನಾ ಮತಗಳವರಲ್ಲಿಯೂ ಜಾತಿ ವಿಜಾತಿಗಳವರಲ್ಲಿಯೂ ತಾವೆಲ್ಲರೂ ಒಂದೇ ಜನಪದಕ್ಕೆ ಸೇರಿದವರೆಂಬ ಭಾವವನ್ನು ನೆಲೆಗೊಳಿಸಿ, ದೇಶಾಭಿಮಾನವನ್ನೂ ಅದಕ್ಕೆ ಆವಶ್ಯಕವಾದ ಐಕಮತ್ಯವನ್ನೂ ಹೆಚ್ಚಿಸುವುದು.

೨. ಸರಕಾರದ ಆಡಳಿತಗಳಲ್ಲಿ ಬೇರೆ ಬೇರೆ ಇಲಾಖೆಗಳವರು ಮಾಡುವ ಅಕ್ರಮಗಳಿಂದಲೂ, ಅಶ್ರದ್ಧೆಯಿಂದಲೂ ಅನಾದರಣೆಯಿಂದಲೂ ಪ್ರಜೆಗಳಿಗೆ ಆಗುತ್ತಿರುವ ಕಷ್ಟನಷ್ಟಗಳನ್ನು ಪ್ರಕಟಪಡಿಸಿ, ಅವರ ಪ್ರತಿದಿನದ ಬದುಕು ಬಾಳುಗಳಿಗೆ ಆವಶ್ಯಕಗಳಾದ ಅನುಕೂಲ್ಯಗಳನ್ನು ಸಂಪಾದಿಸಿ ಕೊಡಲು ಸರಕಾರಕ್ಕೆ ಸಲಹೆಗಳನ್ನು ಕೊಡುವುದು.

೩. ಜನರಲ್ಲಿ ಪ್ರಜಾ ಧರ್ಮವನ್ನು—ಎಂದರೆ ಸಾರ್ವಜನಿಕ ಕ್ಷೇಮಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ವಿಚಾರಾಸಕ್ತಿಯನ್ನೂ ಕರ್ತವ್ಯ ಶ್ರದ್ಧೆಯನ್ನೂ—ಹೆಚ್ಚಿಸುವುದು.

೪. ದೇಶದಲ್ಲಿ ವಿದ್ಯಾಪ್ರಚಾರವು ಹೆಚ್ಚುವಂತೆ ಮಾಡಿಸುವುದು ; ಮತ್ತು ಯಂತ್ರಕರ್ಮ ಕೈಗಾರಿಕೆ ಕುಶಲ ಕಲೆಗಳೂ, ವ್ಯಾಪಾರವೂ ಹೆಚ್ಚಿ, ದೇಶದ ಸಂಪತ್ತು ಅಭಿವೃದ್ಧಿಯಾಗಲು ತಕ್ಕ ಏರ್ಪಾಟುಗಳನ್ನು ಮಾಡಿಸುವುದು.

೫. ದೇಶದ ಸರಕಾರದಲ್ಲಿ ಪ್ರಜಾಧಿಕಾರವು ಕ್ರಮೇಣ ಹೆಚ್ಚಿ, ವೇತನ ಗ್ರಾಹಿಗಳ ಪ್ರಾಬಲ್ಯವು ತಗ್ಗುವಂತೆಯೂ, ಅಧಿಕಾರಿ ವರ್ಗದಲ್ಲಿ ದೇಶೀಯರ ಸಂಖ್ಯೆಯು ಹೆಚ್ಚಿ ವಿದೇಶೀಯರು ಕಡಮೆಯಾಗುವಂತೆಯೂ ರಾಜ್ಯಯಂತ್ರದ ರಚನೆಯನ್ನು ಪರಿಷ್ಕಾರಗೊಳಿಸುವುದು.

೬, ಅನ್ಯ ದೇಶಗಳಲ್ಲಿ ಇಂಡಿಯಾ ದೇಶಕ್ಕೆ ಮನ್ನಣೆಯು ಹೆಚ್ಚಾಗಿ ದೊರಕಿ, ತನ್ನ ಯೋಗಕ್ಷೇಮಗಳಿಗೆ ಸೇರಿದ ಎಲ್ಲಾ ವಿಷಯಗಳಲ್ಲಿಯೂ ಇಂಡಿಯಾ ದೇಶವು ಸ್ವತಂತ್ರವಾಗಿ ನಡೆಯಲಾಗುವಂತೆಯೂ ಇತರ ಜನಪದಗಳವರೊಡನೆ ಭಾರತೀಯರು ಸಮಾನಸ್ಕಂಧರಾಗಿ ನಿಲ್ಲಲಾಗುವಂತೆಯೂ ಮಾಡಿಸುವುದು.

ಹೀಗೆ ಬಹುಮುಖವಾಗಿರುವ ಮಹಾ ಸಮಾರಂಭವನ್ನು ನಡಸಿಕೊಂಡುಬಂದಿರುವ ಜನಪದ ಸಭೆಯ ಪ್ರತಿಷ್ಠಾಪಕರಲ್ಲಿಯೂ ಪ್ರಮುಖರಲ್ಲಿಯೂ ಅತಿ ಮುಖ್ಯರಾದ ಕೆಲವರ ಹೆಸರುಗಳನ್ನಾದರೂ ಇಲ್ಲಿ ಸ್ಮರಣೆಗೆ ತಂದುಕೊಳ್ಳುವುದು ನಮಗೆ ಕರ್ತವ್ಯವಾಗಿದೆ. ಅವರು ಯಾರು ಯಾರೆಂದರೆ :—

**ದಾದಾಭಾಯಿ ನವರೋಜಿ**—ಇವರು ಭಾರತೀಯ ಕುಲವೃದ್ಧರೆನಿಸಿಕೊಂಡಿದ್ದ ಮಹಾಪುರುಷರು. ಅವರ ಸತ್ಯಸಂಧತೆಯನ್ನೂ ಸಾಧುವರ್ತನೆಯನ್ನೂ ಬ್ರಿಟಿಷ್ ಜನರು ಮೆಚ್ಚಿ, ಅವರನ್ನು ತಮ್ಮ ಪಾರ್ಲಿಮೆಂಟು ಸಭೆಗೆ ಪ್ರತಿನಿಧಿಯಾಗಿ ಆರಿಸಿಕೊಂಡಿದ್ದರು. ಅವರು ತಮ್ಮ ಯಾವಜ್ಜೀವವನ್ನೂ ಸ್ವದೇಶ ಸೇವೆಯಲ್ಲಿಯೇ ಕಳೆದರು. "ಸ್ವರಾಜ್ಯ"ವೆಂಬ ಪದವು ಮೊಟ್ಟಮೊದಲು ಹೊರಟುಬಂದುದು ಅವರ ಮುಖದಿಂದ. ಅವರು ಕಾಂಗ್ರೆಸ್ಸನ್ನು ಸ್ಥಾಪನೆಮಾಡಿದವರಲ್ಲೊಬ್ಬರು. ಗೋಖಲೆಯವರು ಅವರನ್ನು ಗುರುಸ್ಥಾನದಲ್ಲಿರಿಸಿಕೊಂಡಿದ್ದರು.

**ಡಾಕ್ಟರ್ (ಸರ್) ಎಸ್. ಸುಬ್ರಹ್ಮಣ್ಯ ಅಯ್ಯರ್**—ಇವರೂ ಕಾಂಗ್ರೆಸ್ಸನ್ನು ಪ್ರಾರಂಭಿಸಿದವರ ಪೈಕಿ ಒಬ್ಬರು. ಇವರು ಮೊದಲು ವಕೀಲರಾಗಿದ್ದು ಆ ಮೇಲೆ ಮದ್ರಾಸು ಹೈಕೋರ್ಟಿನ ಮುಖ್ಯ ನ್ಯಾಯಾಧೀಶಪದವಿಗೆ ಹತ್ತಿ, ಆಮೇಲೆ ಪ್ರಜಾಪಕ್ಷಕ್ಕೆ ಆಧಾರ ಸ್ತಂಭದಂತೆ ಇದ್ದರು.

**ಉಮೇಶಚಂದ್ರ ಬಾನರ್ಜಿ**—ಇವರೂ ಕಾಂಗ್ರೆಸ್ಸನ್ನು ಮೊದಲಿನಿಂದ ಬಲ್ಲವರು. ಕಲ್ಕತ್ತೆಯಲ್ಲಿ ವಕೀಲರಾಗಿದ್ದವರು.

**ಸರ್ ಫೆರೋಸ್ ಷಾ ಮೇಥಾ**—ಇವರು ಕಾಂಗ್ರೆಸ್ ಮುಖಂಡರಲ್ಲೊಬ್ಬರು. ಬೊಂಬಾಯಲ್ಲಿ ವಕೀಲರಾಗಿದ್ದರು. ಪ್ರಸಿದ್ಧ ವಾಗ್ಮಿಗಳು; ನಿರ್ಭೀತರಾದ ಪ್ರಜಾಪಕ್ಷವಾದಿಗಳು.

**ಜಿ. ಸುಬ್ರಹ್ಮಣ್ಯಯ್ಯರ್**—ಇವರೂ ಒಳ್ಳೆಯ ವಾಗ್ಮಿ. ಮದ್ರಾಸಿನ "ಹಿಂದೂ" ಮತ್ತು "ಸ್ವದೇಶ ಮಿತ್ರನ್" ಎಂಬ ಇಂಗ್ಲೀಷ್ ಮತ್ತು ತಮಿಳು ದಿನ ಪತ್ರಿಕೆಗಳನ್ನು ಸ್ಥಾಪಿಸಿದವರು.

**ರಮೇಶ ಚಂದ್ರ ದತ್ತ**—ಇವರು ಮೊದಲು ಸಿವಿಲ್ ಸರ್ವಿಸ್ಸಿನಲ್ಲಿ ದೊಡ್ಡ ಅಧಿಕಾರದಲ್ಲಿದ್ದವರು. ಪಂಡಿತರು ಮತ್ತು ಕಾವ್ಯೇತಿಹಾಸಾದಿ ಗ್ರಂಥಕರ್ತರು.

**ಬದ್ರುದ್ದೀನ್ ತಯ್ಯಾಬ್ಜಿ**—ಮೊದಲು ವಕೀಲರಾಗಿದ್ದು, ಆಮೇಲೆ ಬೊಂಬಾಯಿ ಹೈಕೋರ್ಟು ಜಡ್ಜಿಯಾದವರು.

* **ಸರ್ ದೀನ್ಷಾ ವಾಚಾ**—ಬೊಂಬಾಯಿ ಪಟ್ಟಣದ ವರ್ತಕರು. ಸರಕಾರವು ತೆಗೆದುಕೊಳ್ಳುವ ಸುಂಕ ತೆರಿಗೆಗಳ ಮತ್ತು ಸರಕಾರವು ಮಾಡುವ ವೆಚ್ಚಗಳ ಲೆಕ್ಕಪತ್ರಗಳನ್ನು ವಿಮರ್ಶೆಗೆ ತರುವುದರಲ್ಲಿ ಗಟ್ಟಿಗರು ಮತ್ತು ನಿರ್ದಾಕ್ಷಿಣ್ಯವಂತರಾಗಿದ್ದವರು.

---

* ಈ ಗುರುತಿನ ಬಳಿಯ ಹೆಸರುಗಳವರು ನಮ್ಮ ಸುಯೋಗದಿಂದ ಈಗಲೂ ದೇಶಸೇವೆ ಮಾಡುತ್ತಿರುವರು. ಅವರು ದೀರ್ಘಾಯುಗಳಾಗಿರಲಿ.

**ಸಿ. ಕರುಣಾಕರ ಮೀನನ್**—ಮದ್ರಾಸಿನಲ್ಲಿ "ಇಂಡಿಯನ್ ಪೇಟ್ರಿಯಟ್" ಎಂಬ ಇಂಗ್ಲಿಷ್ ದಿನಪತ್ರಿಕೆಯನ್ನು ನಡಿಸುತ್ತಿದ್ದವರು. ಮೈಸೂರಿನ ಪ್ರಜೆಗಳ ಸ್ನೇಹಿತರಾಗಿದ್ದವರು.

**ಬಾಲಗಂಗಾಧರ ತಿಲಕ**—ಮಹಾ ಪ್ರಸಿದ್ಧರು. "ಕೇಸರೀ" ಪತ್ರಕರ್ತರು. ಇವರ ವಿಷಯವನ್ನು ಹಿಂದೆ ಹೇಳಿದೆ.

**ಬಿಪಿನ್‌ಚಂದ್ರ ಪಾಲ್**—ಬಂಗಾಳಾದೇಶದ ಪ್ರಸಿದ್ಧ ವಾಗ್ಮಿಗಳು ಮತ್ತು ಲೇಖಕರು.

**ಸರ್ ಸುರೇಂದ್ರನಾಥ ಬಾನರ್ಜಿ**—ಅತಿ ಪ್ರಸಿದ್ಧ ವಾಗ್ಮಿಗಳು; "ಬಂಗಾಲೀ" ಪತ್ರಿಕೆಯನ್ನು ಸ್ಥಾಪಿಸಿದವರು. ಸರಕಾರೀ ಉದ್ಯೋಗಕ್ಕೆ ರಾಜೀನಾಮೆ ಕೊಟ್ಟು ಪ್ರಜಾಪಕ್ಷವನ್ನು ಹಿಡಿದವರು.

**ನವಾಬ್ ಸೈಯದ್ ಮಹಮುದ್ ಬಹಾದೂರ್**—ಭಾರೀ ಜಹಗೀರ್‌ದಾರರು; ದೊಡ್ಡ ಮನೆತನದವರು.

**ಮಜರ್‌ಹುಲ್ ಹಕ್**—ಕಲ್ಕತ್ತೆಯಲ್ಲಿ ವಕೀಲರಾಗಿದ್ದವರು.

* **ಸರ್ ಶಂಕರನ್ ನಾಯರ್**—ಮದ್ರಾಸಿನಲ್ಲಿ ವಕೀಲರಾಗಿದ್ದು ಹೈಕೋರ್ಟು ಜಡ್ಜಿಯಾದವರು. ಕಡೆಗೆ ವೈಸ್ರಾಯರ ಮಂತ್ರಿ ಮಂಡಲಕ್ಕೂ ಹತ್ತಿದರು.

**ವಿ. ಕೃಷ್ಣಸ್ವಾಮಯ್ಯರ್**—ಮದ್ರಾಸಿನಲ್ಲಿ ವಕೀಲರಾಗಿದ್ದು ಅಲ್ಲಿಯ ಗವರ್ನರವರ ಕೌನ್ಸಿಲ್ ಮೆಂಬರ್ ಪದವಿಗೆ ಹತ್ತಿದವರು.

**ದಿವಾನ್ ಬಹದ್ದೂರ್ ಪಿ. ಕೇಶವಪಿಳ್ಳೆ**—ಗುತ್ತಿಯ ವಕೀಲರು; ಮದರಾಸಿನ ಶಾಸನಸಭೆಗೆ ಉಪಾಧ್ಯಕ್ಷರಾಗಿದ್ದವರು.

**ಲಾಲಾ ಲಜಪತರಾಯ್**—ಲಾಹೋರಿನ ವಕೀಲರು; ಮಹಾ ಧೈರ್ಯಸಾಹಸಗಳುಳ್ಳವರು. ಅತಿ ಪ್ರಸಿದ್ಧರು.

ಇನ್ನೂ ಎಷ್ಟೋ ಮಂದಿ ದೇಶಭಕ್ತರ ಹೆಸರುಗಳನ್ನು ಸ್ಥಳಾಭಾವದಿಂದ ಇಲ್ಲಿ ಹೇಳದೆ ಬಿಟ್ಟಿದೆ. ಈ ಪ್ರಜಾವರ್ಗೀಯ ಜನರಲ್ಲದೆ, ಸರಕಾರೀ ಉದ್ಯೋಗಗಳಲ್ಲಿದ್ದ ರಾನಡೆಯವರು, ದಿವಾನ್ ಬಹದ್ದೂರ್ ಆರ್. ರಘುನಾಥರಾಯರು ಮೊದಲಾದವರೂ ಕಾಂಗ್ರೆಸ್ಸಿಗೆ ಮೊದಲಿನಿಂದಲೂ ಪರೋಕ್ಷವಾಗಿ ಪ್ರೋತ್ಸಾಹಕೊಡುತ್ತಿದ್ದರು. ಎಲ್ಲ ಮತ, ಎಲ್ಲ ಜಾತಿ, ಎಲ್ಲ ಬಗೆಯ

* ಈ ಗುರುತಿನ ಬಳಿಯ ಹೆಸರುಗಳವರು ನಮ್ಮ ಸುಯೋಗದಿಂದ ಈಗಲೂ ದೇಶಸೇವೆ ಮಾಡುತ್ತಿರುವರು. ಅವರು ದೀರ್ಘಾಯುಗಳಾಗಿರಲಿ.

ಮನೋವೃತ್ತಿಗಳವರೂ ಕಾಂಗ್ರೆಸ್ಸಿನಲ್ಲಿ ಸೇರಿದ್ದರೆಂಬುದನ್ನು ತೋರಿಸುವುದಕ್ಕೆ ಮೇಲಿನ ಪಟ್ಟಿಯೇ ಸಾಕಾದಷ್ಟು ಸಾಧನವಾಗಿದೆ.

ಈ ಮಹಾಸಭೆಯ ವಿಷಯದಲ್ಲಿ ಸರಕಾರದವರಿಗೂ ವಿದೇಶೀಯರಿಗೂ ಬಹುಕಾಲ ಸಂದೇಹವಿತ್ತು. ಅದು ರಾಜದ್ರೋಹ ಪ್ರಯತ್ನವೆಂದೂ ವಿಪ್ಲವ ಚೇಷ್ಟೆಯೆಂದೂ ಕೆಲವರು ಬಾಯಿಬಿಟ್ಟು ಹೇಳತೊಡಗಿದರು. ಅದರ ಉಪನ್ಯಾಸಗಳನ್ನೂ ಕಾರ್ಯ ರೀತಿಗಳನ್ನೂ ವಿದೇಶೀಯ ಪತ್ರಿಕಾಕರ್ತರು ಖಂಡಿಸಿ, ಅದರ ಹುಟ್ಟಡಗಿಸಬೇಕೆಂದು ವಾದಿಸುತ್ತಿದ್ದರು. ಹೀಗಿದ್ದರೂ ಉದಾರಿಗಳಾದ ಕೆಲಮಂದಿ ಆಂಗ್ಲೇಯ ಮಹಾಶಯರು ಭಾರತೀಯ ಪಕ್ಷವನ್ನೇ ದೃಢವಾಗಿ ಹಿಡಿದು, ಕಾಗ್ರೆಸ್ಸಿಗೆ ಬೆಂಬಲಕೊಟ್ಟು, ಅದು ಬ್ರಿಟಿಷರನ್ನು ಓಡಿಸತಕ್ಕದಲ್ಲವೆಂದೂ, ದೇಶೀಯರಿಗೆ ನ್ಯಾಯವಾಗಿ ಸಲ್ಲಬೇಕಾದ ಅಧಿಕಾರವನ್ನು ಸಂಪಾದಿಸಿ ಕೊಡುವುದು ಮಾತ್ರವೇ ಅದರ ಉದ್ದೇಶವೆಂದೂ, ಅದು ಸ್ವದೇಶಾಭಿಮಾನದ ಕಾರ್ಯವೇ ಹೊರತು ವಿದೇಶ ದ್ವೇಷದ ಕೋಲಾಹಲವೆಷ್ಟು ಮಾತ್ರವೂ ಅಲ್ಲವೆಂದೂ ಭರವಸೆ ಹೇಳುತ್ತಾ, ಸರಕಾರಕ್ಕೆ ಸರಿಯಾದ ತಿಳಿವಳಿಕೆಯನ್ನು ಕೊಡುತ್ತಿದ್ದರು. ಇಂಥಾ ನಮ್ಮ ಪರೋಪಕಾರಿಗಳಾದ ಅನ್ಯದೇಶೀಯರಲ್ಲಿ ಮುಖ್ಯರು :—

**ಏ. ಓ. ಹ್ಯೂಮ್**—ಇವರು ಮೊದಲು ಸರಕಾರೀ ಹುದ್ದೆಯಲ್ಲಿದ್ದವರು. ಇಂಡಿಯಾ ದೇಶದವರ ವಿಷಯದಲ್ಲಿ ಅವರಿಗೆ ನೈಜವಾದ ಸಹಾನುಭೂತಿಯಿದ್ದಿತು. ಕಾಂಗ್ರೆಸ್ ಏರ್ಪಾಟಿನ ಯೋಚನೆಯು ಮೊದಲು ಅವರಲ್ಲಿ ಹುಟ್ಟಿತೆಂಬುದು ಪ್ರಸಿದ್ಧವಾಗಿದೆ. ಅವರನ್ನು ಮಹಾಸಭೆಯ ಜನಕನೆಂದು ಕರೆಯುವುದುಂಟು. ಅನೇಕ ವರ್ಷಗಳ ಕಾಲ ಅವರು ಕಾಂಗ್ರೆಸ್ಸಿನ ಮುಖ್ಯ ಕಾರ್ಯದರ್ಶಿಯಾಗಿದ್ದರು.

**ಸರ್ ವಿಲಿಯಂ ವೆಡ್ಡರ್ ಬರ್ನ್**—ಇವರು ಹ್ಯೂಮ್ ರವರಂತೆಯೇ ಸರಕಾರೀ ಹುದ್ದೆಯಲ್ಲಿದ್ದು, ಅದರಿಂದ ನಿವೃತ್ತರಾದ ಬಳಿಕ ಭಾರತೀಯ ಜನಪಕ್ಷವನ್ನು ವಹಿಸಿದರು. ಗೋಖಲೆಯವರಿಗೂ ಇವರಿಗೂ ಪರಸ್ಪರ ಅತ್ಯಂತ ಮಮತೆಯಿತ್ತು.

**ಸರ್ ಹೆನ್ರೀ ಕಾಟನ್**—ಇವರೂ ಮೇಲಿನ ಇರ್ವರಂತೆಯೇ. ಇವರು ಕೆಲವು ಕಾಲ ಪಾರ್ಲಿಮೆಂಟಿನ ಮೆಂಬರಾಗಿದ್ದು ಇಂಡಿಯಾ ದೇಶಕ್ಕಾಗಿ ಹೊಡೆದಾಡಿದರು.

**ಜೇಮ್ಸ್ ಕೀರ್ ಹಾರ್ಡಿ**—ಇವರು ಈಗ ಇಂಗ್ಲೆಂಡಿನ "ಲೇಬರ್ ಪಾರ್ಟಿ"ಯ ಅಥವಾ ಕಾರ್ಮಿಕ ಜನ ಪಕ್ಷದ ಪ್ರತಿಷ್ಠಾಪಕರು. ಅವರು ಇಂಡಿಯಾ ದೇಶಕ್ಕೆ ಬಂದು ಸ್ವತಃ ಇಲ್ಲಿಯ ವಿದ್ಯಮಾನಗಳನ್ನು ನೋಡಿದ್ದರು.

ಈ ಪಟ್ಟಿಕೆಯಲ್ಲಿ ಸೇರಬಹುದಾದ ಹೆಸರುಗಳು ಇನ್ನೂ ಅನೇಕ ಇವೆ.

ಹೀಗೆ ಕೆಲವುಂದಿ ನ್ಯಾಯಪಕ್ಷಪಾತಿಗಳ ಅಭಿಮಾನಕ್ಕೂ ಬಹು ಮಂದಿ ಪ್ರಬಲರಾದವರ ದ್ವೇಷಾಸೂಯೆಗಳಿಗೂ ಪಾತ್ರವಾಗಿ, ಸಮಸ್ತ ದೇಶೀಯರ ಆಶೆ ಆಕಾಂಕ್ಷೆಗಳಿಗೂ ಆಕರವಾಗಿದ್ದ ಜನಪದ ಮಹಾಸಭೆಯನ್ನು ನಿರಪಾಯವಾದ ರೀತಿಯಲ್ಲಿ ನಡಿಸಿ ಕಾಪಾಡುವುದಕ್ಕೂ, ಅದರ ರಂಗಸ್ಥಳದಲ್ಲಿ ನಿಂತು ಜನಾಭಿಮತವನ್ನು ಉದ್ಘೋಷಿಸುವುದಕ್ಕೂ ಅಸಾಧಾರಣವಾದ ಸಾಮರ್ಥ್ಯವೂ ಯುಕ್ತಿಯೂ ಸಹ ಆವಶ್ಯಕವಾಗಿದ್ದುವು. ಆ ಯುಕ್ತಿ ಸಾಮರ್ಥ್ಯಗಳನ್ನು ಸಂಪಾದಿಸಿಕೊಳ್ಳಲು ಗೋಖಲೆಯವರು ತಮಗೆ ಸಾಧ್ಯವಿದ್ದ ಎಲ್ಲ ರೀತಿಗಳಲ್ಲಿಯೂ ನಿರಂತರವಾಗಿ ಪ್ರಯತ್ನ ಮಾಡುತ್ತಿದ್ದರು.

ಗೋಖಲೆಯವರಿಗೆ ಕಾಂಗ್ರೆಸ್ಸಿನ ಸಂಬಂಧವು ಮೊದಲು ಆದುದು ೧೮೮೯ರಲ್ಲಿ—ಎಂದರೆ ಅವರ ೨೩ನೆಯ ವರ್ಷದಲ್ಲಿ—ಎಂದು ತೋರುತ್ತದೆ. ಆ ವರ್ಷದ ಸಭೆಯು ಬೊಂಬಾಯಿಯಲ್ಲಿ ಸರ್ ವಿಲಿಯಂ ವೆಡ್ಡರ್‌ಬರ್ನ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಆಗ ಗೋಖಲೆಯವರು—ಈ ದೇಶದ ದೊಡ್ಡ ದೊಡ್ಡ ರಾಜ್ಯಾಧಿಕಾರಗಳು ಈ ದೇಶದ ಜನರಿಗೇ ಹೆಚ್ಚು ಹೆಚ್ಚಾಗಿ ದೊರೆಯಬೇಕೆಂದೂ, ಅವರ ಯೋಗ್ಯತೆಗೆ ಬೆಲೆ ಕೊಡದೆ ಅವರು ಕರಿಯ ಬಣ್ಣದವರೆಂಬ ನಿಮಿತ್ತದಿಂದ ಅವರನ್ನು ದೂರ ತಳ್ಳುವುದು ನ್ಯಾಯವಲ್ಲವೆಂದೂ ವಾದಿಸಿ ಉಪನ್ಯಾಸಮಾಡಿದರು. ಮಾರನೆಯ ಸಂವತ್ಸರದ ಮಹಾಸಭೆಯು ಕಲ್ಕತ್ತೆಯಲ್ಲಿ ನೆರೆಯಿತು; ಸರ್ ಫೆರೋಜ್ ಷಾ ಮೇಥಾರವರು ಅಧ್ಯಕ್ಷರಾಗಿದ್ದರು. ಆಗ ಉಪ್ಪಿನ ಮೇಲಣ ಸುಂಕವನ್ನು ಕಿತ್ತುಹಾಕಬೇಕೆಂದು ಗೋಖಲೆಯವರು ಮಾಡಿದ ಭಾಷಣವು ಸಕಲರ ಶ್ಲಾಘನೆಗೂ ಪಾತ್ರವಾಯಿತು. ಆಮೇಲೆ ಗೋಖಲೆಯವರು ಕಾಂಗ್ರೆಸ್ಸಿನ ಪ್ರತಿ ಸಮ್ಮೇಳಕ್ಕೂ ತಪ್ಪದೆ ಬರುತ್ತಿದ್ದರು. ೧೮೯೩ರಲ್ಲಿ ಆ ಮಹಾಸಭೆಯು

ಲಾಹೋರ್ ಪಟ್ಟಣದಲ್ಲಿ ಸೇರಿತು. ಆಗ ದಾದಾಭಾಯಿ ನವರೋಜಿಯವರು ಅಗ್ರಾಸನವನ್ನು ವಹಿಸಿದ್ದರು. ಆ ಪಟ್ಟಣಕ್ಕೆ ಪ್ರಯಾಣಮಾಡುವುದಕ್ಕೆ ಮುಂಚೆ ಅವರು ಪೂನಾಕ್ಕೆ ಬಂದಿದ್ದರು. ಇಂಗ್ಲೆಂಡಿನ ಮಹಾಜನರ ಗೌರವವನ್ನು ಸಂಪಾದಿಸಿ, ಅಲ್ಲಿಯ ಪಾರ್ಲಿಮೆಂಟು ಸಭೆಯಲ್ಲಿ ಅವರ ಪ್ರತಿನಿಧಿಯಾಗಿ ಕುಳಿತು, ಇಂಡಿಯಾ ದೇಶಕ್ಕೆ ಯಶಸ್ಸನ್ನು ತಂದಿದ್ದ ಆ ದೇಶವತ್ಸಲರಿಗೆ ತಮ್ಮ ವಿಶ್ವಾಸ ಕೃತಜ್ಞತೆಗಳನ್ನು ಸೂಚಿಸಬೇಕೆಂದು ಪೂನಾ ಮಹಾಜನರು ಒಂದು ದೊಡ್ಡ ಸಭೆಯನ್ನು ಸೇರಿಸಿದ್ದರು. ಅಂದು ಗೋಖಲೆಯವರು ತೋರಿದ ಸಂಭ್ರಮ ಉತ್ಸಾಹಗಳನ್ನು ಅವರ ಮಿತ್ರ ರಾದ ಸರ್ ಡಿ. ವಾಚಾ ಅವರು ವರ್ಣಿಸಿರುವರು. ನವರೋಜಿಯವರನ್ನು ಸರ್ವ ಪ್ರಯತ್ನಗಳಿಂದಲೂ ಸೇವಿಸಿ ಅವರ ಅನುಗ್ರಹವನ್ನು ಪಡೆಯ ಬೇಕೆಂದು ಗೋಖಲೆಯವರಿಗೆ ಅತ್ಯಂತ ಕುತೂಹಲವಾಗಿತ್ತಂತೆ. ಅರೆ ಗಳಿಗೆಯೂ ನವರೋಜಿಯವರಿಂದ ಅಗಲಿರಲು ಅವರಿಗೆ ಮನಸ್ಸೊಪ್ಪದು. ಕಡೆಗೆ, ನವರೋಜಿಯವರು ಸಭಾಸ್ಥಾನಕ್ಕೆ ಹೊರಡುವಾಗ ಅವರೊಡನೆ (ಕೋಚ್) ಗಾಡಿಯಲ್ಲಿ ಕೂಡಲು ತಮಗಿಂತ ಹಿರಿಯರಾದ ವಾಚಾ ಮೊದಲಾದ ಮೂವರು ಇರಲಾಗಿ, ಗೋಖಲೆಯವರು ಬೇರೊಂದು ಗಾಡಿಯಲ್ಲಿ ಕೂತೋ ಅಥವಾ ನಡೆದೋ ಅಲ್ಲಿಗೆ ಹೋಗುವುದಕ್ಕೆ ಇಷ್ಟಪಡದೆ, ನವರೋಜಿಯವರ ಸಾನ್ನಿಧ್ಯವನ್ನೇ ಬಯಸಿ, ಕೊನೆಗೆ ಅವರಿದ್ದ ಗಾಡಿಯ ಸಾರಥಿಯ ಪಕ್ಕದಲ್ಲಿ ಕುಳಿತು, ಅವನು ಕೊಟ್ಟ ಅರ್ಧಾಸನವೇ ಮಹಾಭಾಗ್ಯವೆಂದು ಭಾವಿಸಿದರಂತೆ. ಆ ಮೆರೆವಣಿಗೆಯು ಊರಿನಲ್ಲಿ ಹೋಗುತ್ತಿದ್ದಾಗ ದಾರಿಯಲ್ಲಿ ಜನರು ಗುಂಪು ಗುಂಪಾಗಿ ಸೇರಿ ಜಯ ಧ್ವನಿಗಳನ್ನು ಮಾಡಿ ಚಪ್ಪಾಳೆ ತಟ್ಟಿ ಸಂತೋಷವನ್ನು ಪ್ರದರ್ಶಿಸುತ್ತಿರಲು, ಗೋಖಲೆಯವರು ಅದರಲ್ಲೆಲ್ಲಾ ತಾವೂ ಸೇರಿ ಸಡಗರಪಟ್ಟರು. ಉದಾತ್ತ ಚರಿತರಾದ ಆ ದಾದಾಭಾಯಿಯವರಲ್ಲಿ ಇನ್ನೂ ಯುವಕರಾಗಿದ್ದ ಗೋಖಲೆ ಯವರು ಅಷ್ಟು ಪೂಜ್ಯಬುದ್ಧಿಯನ್ನಿಟ್ಟು, ಅವರ ಗುಣಗಳನ್ನು ಧ್ಯಾನಿಸು ವುದರಲ್ಲಿ ತಮ್ಮನ್ನೇ ಮರೆತುಕೊಂಡು, ಆ ದೇಶಭಕ್ತರನ್ನೇ ಅನುಕರಣ ಮಾಡಬೇಕೆಂದು ವ್ರತ ಹಿಡಿದುದರಿಂದಲೇ ಅಲ್ಲವೆ ಜನಪದ ಸಭಾಂಗಣದಲ್ಲಿ

ಅವರ ಯೋಗ್ಯತೆ ಗೌರವಗಳು ಬೇಗ ಬೇಗ ಬೆಳೆದು, ತಮ್ಮ ೩೯ನೆಯ ವರ್ಷದ ವಯಸ್ಸಿನಲ್ಲಿಯೇ ಅವರಿಗೆ ಆ ಮಹಾಸಭೆಯ ಅಧ್ಯಕ್ಷ ಪದವಿ ದೊರೆಯುವಂತಾದುದು?

ಮಹಾಸಮಾರಂಭಗಳಿಗೆ ಮನಸ್ಸು ಕೊಟ್ಟವರು ಸಣ್ಣ ಕಾರ್ಯಗಳಲ್ಲಿ ಉಪೇಕ್ಷೆ ತೋರುವುದು ಅಸಾಮಾನ್ಯವಲ್ಲ. ದೊಡ್ಡ ದೊಡ್ಡ ಸಭೆಗಳಲ್ಲಿ ದೊರೆಯುವಷ್ಟು ವಿಶಾಲವಾದ ಪ್ರಸಿದ್ಧಿಯು ಚಿಕ್ಕ ಸಂಸ್ಥೆಗಳಲ್ಲಿ ದೊರೆಯುವುದು ಕಷ್ಟ. ಆದರೂ ಗೋಖಲೆಯವರು ಜಾನಪದ ಮಹಾಸಭೆಯ ವಿಷಯದಲ್ಲಿ ಉತ್ಸಾಹಗೊಂಡ ಕಾರಣದಿಂದ ಸ್ವಸ್ಥಳದಲ್ಲಿ ತಮಗಿದ್ದ ಕರ್ತವ್ಯಗಳನ್ನೇನೂ ಮರೆಯಲಿಲ್ಲ. ಅವರು ಪೂನಾ ಪಟ್ಟಣದ ಪೌರಕಾರ್ಯ ಸಭೆಯ (ಮ್ಯುನಿಸಿಪಾಲಿಟಿಯ) ಸದಸ್ಯರಾಗಿ, ಅಲ್ಲಿಯ ಜನರ ವಸತಿ, ಆರೋಗ್ಯ, ಆನುಕೂಲ್ಯಗಳನ್ನು ಹೆಚ್ಚಿಸುವುದಕ್ಕೆ ಅತ್ಯಾವಶ್ಯಕವಾದ,—ಆದರೂ ಲೆಕ್ಕಕ್ಕೆ ಸಿಕ್ಕದೆ, ವರ್ತಮಾನ ಪತ್ರಿಕೆಗಳಲ್ಲಿ ಬಾರದೆ ಇರುವ—ಸಣ್ಣ ಪುಟ್ಟ ಕೆಲಸಗಳಿಗೂ ತಮ್ಮ ಕಾಲ ಬುದ್ಧಿಗಳನ್ನು ವಿನಿಯೋಗಿಸುತ್ತಿದ್ದರು. ಪೌರಕಾರ್ಯ ಸಭೆಯ ಸಂಬಂಧದಲ್ಲಿ ಅವರು ಮಾಡಿದ ಕಾರ್ಯಗಳನ್ನು ಕುರಿತು ಇನ್ನೊಂದು ಸಲ ಪ್ರಸ್ತಾವಿಸಬೇಕಾಗುವುದು.

ಪ್ರಕೃತ, ಹೀಗೆ ಒಂದು ಕಡೆ ಪಾಠಹೇಳುವುದು, ಮತ್ತೊಂದು ಕಡೆ ಬೇರೆ ಪಾಠಗಳನ್ನು ಕಲಿಯುವುದು, ಇನ್ನೊಂದು ಕಡೆ ಹಾಗೆ ಕಲಿತುದನ್ನು ದೇಶಕಾರ್ಯಕ್ಕಾಗಿ ವಿನಿಯೋಗಿಸುವುದು—ಈ ಮೂರು ವಿಧವಾದ ಉದ್ಯೋಗಗಳಲ್ಲಿ ಗೋಖಲೆಯವರು ಸಂತುಷ್ಟಿ ಪಡೆದಿರಲಾಗಿ, ೧೮೯೭ರಲ್ಲಿ ಅವರಿಗೆ ಇಂಗ್ಲೆಂಡಿಗೆ ಹೋಗುವ ಅವಕಾಶವು ದೊರೆಯಿತು. ಇಂಡಿಯಾ ದೇಶದ ರಾಜ್ಯಾದಾಯವು ಆ ದೇಶದವರ ಪ್ರಯೋಜನಕ್ಕಾಗಿಯೇ ವ್ಯಯವಾಗುತ್ತಿದೆಯೆ, ಇಲ್ಲವೆ? ಹಾಗಾಗುವಂತೆ ಮಾಡಲು ಏನೇನು ತಿದ್ದುಪಾಟುಗಳು ಆವಶ್ಯಕ?—ಎಂಬೀ ವಿಚಾರಗಳನ್ನು ಪರಿಶೋಧಿಸಿ ಸಲಹೆ ಕೊಡಲು ಲಾರ್ಡ್ ವೆಲ್ಬಿ ಎಂಬವರ ಅಧ್ಯಕ್ಷತೆಯಲ್ಲಿ ಒಂದು (ಕಮಿಷನ್) ವಿಚಾರಕ ಮಂಡಲಿಯು ಇಂಗ್ಲೆಂಡಿನಲ್ಲಿ ಸರಕಾರದಿಂದ ಏರ್ಪಾಟಾಗಿತ್ತು. ಆ ಮಂಡಲಿಯ ಮುಂದೆ ತಮ್ಮ ಅಭಿಪ್ರಾಯವನ್ನು ವಿವರಿಸಲು ಪ್ರತಿನಿಧಿ

ಳನ್ನು ಕಳುಹಿಸಬಹುದೆಂದು ಪೂನಾ ಸಾರ್ವಜನಿಕ ಸಭೆಗೂ ಆಹ್ವಾನ ಪತ್ರಿಕೆ ಬಂದಿತ್ತು. ಅದರಂತೆ ಗೋಖಲೆಯವರು ಇಂಗ್ಲೆಂಡಿಗೆ ಪ್ರಯಾಣ ಬೆಳಿಸಿ, ತಮ್ಮ ಗುರುಗಳಾದ ರಾನಡೆಯವರ ಬೋಧನೆಯ ಬಲದಿಂದಲೂ, ಮತ್ತು ರಾಜ್ಯಾದಾಯದ ಲೆಕ್ಕ ಪತ್ರಗಳನ್ನು ಮಥನಮಾಡುವುದರಲ್ಲಿ ನಿಪುಣರಾಗಿದ್ದ ಗಣೇಶ ವೆಂಕಟೇಶ ಜೋಷಿ ಎಂಬ ಪ್ರಜಾಭಿಮಾನಿಗಳಾದ ಹಿರಿಯರು ಒದಗಿಸಿಕೊಟ್ಟಿದ್ದ ಸಲಹೆಗಳ ಸಹಾಯದಿಂದಲೂ, ತಮ್ಮ ಸ್ವಂತ ಯುಕ್ತಿ ಜಾಣ್ಮೆಗಳಿಂದಲೂ ಸಹ, ಆ ಕೆಲಸವನ್ನು ದೇಶೀಯರೆಲ್ಲರೂ ಮೆಚ್ಚುವಂತೆ ನೆರವೇರಿಸಿ ಹಿಂದಿರುಗಿ ಬಂದರು. ಇಂಡಿಯಾ ದೇಶದ ಜನರು ತೆರುವ ಸುಂಕ ಕಂದಾಯಗಳು ಆ ಜನರ ಪ್ರಯೋಜನಕ್ಕಾಗಿ ವಿನಿಯೋಗವಾಗ ಬೇಕೇ ಹೊರತು, ಬ್ರಿಟಿಷ್ ಚಕ್ರಾಧಿಪತ್ಯದ ಅನುಕೂಲಕ್ಕೋಸ್ಕರ ಬ್ರಿಟಿಷ್ ಸರಕಾರವೇ ವಹಿಸತಕ್ಕುದಾಗಿರುವ ಸೈನ್ಯದ ವೆಚ್ಚ ಮೊದಲಾದ ಖರ್ಚುಗಳಿಗೆ ಇಂಡಿಯಾ ದೇಶದ ಹಣವು ಉಪಯೋಗವಾಗಬಾರದೆಂದೂ, ಈ ದೇಶದ ರಾಜ್ಯನಿರ್ವಾಹಕ್ರಮದಲ್ಲಿರುವ ಲೋಪಗಳಿಂದ ಆಡಳಿತದ ಸಿಬ್ಬಂದಿಯ ಖರ್ಚು ಹೆಚ್ಚಾಗಿ ಪ್ರಜೆಗಳ ಮೇಲೆ ಸುಂಕ ತೆರಿಗೆಗಳು ಏರುತ್ತಿವೆಯೆಂದೂ, ವೇತನಗಳ ವೆಚ್ಚವನ್ನು ತಗ್ಗಿಸಿ ಪ್ರಜೋಪಕಾರದ ಕಾರ್ಯಗಳಿಗೆ ಹೆಚ್ಚು ಹಣವನ್ನು ಕೊಡುವುದು ಸರಕಾರದ ಕರ್ತವ್ಯವೆಂದೂ ಅವರು ಆಗ ಧೈರ್ಯವಾಗಿಯೂ ಸಪ್ರಮಾಣವಾಗಿಯೂ ವಾದಿಸಿದರು. ಆ ಸಂದರ್ಭದಲ್ಲಿ ಗೋಖಲೆಯವರು ಮ|| ಜಿ. ವಿ. ಜೋಷಿಯವರಿಗೆ ಬರೆದ ಕಾಗದದಲ್ಲಿ ಹೀಗೆ ಇದೆ :—

ವೆಲ್ಬೀ ಸಮಿತಿಗೆ ನಾನು ಕೊಟ್ಟ ವಾಙ್ಮೂಲವನ್ನು ಇಂಗ್ಲೆಂಡಿನಲ್ಲಿ ಸರ್ ವಿಲಿಯಂ ವೆಡ್ಡರ್‌ಬರ್ನ್ ಮೊದಲಾದ ನಮ್ಮ ಮಿತ್ರರು ಅನುಮೋದಿಸಿ, ತಮ್ಮ ಮನಃಪೂರ್ವಕವಾದ ಮೆಚ್ಚುಗೆಯನ್ನು ನನಗೆ ತಿಳಿಸಿದ್ದಾರೆ. ಆದರೆ ನಾನು ತಮ್ಮ ಜ್ಞಾನ ಪ್ರಜ್ಞೆಗಳ ಪ್ರವಾಹಕ್ಕೆ ಒಂದು ಕಾಲುವೆಯಂತೆ ಅಥವಾ ನಲ್ಲಿಯಂತೆ ಮಾತ್ರ ಆಗಿದ್ದವನೆಂಬುದನ್ನು ನಾನೇ ಬಲ್ಲೆ. ನನಗೆ ಬಂದಿರುವ ಶ್ಲಾಘನೆಗಳೆಲ್ಲವೂ ತಮಗೂ ರಾನಡೆಯವರಿಗೂ ಸಲ್ಲತಕ್ಕುವು. ಆ ಮೆಚ್ಚಿಕೆ ಶ್ಲಾಘನೆಗಳೆಲ್ಲವನ್ನೂ ನಿಮ್ಮಿಬ್ಬರ ಚರಣ ಸನ್ನಿಧಿಯಲ್ಲಿ ನನ್ನ ಗುರುದಕ್ಷಿಣೆಯೆಂದು ಸಮರ್ಪಿಸುವವನಾಗಿದ್ದೇನೆ.

ಹೀಗೆ ಸಂಪಾದಿಸಿದ ಪ್ರಶಸ್ತಿಯ ಸಂತೋಷವನ್ನು ಮರೆಯಿಸಲು ಅಸಂದರ್ಭವೊಂದು ಬೇಗಲೇ ಹಿಂದುಗೂಡಿ ಒಂದಿತು. ಗೋಖಲೆಯವರು ಇಂಗ್ಲೆಂಡಿನಲ್ಲಿದ್ದಾಗ ಪೂನಾ ಪಟ್ಟಣದಲ್ಲಿ ಪ್ಲೇಗ್ ರೋಗವು ತಲೆಹಾಕಿತು ಅದುವರೆಗೂ ಆ ರೋಗವು ಈ ದೇಶಕ್ಕೆ ಅಪೂರ್ವವಾಗಿ, ಅದರ ಅನುಭವವು ಸರಕಾರದವರಿಗೂ ಪ್ರಜೆಗಳಿಗೂ ಒಂದೇ ಸಮನೆ ಹೊಸದಾಗಿತ್ತು. ಅದರ ನಿರೋಧನೆಗೆಂದು ಸರಕಾರವು ಮಾಡಿದ ಕೆಲವು ಏರ್ಪಾಟುಗಳು ಪ್ರಜೆಗಳಿಗೆ ಸರಿತೋರಲಿಲ್ಲ. ವ್ಯಾಧಿಯ ಸೋಂಕು ಹರಡದಂತೆ ಮಾಡುವುದಕ್ಕೆಂದು, ರೋಗಿಗಳೂ ಅವರ ಬಂಧುಗಳೂ ವಾಸಮಾಡತಕ್ಕ ಸ್ಥಳಗಳ ವಿಷಯ ದಲ್ಲಿಯೂ, ಜನರು ಊರಿಂದೂರಿಗೆ ಪ್ರಯಾಣಮಾಡತಕ್ಕ ವಿಷಯದಲ್ಲಿಯೂ, ಈ ಸಂಬಂಧದ ಇತರ ವಿಷಯಗಳಲ್ಲಿಯೂ ಸರಕಾರದವರು ಕೆಲವು ನಿರ್ಬಂಧ ಗಳನ್ನು ವಿಧಿಸಿದ್ದರು. ಈ ನಿರ್ಬಂಧಗಳ ಆಡಳಿತವು ದೇಶೀಯ ಜನರ ಪದ್ಧತಿಗಳನ್ನೂ ಸಂದರ್ಭಗಳನ್ನೂ ಚೆನ್ನಾಗಿ ಅರಿಯದ ಯೂರೋಪಿಯನ್ ಅಧಿಕಾರಿಗಳ ಕೈಯಲ್ಲಿತ್ತಾದ ಕಾರಣ, ಆ ಅಧಿಕಾರಿಗಳ ನಡೆವಳಿಕೆಗಳಿಂದ ಜನರಿಗೆ ಕೊಂಚಮಟ್ಟಿಗೆ ಹಿಂಸೆಯಾದುದು ಆಶ್ಚರ್ಯದ ಸಂಗತಿಯೇನೂ ಅಲ್ಲ. ಇದರಿಂದ ಜನರು ರೋಷಾವಿಷ್ಟರಾದುದು ಮಾತ್ರವೇ ಅಲ್ಲದೆ, ಆ ಕಾಲದಲ್ಲಿ ಪೂನಾದಲ್ಲಿ ಯಾರ ಕೈಯಿಂದಲೋ ಇಬ್ಬರು ಯೂರೋಪಿಯನ್ ಅಧಿಕಾರಿಗಳ ಕೊಲೆಯೂ ಆಯಿತು. ಈ ಕ್ರೂರ ಕೃತ್ಯದ ಸುದ್ದಿಯು ಇಂಗ್ಲೆಂ ಡಿಗೆ ಮುಟ್ಟಲು, ಅಲ್ಲಿ ಗಲಭೆಯೆದ್ದು, ಪುಣೆಯ ಪ್ರಜೆಗಳನ್ನು ಕಠಿನ ಶಿಕ್ಷೆಗೆ ಗುರಿಪಡಿಸಬೇಕೆಂದು ಅಲ್ಲಿಯ ಪತ್ರಿಕೆಗಳು ಕೂಗಲಾರಂಭಿಸಿದುವು. ಆಗ ಗೋಖಲೆಯವರು ಪುಣೆಯ ಜನರ ತಪ್ಪು ಅಷ್ಟು ದೊಡ್ಡದೇನೂ ಅಲ್ಲವೆಂದೂ, ಬ್ರಿಟಿಷ್ ಅಧಿಕಾರಿಗಳು ನಡಿಸಿದ್ದ ಅನ್ಯಾಯಗಳೇ ಆ ಕೊಲೆಗೆ ಮೂಲ ಕಾರಣವೆಂದೂ, ಸಹಿಸಲಾಗದ ಕಷ್ಟಗಳನ್ನು ಬ್ರಿಟಿಷ್ ಶಿಪಾಯಿಗಳು ಕೊಟ್ಟು, ಹೆಂಗಸರ ಮಾನಗಳನ್ನು ಕೂಡ ಕೆಡಿಸಿ, ಜನರನ್ನು ರೇಗಿಸಿದ್ದ ರೆಂದೂ ಇಂಗ್ಲೆಂಡಿನ ಮುಖ್ಯ ಪತ್ರಿಕೆಯೊಂದರಲ್ಲಿ ಬರೆದು, ತಮ್ಮೂರಿನ ಪ್ರಜೆಗಳ ಪಕ್ಷವನ್ನು ಹಿಡಿದರು. ಹಾಗೆ ಅವರು ವಾದಿಸುವಂತೆ ಅವರನ್ನು ಪ್ರೇರಿಸಿ, ಅದಕ್ಕೆ ತಕ್ಕ ವಿಷಯ ಸಾಮಗ್ರಿಯನ್ನು ಒದಗಿಸಿದ್ದವರು

ಪುಣೆಯಲ್ಲಿದ್ದ ಕೆಲವುಮಂದಿ ಸ್ನೇಹಿತರು. ಅವರು ಬರೆದಿದ್ದ ಕಾಗದಗಳನ್ನು ನಂಬಿ ಗೋಖಲೆಯವರು ಇಂಗ್ಲೆಂಡಿನಲ್ಲಿ ಬ್ರಿಟಿಷ್ ಅಧಿಕಾರಿಗಳನ್ನು ದೂರಿದರು. ಆದರೆ ಈ ದೂರುಗಳ ನಿಜಾಂಶವೇನೆಂದು ಸರಕಾರದವರು ವಿಚಾರಣೆ ನಡಿಸಹೊರಟಾಗ, ಗೋಖಲೆಯವರ ಮಾತನ್ನು ಸ್ಥಿರಪಡಿಸಲು ಯಾವ ಜನಪ್ರಮುಖರೂ ಮುಂದೆ ಬರಲಿಲ್ಲ. ಅದರಿಂದ ಗೋಖಲೆಯವರು ಅಸತ್ಯವಾದಿಯೆಂದು ಸರಕಾರದವರು ಘಂಟಾಘೋಷವಾಗಿ ಹೇಳುವಂತಾಯಿತು. ಹೀಗೆ ಬಂದ ಅಪಖ್ಯಾತಿಯನ್ನು ಪರಿಹರಿಸಿಕೊಳ್ಳಬೇಕೆಂದು ಗೋಖಲೆಯವರು ಸ್ವದೇಶಕ್ಕೆ ಹಿಂದಿರುಗಿ ಬಂದ ಬಳಿಕ, ತಾವು ಇಂಗ್ಲೆಂಡಿನಲ್ಲಿ ಬರೆದಿದ್ದ ಬರವಣಿಗೆಗಳಿಗೆ ಪ್ರಮಾಣ (ರುಜುವಾತು) ಗಳನ್ನೊದಗಿಸಿಕೊಡಬೇಕೆಂದು ಹಿಂದೆ ಅವರಿಗೆ ಕಾಗದ ಬರೆದು ಅವರನ್ನು ಉದ್ರೇಕಪಡಿಸಿದ್ದ ಸ್ನೇಹಿತರನ್ನು ಕೇಳಲಾಗಿ, ಅವರಲ್ಲೊಬ್ಬರಾದರೂ ಸಾಕ್ಷ್ಯ ಹೇಳಲು ಮುಂದೆ ಬಾರದೆ, ಎಲ್ಲರೂ ಬಾಯಿ ಮುಚ್ಚಿಕೊಂಡು ದೂರ ನಿಲ್ಲುವವರಾದರು. ಆ ಸ್ನೇಹಿತರು ಬರೆದಿದ್ದುದು ಅತ್ಯುಕ್ತಿ ಉತ್ಪ್ರೇಕ್ಷೆಗಳೆಂಬುದು ಆಗ ಗೊತ್ತಾಯಿತು. ಅದನ್ನು ನಂಬಿ ತಾವು ಮಾಡಿದ್ದ ಅಧಿಕಾರಿ ನಿಂದನೆಯು ನಿರಾಧಾರವೆಂದು ತೋರಿಬಂದ ಬಳಿಕ ಗೋಖಲೆಯವರು ಪಶ್ಚಾತ್ತಾಪಪಟ್ಟು, ತಮ್ಮ ಬರೆವಣಿಗೆಯಿಂದ ನೊಂದಿದ್ದ ಅಧಿಕಾರಿಗಳ ಕ್ಷಮಾಪಣೆಯನ್ನು ಬೇಡುವುದು ತಮ್ಮ ಕರ್ತವ್ಯವೆಂದು ನಿರ್ಧರಿಸಿದರು. ಅವರು ಹಾಗೆ ಕ್ಷಮೆಯನ್ನು ಬೇಡದೆ ಇದ್ದಿದ್ದರೆ ಸರಕಾರದ ಕಡೆಯಿಂದ ಅವರು ಸುಳ್ಳುಗಾರನೆಂಬ ನಿಂದೆಯನ್ನು ಹೊತ್ತುಕೊಳ್ಳಬೇಕಾಗಿದ್ದುದು ಮಾತ್ರವೇ ಅಲ್ಲದೆ, "ಸಾಕಾದಷ್ಟು ಕಾರಣವಿಲ್ಲದೆ ಇತರರನ್ನು ದೂಷಿಸಿದೆನಲ್ಲಾ!"—ಎಂಬ ಅಂತರಂಗ ಪರಿತಾಪವೂ ಅವರಿಗೆ ಎಂದಿಗೂ ತಪ್ಪುತ್ತಿರಲಿಲ್ಲ. ಅವರು ಸತ್ಯಕ್ಕೆ ಕಟ್ಟುಬಿದ್ದು, ಪ್ರಾಮಾಣಿಕರು ಅನುಸರಿಸಬೇಕಾದ ನ್ಯಾಯಮರ್ಯಾದೆಗಳನ್ನು ಲಕ್ಷ್ಯದಲ್ಲಿಟ್ಟು, ತಮ್ಮ ಬರವಣಿಗೆಯು ಪ್ರಮಾದದಿಂದ ಆದುದೆಂದೂ, ಅದನ್ನು ಸರಕಾರದವರು ಎಣಿಕೆಗೆ ತೆಗೆದುಕೊಳ್ಳಕೂಡದೆಂದೂ ಕೇಳಿಕೊಂಡರು. ಈ ರೀತಿ ಅವರು ನಮ್ರರಾಗಿ ಪಶ್ಚಾತ್ತಾಪ ತೋರಿಸಿದುದನ್ನು ಅನೇಕರು ಹೇಡಿತನವೆಂದು ಅಲ್ಲಗಳೆದು,

ಅವರನ್ನು "ಕಚ್ಚಾ" (ಎಳೆ, ಅಪಕ್ವ) ಎಂದು ಹೀಯಾಳಿಸಿದರು. ಪುಣೆಯ ಪ್ರಜಾಪ್ರಮುಖರಲ್ಲಿ ಕೆಲವರು ಆಗ ತೋರಿಸಿದ ತುಚ್ಛೀಕಾರವನ್ನು ನೋಡಿದರೆ ಇನ್ನು ಮುಂದೆ ಗೋಖಲೆಯವರು ಆ ಊರಿನಲ್ಲಿ ತಲೆಯೆತ್ತಿ ನಡೆಯಲು ಆಗಲಾರದೆನ್ನಿಸುತ್ತಿತ್ತು. ಗೋಖಲೆಯವರು ಅದರಿಂದ ಖಿನ್ನ ಮನಸ್ಕರಾದರೂ, ಪ್ರಜಾಕ್ಷೇಮ ಸಾಧನೆಯೊಂದೇ ತಮ್ಮ ಮುಖ್ಯ ಧ್ಯೇಯವಾಗಿರತಕ್ಕುದೆಂಬುದನ್ನು ಮರೆಯಲಿಲ್ಲ. ಪ್ಲೇಗ್ ರೋಗದಿಂದ ಸಂಕಟಪಡುವವರಿಗೂ ಮತ್ತು ಅವರ ಕುಟುಂಬಗಳಿಗೂ ಬೇಕಾದ ಸಹಾಯವನ್ನು ಒದಗಿಸುವುದಕ್ಕಾಗಿ ಗೋಖಲೆಯವರು ಒಂದು ಸಹಾಯಕ ಸಂಘವನ್ನು ಏರ್ಪಡಿಸಿ, ತಾವು ಅದಕ್ಕಾಗಿ ದೀಕ್ಷೆತೊಟ್ಟು ನಿಂತು, ಬಹುಮಂದಿ ಬಡಬಗ್ಗರಿಗೆ ಆಪತ್ಕಾಲದಲ್ಲಿ ಉಪಕಾರಿಗಳಾದರು. ಆಗ ಇವರಿಂದಾದ ಪ್ರಜಾಸೇವೆಯನ್ನು ಸರಕಾರದವರು ಒಪ್ಪಿಕೊಂಡುದಲ್ಲದೆ, ಪ್ಲೇಗ್ ವ್ಯಾಧಿಗೆ "ಇನಾಕ್ಯುಲೇಷನ್" ಅಥವಾ ಸಿಡುಬು ಹಾಕುವುದರ ಮೂಲಕ ಪ್ರತಿಕ್ರಿಯೆ ಮಾಡುವ ಏರ್ಪಾಟಿಗಾಗಿ ಅವರು ನಿಯಮಿಸಿದ "ಕಮಿಷನ್" ಅಥವಾ ವಿಚಾರಕ ಮಂಡಲಿಗೆ ಗೋಖಲೆಯವರನ್ನೂ ಸದಸ್ಯರನ್ನಾಗಿ ಸೇರಿಸಿದರು. ಆಗ ಗೋಖಲೆಯವರು ಧಾರವಾಡ, ಬೆಳಗಾಂ ಮುಂತಾದ ಪ್ರಾಂತಗಳಲ್ಲಿ ಸಂಚರಿಸಿ, ಪ್ರಜಾಪ್ರಮುಖರನ್ನು ಕಂಡು ಮಾತನಾಡಿ, ಇನಾಕ್ಯುಲೇಷನ್ ಏರ್ಪಾಟು ಪ್ರಜೆಗಳ ಇಷ್ಟಕ್ಕೆ ಸರಿಯಾಗುವ ರೀತಿಯಲ್ಲಿ ನಡೆಯುವಂತೆ ಕೆಲವು ಸಲಹೆಗಳನ್ನು ಕೊಟ್ಟರು.

ಗೋಖಲೆಯವರು ೧೮೯೯ರಲ್ಲಿ ಬೊಂಬಾಯಿ ಆಧಿಪತ್ಯದ ಶಾಸನ ಸಭೆಗೆ (ಲೆಜಿಸ್ಲೆಟಿವ್ ಕೌನ್ಸಿಲ್) ಮಧ್ಯಮ ಪ್ರದೇಶದ ಪೌರಸಭೆ (ಮ್ಯುನಿಸಿಪಾಲಿಟಿ) ಗಳಿಂದ ಸದಸ್ಯರಾಗಿ ಚುನಾಯಿಸಲ್ಪಟ್ಟರು. ಆ ಸಭೆಯಲ್ಲಿ ಅವರು ಸಮಯ ದೊರೆತಂತೆಲ್ಲಾ ಪ್ರಜಾಪಕ್ಷವನ್ನು ವಹಿಸಿ ಮಾತನಾಡಿದರು. ೧೯೦೦-೦೧ನೆಯ ಸಾಲಿನ ರಾಜ್ಯಾದಾಯ ವ್ಯಯ ಪಟ್ಟಿಕೆಯನ್ನು (ಬಜ್ಜೆಟ್) ಕುರಿತು ಚರ್ಚಿಸುವ ಕಾಲದಲ್ಲಿ,—ಹಿಂದಿನ ನಾಲ್ಕು ವರ್ಷ ಆ ಪ್ರಾಂತ ಸಂಭವಿಸಿದ್ದ ಕ್ಷಾಮದ ನಿವಾರಣೆಗಾಗಿ ಸರಕಾರವು ಮಾಡಿದ್ದ ಏರ್ಪಾಟುಗಳು ಸಮರ್ಪಕವಾಗಿ ನಡೆಯಲಿಲ್ಲವೆಂದೂ, ಆ ಏರ್ಪಾಟುಗಳಲ್ಲಿ

ಕಟ್ಟುನಿಟ್ಟುಗಳು ಅತಿಯಾಗಿದ್ದುದರಿಂದಲೂ ಕೆಳಗಿನ ದರ್ಜೆಯ ಅಧಿಕಾರಿಗಳು ನಡಿಸಿದ ಅಕ್ರಮಗಳಿಂದಲೂ ಬಹುಮಂದಿ ಬಡಬಗ್ಗರಿಗೆ ತಕ್ಕ ಸಹಾಯವು ದೊರೆಯದೆ ಹೋಯಿತೆಂದೂ, ಕಂದಾಯವನ್ನು ಬಿಟ್ಟುಕೊಡುವ (ಸೋಡಿ=ರೆಮಿಷನ್) ವಿಷಯದಲ್ಲಿ ಸರಕಾರವು ನ್ಯಾಯವಾದಷ್ಟು ಧಾರಾಳವಾಗಿರಲಿಲ್ಲವೆಂದೂ ಸಪ್ರಮಾಣವಾಗಿ ತೋರಿಸಿದರು ; ಅಲ್ಲದೆ ಈ ದೇಶದ ರೈತರು ಎಷ್ಟು ಬಗೆಯ ಕಷ್ಟ ನಷ್ಟಗಳಿಗೆ ಗುರಿಯಾಗಿರುವ ರೆಂಬುದನ್ನು ವಿವರಿಸಿ, ನೆಲಗಂದಾಯವನ್ನು ಆಗಾಗ ಮನಸ್ವೀ ಹೆಚ್ಚಿಸು ತ್ತಿರುವುದಕ್ಕೆ ಪ್ರತಿಯಾಗಿ ಅದನ್ನು ಸಾಧ್ಯವಾದಷ್ಟು ತಗ್ಗಿಸುವುದು ಅತ್ಯಾವಶ್ಯಕವೆಂದು ವಾದಿಸಿದರು.

ಮಾರನೆಯ ವರ್ಷ ರಾಜ್ಯಾದಾಯ ವ್ಯಯ ಪಟ್ಟಿಕೆಯನ್ನು ವಿಮರ್ಶೆ ಗೊಳಿಸುವ ಕಾಲದಲ್ಲಿ, ರೈತರ ಮತ್ತು ಜಮೀನ್‌ದಾರರುಗಳ ಮೇಲೆ ಸರಕಾರವು ಹೊರಿಸಿರುವ ಕಂದಾಯ ತೆರಿಗೆಗಳ ಭಾರವು ಮಿತಿಮೀರಿರು ವುದೆಂದು ಪುನಃ ವಿಶದವಾಗಿ ತೋರಿಸಿ, ಜಮೀನುಗಳ ಮೇಲೆ ಕಂದಾಯ ಗಳನ್ನು ಗೊತ್ತುಮಾಡುವ (ಸರ್ವೇ) ಕ್ರಮವೂ, ಅವುಗಳನ್ನು ಸವರಿಸುವ (ರಿವಿಷನ್) ಕ್ರಮವೂ ನ್ಯಾಯವಾಗಿಲ್ಲವೆಂದೂ, ಮಳೆ ಬಾರದೆ ಬೆಳೆ ಹಾಳಾದ ವರ್ಷಗಳಲ್ಲಿ ಕಂದಾಯವನ್ನು ಸೋಡಿ (ರೆಮಿಷನ್) ಮಾಡುವ ಕ್ರಮವು ಎಲ್ಲರಿಗೂ ಒಂದೇರೀತಿ ಅನ್ವಯವಾಗಬೇಕೇ ಹೊರತು, ಒಬ್ಬೊಬ್ಬ ವ್ಯಕ್ತಿಯ ಸಂದರ್ಭವನ್ನೂ ಬೇರೆ ಬೇರೆಯಾಗಿ ವಿಚಾರಿಸಿ ಅವರವರಿಗೆ ತಕ್ಕಂತೆ ತೀರ್ಮಾನಿಸುವೆವೆಂದು ಸರಕಾರದವರು ಹೇಳುವುದು ಪಕ್ಷಪಾತಕ್ಕೆ ದಾರಿಮಾಡಿ ಜನರಿಗೆ ಪ್ರತಿಕೂಲವಾಗಿ ಪರಿಣಮಿಸುವುದೆಂದೂ ಉದಾಹರಣೆ ಗಳ ಸಹಿತ ತೋರಿಸಿಕೊಟ್ಟರು.

ಹಾಗೆಯೇ ಜಮೀನ್ ಸಾಗುವಳಿಗಾಗಿ ನೀರು ಸರಬರಾಯಿ ಮಾಡಲು ಸರಕಾರದವರು ತೆರಿಗೆ (ನೀರು ಸರದಿ)ಯನ್ನು ಹೆಚ್ಚು ದರದಲ್ಲಿ ವಸೂಲುಮಾಡುತ್ತಿದ್ದುದರಿಂದ ವ್ಯವಸಾಯವು ವಿಸ್ತರಿಸಲು ಅವಕಾಶವಾಗದೆ ಹೋಯಿತೆಂದೂ, ನೀರಾವರಿಯ ಕೆಲಸಗಳನ್ನು ಹೆಚ್ಚು ಹೆಚ್ಚಾಗಿ ನಡಿಸಿ, ನೀರು ಸರದಿಯನ್ನು ಕಡಿಮೆಮಾಡುವುದು ಸರಕಾರದ ಕರ್ತವ್ಯವೆಂದೂ

ಸೂಚಿಸಿದರು. ಹಿಂದಿನ ಕ್ಷಾಮದಲ್ಲಿ ದನ ಕರುಗಳು ಬಹಳ ನಷ್ಟವಾಗಿದ್ದ ಕಾರಣ, ಕಾಡುಗಳ (ಫಾರೆಸ್ಟು) ಇಲಾಖೆಯವರು ಹುಲ್ಲುಗಾವಲು ತೆರಿಗೆಯ ದರವನ್ನು ಸ್ವಲ್ಪ ಕಾಲವಾದರೂ ತಗ್ಗಿಸಬೇಕೆಂದೂ, ಬೇರೆ ಕೆಲಸಕ್ಕೆ ಬಾರದಿದ್ದ ಕಾಡುಪ್ರದೇಶಗಳನ್ನು ಹಳ್ಳಿಗಳ ವಶಕ್ಕೆ ಗೋಮಾಳಕ್ಕಾಗಿ ವರ್ಗಾಯಿಸಿ ರೈತ ಜನರಿಗೆ ತೊಂದರೆಗಳನ್ನು ಕಡಿಮೆಮಾಡಬೇಕೆಂದೂ ಅರಿಕೆಮಾಡಿದರು.

ಆಬ್ಕಾರೀ ಬಾಬಿನಲ್ಲಿ, ಹೆಂಡದ ಅಂಗಡಿಗಳನ್ನು ಕಡಿಮೆಮಾಡಿ, ಕುಡಿತದ ಅಭ್ಯಾಸಕ್ಕೆ ಪ್ರತಿಕೂಲಗಳನ್ನುಂಟಾಗಿಸಬೇಕೆಂದೂ ; ವರಮಾನದ ಮೇಲಿನ ತೆರಿಗೆಯ (ಇನ್‌ಕಮ್-ಟ್ಯಾಕ್ಸ್) ಬಾಬಿನಲ್ಲಿ, ಆ ಇಲಾಖೆಯ ಅಧಿಕಾರಿಗಳು ಜನರ ಆದಾಯಗಳನ್ನು ಊಹಿಸಿ ತೆರಿಗೆಗಳನ್ನು ಗೊತ್ತು ಮಾಡುವ ಮತ್ತು ಆಗಾಗ ತೆರಿಗೆಗಳನ್ನು ಮನಸ್ವೀ ಹೆಚ್ಚಿಸುವ ಪದ್ಧತಿಯು ವಿಶೇಷ ಅಸಮಾಧಾನಕರವಾಗಿದ್ದ ಕಾರಣ, ಅದನ್ನು ಸರಕಾರವು ಮಾರ್ಪಡಿಸಿ ಕೆಳಗಿನ ಅಧಿಕಾರಗಳ ಅನ್ಯಾಯ ಹಿಂಸೆಗಳನ್ನು ತಪ್ಪಿಸಬೇಕೆಂದೂ ಹೇಳಿದರು. ವಿದ್ಯಾಪ್ರಚಾರದ ಬಾಬಿಗಾಗಿ ಅದುವರೆಗೆ ಸರಕಾರವು ತಕ್ಕಷ್ಟು ಹಣವನ್ನು ವೆಚ್ಚಮಾಡದೆ, ಆ ಕರ್ತವ್ಯದ ಭಾರವನ್ನು ಸ್ಥಳೀಯ ಮಂಡಲಿ (ಲೋಕಲ್ ಬೋರ್ಡು) ಗಳ ಮೇಲೆ ಹೊರಿಸಿತ್ತೆಂದೂ, ಇನ್ನು ಮುಂದೆ ಹಾಗೆ ಮಾಡದೆ ಸರಕಾರವು ತನ್ನ ಆದಾಯದಲ್ಲಿ ಒಂದು ಗೊತ್ತಾದ ಭಾಗವನ್ನು ವಿದ್ಯಾಪ್ರಚಾರಕ್ಕೆಂದು ಮೀಸಲು ತೆಗೆದಿಟ್ಟ ಹೊರತು ಈ ದೇಶದಲ್ಲಿ ಜನರಿಗೆ ಜ್ಞಾನಾಭಿವೃದ್ಧಿಯಾಗುವ ಆಶೆಯಿಲ್ಲವೆಂದೂ ಸಾರಿ ಹೇಳಿದರು.

ಬೊಂಬಾಯಿ ಪ್ರಾಂತದ ಶಾಸನ ಸಭೆಯಲ್ಲಿ ಗೋಖಲೆಯವರು ಮಾಡಿದ ಇತರ ಕೆಲಸಗಳಲ್ಲಿ ಮುಖ್ಯವಾದುವು ಮೂರು. ಅವು ಯಾವುವೆಂದರೆ :—

(೧) ೧೯೦೧ನೆಯ ಇಸ್ವಿಯಲ್ಲಿ ಅಲ್ಲಿಯ ಸರಕಾರದವರು "ಲ್ಯಾಂಡ್ ರೆವೆನ್ಯೂ" (ನೆಲಗಂದಾಯ) ಆಡಳಿತಕ್ಕೆ ಸಂಬಂಧಪಟ್ಟ ಕಾನೂನಿನಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಲು ಪ್ರಯತ್ನಿಸಿದರು. ಒಬ್ಬ ರೈತನು ತನ್ನ ಜಮೀನಿನ ಕಂದಾಯವನ್ನು ಒಂದು ವರ್ಷದ ಮೇಲೆ ಬಾಕಿಯಲ್ಲಿಟ್ಟಿದ್ದರೆ, ಆ ಬಾಕಿಯ ವಸೂಲಿಗಾಗಿ ಸರಕಾರದವರು ಅವನಿಗೆ ಹದಿನೈದು

ದಿನದ ಅವಧಿ (ವಾಯಿದೆ) ಕೊಟ್ಟು, ಅಷ್ಟರಲ್ಲಿಯೂ ತಮ್ಮ ಹಣ ಪಾವತಿಯಾಗದೆ ಹೋದರೆ, ಆ ಮೇಲೆ ಆ ಜಮೀನನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳಬಹುದೆಂಬುದೂ; ಪುನಃ ಅದೇ ರೈತನು ಆ ಜಮೀನನ್ನು ಬಯಸಿದರೆ ಅದನ್ನು ಅವನಿಗೆ ಸಾಗುವಳಿಗೋಸ್ಕರ ಕೊಡತಕ್ಕದ್ದೇ ಹೊರತು, ಹಾಗೆ ಪುನಃ ಪಡೆದ ಜಮೀನನ್ನು ಅವನು ಕ್ರಯ ಭೋಗ್ಯ ಮೊದಲಾದ ರೀತಿಯಿಂದ ಪರಾಧೀನಮಾಡಲು ಸಾಧ್ಯವಾಗದಂತೆ ಮಾಡಬೇಕೆಂಬುದೂ ಸರಕಾರದವರು ಯೋಚಿಸಿದ್ದ ಬದಲಾವಣೆಗಳು. ಆ ಕಾಲದಲ್ಲಿ ರೈತಜನರು ಸಾಲಗಾರರಾಗಿ ಸಾಹುಕಾರರ ಕೈಗೆ ಸಿಕ್ಕಿ ತಮ್ಮ ಜಮೀನುಗಳನ್ನು ಕಳೆದುಕೊಳ್ಳುತ್ತಿದ್ದುದರಿಂದ, ಇನ್ನು ಮುಂದೆ ಅವರು ಹಾಗೆ ಮಾಡಲಾಗದಂತೆ ತಡೆಯುವುದೇ ಆ ಕಾನೂನಿನ ಉದ್ದೇಶವೆಂದು ಸರಕಾರದವರು ಹೇಳುತ್ತಿದ್ದರು. ಈ ಹೊಸ ಕಾನೂನಿನ ವಿಚಾರವು ಶಾಸನ ಸಭೆಗೆ ಬಂದಾಗ ಗೋಖಲೆಯವರೂ, ಫೆರೋಜ್ ಷಾ ಮೇಥಾ ಮೊದಲಾದ ಇತರ ದೇಶಾಭಿಮಾನಿಗಳೂ ಅದಕ್ಕೆ ಅಡ್ಡನಿಂತರು. ಆ ಬದಲಾವಣೆಗಳಿಂದ ಬಡ ರೈತರಿಗೆ ಯಾವ ಪ್ರಯೋಜನವೂ ಆಗಲಾರದೆಂದೂ, ಸಾಹುಕಾರನ ಕೈಯಿಂದ ಅವರನ್ನು ಬಿಡಿಸಿ ಋಣಮುಕ್ತರನ್ನಾಗಿ ಮಾಡಲು ಆ ಉಪಾಯವು ತಕ್ಕುದಲ್ಲವೆಂದೂ, ಅದರಿಂದ ರೈತಜನರಿಗೆ ಇರತಕ್ಕ ಅತಿ ಮುಖ್ಯ ಸ್ವತ್ತಾದ ಭೂಸ್ವಾಮ್ಯವೂ ಕ್ರಯವಿಕ್ರಯಾಧಿಕಾರವೂ ತೊಲಗಿಹೋಗಿ ಅವರ ಗತಿಯು ಮತ್ತಷ್ಟು ಶೋಚನೀಯವಾಗುವುದೆಂದೂ ಗೋಖಲೆಯವರು ಭಾಷಣಮಾಡಿ, ಸರಕಾರದ ಸಲಹೆಗಳನ್ನು ಯುಕ್ತಿಯುಕ್ತವಾಗಿ ಖಂಡಿಸಿದರು. ಆದರೂ ಸರಕಾರದವರು ತಮ್ಮ ಪ್ರಯತ್ನವನ್ನು ಬಿಡದೆ ಆ ಬದಲಾವಣೆಗಳನ್ನು ಮಾಡಿಯೇ ತೀರಬೇಕೆಂದು ಹಟ ಹಿಡಿಯಲು, ಆಗ ಮೇಥಾ ಅವರೂ, ಖಾರೆ, ಪರೇಖ್, ಸರ್ ಬಾಲಚಂದ್ರ ಕೃಷ್ಣ—ಈ ಪ್ರಜಾಪ್ರತಿನಿಧಿಗಳೂ, ಗೋಖಲೆಯವರೊಡನೆ ಸೇರಿ ಆ ಕಾನೂನಿನ ವಿಷಯದಲ್ಲಿ ತಮ್ಮ ಸಂಪೂರ್ಣ ಪ್ರತಿಷೇಧವನ್ನು ಪ್ರಕಟಪಡಿಸಲೆಂದು ಸಭಾ ಭವನವನ್ನು ಬಿಟ್ಟು ಹೊರಕ್ಕೆ ಹೊರಟು ನಡೆದರು.

(೨) ೧೯೦೧ರಲ್ಲಿ ಅಬ್ಕಾರೀ ಬಾಬಿಗೆ ಸಂಬಂಧಪಟ್ಟ ಒಂದು ಕಾನೂನನ್ನು ಬದಲಾಯಿಸಬೇಕೆಂದು ಸರಕಾರದವರು ಇಚ್ಛೆಪಟ್ಟರು. ಪುಂಡಿ (ಪುಂಡ್ರಿಕೆ)ಯ ನಾರನ್ನು ಬೆಳೆಯುವ ಸ್ವಾತಂತ್ರ್ಯವನ್ನು ರೈತರಿಂದ ಕಿತ್ತುಕೊಂಡು, ಸರಕಾರದ ಅಪ್ಪಣೆಯಿಲ್ಲದೆ ಅದನ್ನು ಯಾರೂ ಬೆಳೆಯಲಾಗದಂತೆ ಮಾಡಬೇಕೆಂಬುದೂ; ಆ ಫಸಲಿನಿಂದ ಆಗುವ ಗಾಂಜಾ ಸೊಪ್ಪನ್ನು ಮಾರಲು ವರ್ತಕರು ಸರಕಾರದ ಅಧೀನದಲ್ಲಿಯೇ ಕೋಠಿಗಳನ್ನಿಟ್ಟು, ತಾವು ಮಾರಾಟಮಾಡುವ ಗಾಂಜಾ ತೂಕಕ್ಕೆ ತಕ್ಕಂತೆ ಹೆಚ್ಚು ಹೆಚ್ಚಾದ ಸುಂಕವನ್ನು ಸರಕಾರಕ್ಕೆ ಸಲ್ಲಿಸತಕ್ಕುದೆಂಬುದೂ ಆ ಬದಲಾವಣೆಯ ಉದ್ದೇಶಗಳು. ಈ ಬದಲಾವಣೆಗಳಿಂದ ರೈತರಿಗೆ ತೊಂದರೆಯಾಗುವುದೇ ಹೊರತು ಜನರಿಗೆ ಯಾವ ಉಪಯೋಗವೂ ಆಗದೆಂದೂ, ಗಾಂಜಾ

ಮಾರಾಟದ ಪರಿಮಾಣವು ಹೆಚ್ಚಿದಂತೆಲ್ಲಾ ಸರಕಾರಕ್ಕೆ ಆದಾಯವು ಹೆಚ್ಚುವಂತೆ ಆದರೆ ಅದರಿಂದ ಗಾಂಜಾ ವ್ಯಾಪಾರವನ್ನು ಅಭಿವೃದ್ಧಿಗೊಳಿಸುವುದರಲ್ಲಿ ಸರಕಾರಕ್ಕೆ ಆದರವು ಹೆಚ್ಚೀತೆಂದೂ ಗೋಖಲೆಯವರು ವಾದಿಸಿ, ಆ ಬದಲಾವಣೆಗೆ ಅಡ್ಡಗಟ್ಟಿ ನಿಂತರು.

(೩) ಬೊಂಬಾಯಿ ಸರಕಾರವು ಚರ್ಚೆಗೆ ತಂದ ಮತ್ತೊಂದು ಕಾನೂನು ಸ್ಥಳೀಯ ಸ್ವರಾಜ್ಯಕ್ಕೆ (ಮ್ಯುನಿಸಿಪಾಲಿಟಿಗೆ ಅಥವಾ ಪ್ರಾದೇಶಿಕ ಪ್ರಜಾಪ್ರಭುತ್ವಕ್ಕೆ) ಸಂಬಂಧ ಪಟ್ಟದು. ಅದನ್ನು ಪರಿಶೀಲನೆಮಾಡಿ ಮಾತನಾಡುವಾಗ ಗೋಖಲೆಯವರು ಪುರ ಸಂಸ್ಥೆ ಗ್ರಾಮ ಸಂಸ್ಥೆಗಳಲ್ಲಿ ಪ್ರಜೆಗಳಿಂದ ಆರಿಸಲ್ಪಟ್ಟ ಪ್ರತಿನಿಧಿಗಳೇ ಹೆಚ್ಚು ಮಂದಿ ಇರಬೇಕೆಂದೂ, ಆ ಸಂಸ್ಥೆಗಳಿಗೆ ಸರಕಾರವು ವಹಿಸುವ ಕಾರ್ಯಭಾರಕ್ಕೆ ತಕ್ಕಷ್ಟು ವರಮಾನದ ಅನುಕೂಲ್ಯವನ್ನೂ ಅವುಗಳಿಗೆ ಸರಕಾರವೇ ಒದಗಿಸಿಕೊಡಬೇಕೆಂದೂ, ಆ ಸಂಸ್ಥೆಗಳು ಅನುಭವ ಸಾಲದೆಯೋ ಇತರ ಕಾರಣದಿಂದಲೋ ಯಾವುದಾದರೂ ಸಣ್ಣ ಅಕ್ರಮವನ್ನು ಒಂದೊಂದು ಸಲ ನಡಿಸಿದರೆ ಸರಕಾರದವರು ಅದನ್ನೇ ನೆವಮಾಡಿಕೊಂಡು ಆ ಸಂಸ್ಥೆಗಳ ಅಧಿಕಾರ ಸ್ವಾತಂತ್ರ್ಯಗಳನ್ನು ಹಿಂದಕ್ಕೆ ಕಿತ್ತುಕೊಳ್ಳುವುದು ಅನುಚಿತವೆಂದೂ ವಾದಿಸಿದರು. ಈ ವಿಷಯದಲ್ಲಿ ಗೋಖಲೆಯವರು ಹೇಳಿರುವ ಅಭಿಪ್ರಾಯಗಳು ಮೈಸೂರಿನ ಪ್ರಜಾಪ್ರತಿನಿಧಿ ಸಭೆಯ ಎರಡನೆಯ ಸಮ್ಮೇಳನದಲ್ಲಿ ದಿವಾನ್ ರಂಗಾಚಾರ್ಯರು * ವಿವರಿಸಿದ ಅಭಿಪ್ರಾಯಗಳಿಗೆ ಸರಿಹೋಗುತ್ತವೆ.

ಬೊಂಬಾಯಿ ಪ್ರಾಂತದ ಶಾಸನ ಸಭೆಯಲ್ಲಿ ಗೋಖಲೆಯವರಿದ್ದುದು ಎರಡು ವರ್ಷ ಮಾತ್ರವೇ. ಆ ಪ್ರಾಂತದ ಪ್ರತಿನಿಧಿಯಾಗಿ ವೈಸ್‌ರಾಯರವರ (ಇಂಪೀರಿಯಲ್ ಲೆಜಿಸ್ಲೇಟಿವ್ ಕೌನ್ಸಿಲ್) ಸಾರ್ವಭೌಮ ಶಾಸನ ಸಭೆಯಲ್ಲಿ ಕೆಲಸಮಾಡುತ್ತಿದ್ದ ಪ್ರಸಿದ್ಧ ದೇಶಾಭಿಮಾನಿಗಳಾದ ಫೆರೋಜ್ ಷಾ ಮೇಥಾರವರು ೧೯೦೧ರಲ್ಲಿ ತಮ್ಮ ಆ ಪದವಿಗೆ ರಾಜೀನಾಮೆ ಕೊಟ್ಟರು. ಆಗ ಆ ಸ್ಥಾನಕ್ಕೆ ಬೇರೊಬ್ಬ ಪ್ರತಿನಿಧಿಯನ್ನು ಆರಿಸಬೇಕಾಗಿ ಬರಲು ಬೊಂಬಾಯಿ ಪ್ರಾಂತೀಯ ಶಾಸನ ಸಭೆಯವರು ಗೋಖಲೆಯವರನ್ನೇ ಚುನಾಯಿಸಿದರು. ಈ ದೊಡ್ಡ ಪದವಿಯ ಜವಾಬ್ದಾರಿಯನ್ನು ಅವರು ಕೊನೆಯವರೆಗೂ ವಹಿಸಿದ್ದರು. ಈ ರೀತಿ ಕಾರ್ಯಭಾರವು ಹೆಚ್ಚಿದ ಕಾರಣದಿಂದ ೧೯೦೨ರಲ್ಲಿ ಅವರು ತಮ್ಮ ಉಪಾಧ್ಯಾಯ ವೃತ್ತಿಯಿಂದ ಮೊದಲು ರಜಾ ಪಡೆದುಕೊಂಡು, ಎರಡು ವರ್ಷಗಳಾದ ಬಳಿಕ ತಿಂಗಳೊಂ

---

* "ದಿವಾನ್ ರಂಗಾಚಾರ್ಲು"—೭ನೆಯ ಪರಿಚ್ಛೇದ (ನಾಲ್ಕನೆಯ ಮುದ್ರಣ, ೭೬—೭೭ನೆಯ ಪುಟಗಳು).

ದಕ್ಕೆ ೩೦ ರೂಪಾಯಿಗಳ ವಿಶ್ರಾಂತಿ ವೇತನದ (ಪಿಂಛನ್) ಮೇಲೆ ನಿವೃತ್ತರಾದರು. ಅಲ್ಲಿಂದ ಮುಂದಕ್ಕೆ ಆ ಅಲ್ಪ ವರಮಾನವೇ ಅವರಿಗಿದ್ದ ಮುಖ್ಯ ಜೀವನೋಪಾಯ.

ಅವರ ವಿಶ್ರಾಂತಿ ಸಂದರ್ಭದ ನಿಮಿತ್ತವಾಗಿ ೧೯೦೨ನೆಯ ಸೆಪ್ಟೆಂಬರ್ ೧೯ರಲ್ಲಿ ಫರ್ಗ್ಯುಸನ್ ಕಾಲೇಜಿನ ವಿದ್ಯಾರ್ಥಿಗಳು ಗೋಖಲೆ ಯವರಿಗೆ ಒಂದು ಸನ್ಮಾನಪತ್ರವನ್ನು ಸಮರ್ಪಿಸಿದರು. ಆ ವೇಳೆ ಗೋಖಲೆ ಯವರು ಕೊಟ್ಟ ಪ್ರತ್ಯುತ್ತರದಲ್ಲಿ—ತಾವು ಆ ವಿದ್ಯಾಶಾಲೆಯಲ್ಲಿದ್ದ ನೆಮ್ಮದಿಯಾದ ಉದ್ಯೋಗವನ್ನೂ ಇಷ್ಟಮಿತ್ರರ ಸಹವಾಸವನ್ನೂ ಬಿಟ್ಟು, ಬಿರುಗಾಳಿಯಿಂದ ಉಲ್ಲೋಲ ಕಲ್ಲೋಲವಾದ ಸಮುದ್ರದಂತಿರುವ ರಾಜ ಕೀಯ ಕ್ಷೇತ್ರಕ್ಕೆ ಹೊರಡಲು ತಮ್ಮ ಅಂತರಂಗದ ಪ್ರೇರಣೆಯೇ ಕಾರಣ ವೆಂದೂ, ಈ ದೇಶದಲ್ಲಿ ಸಾರ್ವಜನಿಕ ಜೀವನವು ಬಹು ವಿಧದ ಕಷ್ಟ ಪರೀಕ್ಷೆ ಗಳಿಂದಲೂ ಅತಿ ಸ್ವಲ್ಪವಾದ ಪ್ರತಿಫಲದಿಂದಲೂ ಕೂಡಿರುವುದೆಂದೂ, ಆದರೂ ಯಾರಿಗೆ ಆ ಕಡೆ ಪ್ರವೃತ್ತಿಯುಂಟಾಗುವುದೋ ಅವರು ಶ್ರದ್ಧೆ ಯಿಂದಲೂ ಭರವಸೆಯಿಂದಲೂ ದುಡಿದು, ಸ್ವಾರ್ಥತೆಯಿಲ್ಲದ ಕರ್ತವ್ಯಾಚರಣೆ ಯಿಂದ ಎಂಥಾ ಮನಸ್ತೃಪ್ತಿ ಬರುವುದೋ ಅದನ್ನು ಮಾತ್ರವೇ ಗಮನ ದಲ್ಲಿರಿಸಿಕೊಂಡು ನಡೆಯಬೇಕೆಂದೂ, ಇನ್ನು ಮುಂದೆ ತಾವು ಎಲ್ಲಿದ್ದರೂ—ಯಾವ ಸ್ಥಿತಿಯಲ್ಲಿದ್ದರೂ—ಆ ಕಾಲೇಜಿನ ವಿಷಯದಲ್ಲಿ ಎಂದಿನಂತೆ ಮಮತೆ ಯಿಂದಿರತಕ್ಕವರೆಂದೂ, ವಿದ್ಯಾರ್ಥಿಗಳು ಆ ಸಂಸ್ಥೆಯ ಮೂಲಾಶಯವನ್ನು ಸರ್ವದಾ ಸ್ಮರಿಸಿ ಅದರ ವಿಷಯದಲ್ಲಿ ಹೆಮ್ಮೆಯಿಂದಿರಬೇಕೆಂದೂ ಹೇಳಿದರು.

---

## ಪ್ರಕರಣ ೪—ಹೋರಾಟದ ಬಿರುಬು

ಸಾರ್ವಭೌಮ ಶಾಸನ ಸಭೆ—ಭಾಷಣಗಳ ವಿವಿಧ ವಿಷಯಗಳು—ಭಾಷಣ ಸೌಂದರ್ಯ—ರಾಜ್ಯಕೋಶ ಪರಾಮರ್ಶೆ—ಇಂಗ್ಲೆಂಡಿಗೆ ಪ್ರಯಾಣ

ಗೋಖಲೆಯವರು ಸಾರ್ವಭೌಮ ಶಾಸನ ಸಭೆಯಲ್ಲಿದ್ದ ಕಾಲದ ಬಹು ಭಾಗವು ಪ್ರಜಾಸಂಕ್ಷೋಭೆಯ ಸಮಯವೆಂಬುದನ್ನು ನಾವು

ನೆನಪಿನಲ್ಲಿಡುವುದು ಆವಶ್ಯಕ. ಆಗ ವೈಸ್‌ರಾಯ್, ಮತ್ತು ಗವರ್ನರ್-ಜನರಲ್ ಆಗಿದ್ದ ಲಾರ್ಡ್ ಕರ್ಜನ್ ಅವರು ಪ್ರಜಾಭಿಮತಕ್ಕೆ ವಿರೋಧವಾಗಿ ಬಂಗಾಳಾ ಪ್ರಾಂತವನ್ನು ಒಡೆದು ಎರಡು ಬೇರೆ ಬೇರೆ ವಿಭಾಗಗಳಾಗಿ ವಿಂಗಡಿಸಿದ್ದರು. ವಿದ್ಯಾವಂತರೂ, ಆವೇಶದ ಸ್ವಭಾವವುಳ್ಳವರೂ, ಪ್ರಬಲರೂ ಆದ ಬಂಗಾಳೀ ಜನರಿಗೆ ಈ ಏರ್ಪಾಟು ಮಹತ್ತರವಾದ ಕೋಪಸಂತಾಪಗಳನ್ನುಂಟುಮಾಡಿತ್ತು. ಅವರು ತಮ್ಮ ಪ್ರಾಂತವನ್ನು ಪುನಃ ಒಂದುಗೂಡಿಸಿ ಅಖಂಡವನ್ನಾಗಿ ಮಾಡಿಸಬೇಕೆಂದು ಶಪಥವನ್ನು ಹೂಡಿ, ಪ್ರಚಂಡವಾದ ಚಳವಳಿಯನ್ನು ನಡಿಸುತ್ತಿದ್ದರು. ಲಾರ್ಡ್ ಕರ್ಜನ್‌ರವರ ಇತರ ದರ್ಪವಿಜೃಂಭಣೆಯ ಕೃತ್ಯಗಳಿಂದಲೂ ಉದ್ಧತ ಭಾಷಣಗಳಿಂದಲೂ ಎಲ್ಲ ಪ್ರಾಂತಗಳ ಭಾರತೀಯರ ಮನಸ್ಸೂ ಉಲ್ಲೋಲ ಕಲ್ಲೋಲವಾಗಿತ್ತು. ಅಂತಹ ಸನ್ನಿವೇಶದಲ್ಲಿ ಪ್ರಜಾಪಕ್ಷವನ್ನು ಹಿಡಿದು ವಾದಿಸುವುದು ಎಂತಹವರಿಗೂ ಸುಲಭವಾದ ಕೆಲಸವೆನ್ನಿಸುತ್ತಿರಲಿಲ್ಲ. ನಿರ್ದಾಕ್ಷಿಣ್ಯವಾಗಿ ಮಾತನಾಡಿ ಸರಕಾರದವರನ್ನು ರೇಗಿಸಿದ್ದಿದ್ದರೆ ಅದರಿಂದ ಜನರಿಗೆ ಯಾವ ಉಪಕಾರವೂ ಆಗದೆ ಕಿರುಕುಳವೇ ಮತ್ತಷ್ಟು ಹೆಚ್ಚುತ್ತಿತ್ತು. ನಿರ್ದಾಕ್ಷಿಣ್ಯವಾಗಿ ಮಾತನಾಡದಿದ್ದರೆ ಪ್ರಜೆಗಳ ಇಷ್ಟಾನಿಷ್ಟಗಳನ್ನು ಸರಕಾರಕ್ಕೆ ತಿಳಿಯಪಡಿಸುವುದಾಗುತ್ತಿರಲಿಲ್ಲ. ನಯ ನಿರ್ಭೀತತೆಗಳೆರಡನ್ನೂ ಸೇರಿಸಿ ತೋರಿ, ಸರಕಾರಕ್ಕೆ ಹಿತೋಪದೇಶವನ್ನೂ ಪ್ರಜಾವರ್ಗಕ್ಕೆ ಸಮಾಧಾನವನ್ನೂ ಕೊಡುವ ಕಷ್ಟ ಕಾರ್ಯವನ್ನು ಗೋಖಲೆಯವರು ಕೈಗೊಳ್ಳಬೇಕಾಗಿತ್ತು. ಅದನ್ನು ಅವರು ಎಷ್ಟು ಚೆನ್ನಾಗಿ ನೆರವೇರಿಸಿದರೆಂಬುದನ್ನು ಸ್ವಪಕ್ಷ ಪರಪಕ್ಷಗಳವರಿಬ್ಬರೂ ಏಕ ವಾಕ್ಯದಿಂದ ಒಪ್ಪಿಕೊಂಡಿರುವರು. ಭಾರತೀಯರ ಗುಣಾತಿಶಯಗಳನ್ನು ಒಪ್ಪಿಕೊಳ್ಳುವುದರಲ್ಲಿ ಅಷ್ಟೇನೂ ಉತ್ಸಾಹಶಾಲಿಯಲ್ಲದ ಲಾರ್ಡ್ ಕರ್ಜನ್‌ರವರೇ ಗೋಖಲೆಯವರ ವಾದಕ್ರಮಗಳನ್ನು ಬಹುವಾಗಿ ಶ್ಲಾಘಿಸಿದರು. ಗೋಖಲೆಯವರು ೧೩-೧೪ ವರ್ಷ ಅಖಿಲ ಭಾರತೀಯ ಶಾಸನ ಸಭೆಯ ಸದಸ್ಯರಾಗಿ ಮಾಡಿದ ಕೆಲಸಗಳನ್ನೆಲ್ಲ ತಕ್ಕಷ್ಟು ವಿಸ್ತಾರವಾಗಿ ವಿವರಿಸಬೇಕಾದರೆ ಬೇರೊಂದು ಪ್ರಬಂಧವನ್ನು ಬರೆಯಬೇಕಾಗುವುದು. ಆ ಕಾರ್ಯಕಲಾಪವು ಅಷ್ಟು ವಿವಿಧವಾದುದು

ಮತ್ತು ಅಷ್ಟು ದೂರ-ವ್ಯಾಪನೆಯುಳ್ಳದು. ಅದರ ಸ್ವಭಾವ ಮಹಿಮೆಗಳನ್ನು ಚೆನ್ನಾಗಿ ತಿಳಿಯಬೇಕೆನ್ನುವವರು ಮೊದಲು ನಮ್ಮ ದೇಶದ ಆಗಿನ ಸ್ಥಿತಿಯನ್ನೂ, ಬ್ರಿಟಿಷ್ ಜನರ ರಾಜ್ಯತಂತ್ರದ ಪದ್ಧತಿಗಳನ್ನೂ, ಪ್ರಪಂಚದ ನಾಗರಿಕ ಭಾಗದಲ್ಲಿಯ ರಾಜ್ಯಗಳ ಆಶೆ ಆಶಯಗಳನ್ನೂ ಅರಿತವರಾಗಬೇಕು. ಇಲ್ಲಿ ನಾವು ಗೋಖಲೆಯವರು ಆ ಸಭೆಯಲ್ಲಿ ಮಾಡಿದ ಭಾಷಣಗಳ ಅತಿ ಮುಖ್ಯ ವಿಷಯಗಳನ್ನು ಮಾತ್ರ ಒಂದೆರಡು ವಾಕ್ಯಗಳಲ್ಲಿ ಸಂಗ್ರಹಿಸಿ ಮುಂದಿನ ಕಥೆಗೆ ಹೊರಡಬೇಕಾಗಿದೆ. ಆ ವಿಷಯಗಳಾವುವೆಂದರೆ :—

(೧) ವರ್ಷೇ ವರ್ಷೇ ಆಗುವ "ಬಡ್ಜೆಟ್" ಅಥವಾ ರಾಜ್ಯಾದಾಯ ವ್ಯಯ ಪಟ್ಟಿ :—ಇದನ್ನು ವಿಮರ್ಶಿಸುವ ವೇಳೆಯಲ್ಲಿ ಸರಕಾರದ ಎಲ್ಲಾ ಇಲಾಖೆಗಳ ಆಡಳಿತದ ನ್ಯೂನಾಧಿಕ್ಯಗಳನ್ನೂ ಎತ್ತಿ ತೋರಿಸಿ, ಅವುಗಳ ಕಾರ್ಯಕ್ರಮಗಳನ್ನು ಹೇಗೆ ಹೇಗೆ ತಿದ್ದಬೇಕೆಂದು ಸೂಚಿಸಲು ವಿಶೇಷವಾದ ಅವಕಾಶವುಂಟು. ಈ ಅವಕಾಶವನ್ನು ಗೋಖಲೆಯವರಷ್ಟು ವಿಚಕ್ಷಣೆಯಿಂದಲೂ ಸಾಮರ್ಥ್ಯದಿಂದಲೂ ಶ್ರದ್ಧೆಯಿಂದಲೂ ಉಪಯೋಗಿಸಿಕೊಂಡವರು ಬೇರೊಬ್ಬರಿಲ್ಲವೆಂಬುದು ಎಲ್ಲರೂ ಒಪ್ಪಿರುವ ಸಂಗತಿ. ಇಂಡಿಯಾ ಸರಕಾರವು ಪ್ರಜೆಗಳಿಂದ ಅವರ ಶಕ್ತಿಗೆ ಮೀರಿದಷ್ಟು ಕಂದಾಯ ಕವಳಿಗೆಗಳನ್ನು ತೆಗೆದುಕೊಳ್ಳುತ್ತಿದೆಯೆಂದೂ, ಈ ಭಾರವನ್ನು ಕಡಿಮೆ ಮಾಡಬೇಕೆಂದೂ, ಸರಕಾರದ ಸಿಬ್ಬಂದಿಯ ವೆಚ್ಚಗಳನ್ನು ಕಡಿಮೆಮಾಡಿ, ಭಂಡಾರದಲ್ಲಿ ಉಳಿಸಿದ ಹಣವನ್ನು ವಿದ್ಯಾಪ್ರಚಾರಣೆಗೂ ಆರೋಗ್ಯಾಭಿವೃದ್ಧಿಗೂ ಇತರ ಬಗೆಯ ಪ್ರಜಾ ಸೌಕರ್ಯಗಳಿಗೂ ವಿನಿಯೋಗಿಸಬೇಕೆಂದೂ ಅವರು ಪದೇ ಪದೇ ಸಾರಿ ಹೇಳಿರುವರು.

(೨) ಕಂಟೋನ್ಮೆಂಟುಗಳಲ್ಲಿ (ಮಿಲಿಟರಿ) ಸೈನ್ಯದ ಅಧಿಕಾರಿಗಳಿಗೆ ಬೇಕಾದ ಸ್ಥಳ ವಸತಿಗಳನ್ನು ಕಲ್ಪಿಸುವುದಕ್ಕಾಗಿ ನಿರ್ಬಂಧದಿಂದ ಖಾಸಗೀ ಜನರ ಮನೆಗಳನ್ನು ಬಿಡಿಸಿಕೊಳ್ಳುವಂತೆ ಮಾಡಬೇಕೆಂದು ಸರಕಾರದವರು ಆಲೋಚನೆಯಿಟ್ಟುಕೊಂಡಿದ್ದರು. ಇದನ್ನು ಗೋಖಲೆಯವರು ಖಂಡಿಸಿದರು.

(೩) ಸರಕಾರಿ ರಹಸ್ಯಗಳನ್ನು ಕಾಪಾಡುವ ವಿಷಯ :—ಅಪ್ಪಣೆಯಿಲ್ಲದೆ ಯಾರಾದರೂ ಸರಕಾರದ ಕಛೇರಿಗಳೊಳಗೆ ಪ್ರವೇಶಿಸಿದರೆ ಅಂಥವರನ್ನೂ, ಸರಕಾರದವರು ತಾವಾಗಿ ಪ್ರಕಟಿಸದೆ ಇದ್ದ ಸಂಗತಿಗಳನ್ನು ಪ್ರಕಟಗೊಳಿಸುವ ಪತ್ರಿಕಾ ಕರ್ತರನ್ನೂ ಶಿಕ್ಷೆಗೆ ಗುರಿಪಡಿಸುವುದರಿಂದ ಸರಕಾರೀ ರಹಸ್ಯಗಳು ಹೊರಗೆ ಹೋಗುವುದನ್ನು ತಪ್ಪಿಸಲಾದೀತೆಂಬ ಸರಕಾರದ ಸಲಹೆ. ಇದನ್ನು ಗೋಖಲೆಯವರು ಅತಿ ತೀಕ್ಷ್ಣ ವಚನಗಳಲ್ಲಿ ಖಂಡಿಸಿದರು.

(೪) ಭಾರತೀಯ ವಿಶ್ವವಿದ್ಯಾ ಪೀಠ (ಯೂನಿವರ್ಸಿಟಿ)ಗಳ ಸುಧಾರಣೆ— ವೈಸ್‌ರಾಯ್ ಲಾರ್ಡ್ ಕರ್ಜನ್‌ರವರೇ ಇದಕ್ಕೆ ಕಾರಣಕರ್ತರು. ವಿಶ್ವವಿದ್ಯಾ ಪೀಠಗಳು ಎಲ್ಲ ದೇಶಗಳಲ್ಲಿಯೂ ಕ್ರಮ ಕ್ರಮವಾಗಿ ಸರಕಾರದ ಅಧೀನತೆಯಿಂದ ಬಿಡುಗಡೆ ಹೊಂದಿ ಸ್ವತಂತ್ರವಾಗಿವೆ. ಇಂಡಿಯಾ ದೇಶದಲ್ಲಿ ಹಾಗಾಗದೆ, ವಿಶ್ವವಿದ್ಯಾಲಯಗಳ ಬಾಳು ಎಂದೆಂದಿಗೂ ಸರಕಾರಕ್ಕೆ ಕೈವಶವಾಗಿರುವಂತೆ ಮಾಡಬೇಕೆಂಬುದೇ ಲಾರ್ಡ್ ಕರ್ಜನ್‌ರವರ ತಾತ್ಪರ್ಯ. ಹಾಗೆ ಮಾಡಿದರೆ ಈ ದೇಶದಲ್ಲಿ ವಿದ್ಯಾಪ್ರಚಾರವು ಸ್ವತಂತ್ರವಾಗಿ ನಡೆಯುವುದೂ, ಅದರಿಂದ ಸ್ವತಂತ್ರಪ್ರಿಯರೂ ಸ್ವರಾಜ್ಯ ಕಾಂಕ್ಷಿಗಳೂ ಆದ ಜನರು ಹುಟ್ಟುವುದೂ ತಪ್ಪೀತೆಂದು ಅವರು ನಂಬಿಕೊಂಡಿದ್ದರು. ಈ ಬಗೆಯ ಕಾನೂನನ್ನು ಖಂಡಿಸುವುದರಲ್ಲಿ ಗೋಖಲೆಯವರು ಮುಂದಾಳಾಗಿದ್ದರು. ಬಹು ವಿಧವಾಗಿ ಅವರು ಆ ಕಾನೂನನ್ನು ಪರೀಕ್ಷಿಸಿ ಅದರ ದೋಷಗಳನ್ನು ಉದ್ಘಾಟಿಸಿದರು.

(೫) ಪರಸ್ಪರ ಸಹಾಯ ಸಂಘಗಳನ್ನು ಕುರಿತ ಕಾನೂನು :—ಇದನ್ನು ಗೋಖಲೆಯವರು ಬಹುಸಂತೋಷದಿಂದ ಅನುಮೋದಿಸಿ, ಅದು ಸಾಂಗವಾಗಿ ಜಾರಿಗೆ ಬಂದು ಪ್ರಜೆಗಳಿಗೆ ನಿಜವಾಗಿ ಅನುಕೂಲವಾಗಬೇಕಾದರೆ ಸರಕಾರದವರು ನಡೆಸಬೇಕಾದ ಕ್ರಮಗಳೆಂಥವೆಂಬುದನ್ನು ಸೂಚಿಸಿದರು.

(೬) ಸಿಂಧೂ ಪ್ರಾಂತದಲ್ಲಿ ಸಾಲಕ್ಕೆ ಅಡುವಾಗಿ ಬಿದ್ದಿರುವ ಜಮೀನುಗಳನ್ನು ಮಾಲೀಕರಿಗೆ ಬಿಡಿಸಿಕೊಡುವ ವಿಷಯ :—ಈ ಕಾನೂನಿಗೆ ಗೋಖಲೆಯವರು ಕೆಲವು ಬದಲಾವಣೆಗಳನ್ನು ಸೂಚಿಸಿ, ರೈತರನ್ನು ಸಾಲಸೋಲಗಳಿಂದ ಉದ್ಧರಿಸುವುದಕ್ಕಾಗಿ ಸರಕಾರವು ತಾನು ಸಾಲಮಾಡಿಯಾದರೂ ಸಹಾಯವನ್ನೊದಗಿಸಬೇಕೆಂದು ವಾದಿಸಿದರು.

(೭) ರಾಜ್ಯ ವಿರೋಧಿ ಸಂಘಗಳನ್ನು ನಿಲ್ಲಿಸುವ ವಿಷಯ :—ಈ ಕಾನೂನಿನ ಉದ್ದೇಶ್ಯವು ಕಾಗದದ ಮೇಲೆ ನಿರ್ದುಷ್ಟವಾಗಿ ಕಂಡರೂ, ಕಾರ್ಯರೂಪದಲ್ಲಿ ಅದು ಎಲ್ಲ ಪ್ರಜಾಪಕ್ಷದ ರಾಜಕೀಯ ಚಳವಳಿಗಳಿಗೂ ಪ್ರತಿಬಂಧಕವಾಗುವುದೆಂದೂ; ಇಂಥಾ ಕಾನೂನು ಪೋಲೀಸ್ ಅಧಿಕಾರಿಗಳಿಗೆ ಅಪರಿಮಿತವಾದ ಅಧಿಕಾರವನ್ನು ಕೊಡುವುದಾದಕಾರಣ, ಅವರು ಅದನ್ನು ವಿವೇಚನೆಯಿಲ್ಲದೆ ಉಪಯೋಗಿಸಿ ಪ್ರಜೆಗಳಿಗೆ ಹಿಂಸೆ ಕೊಡಲು ಆಗುವುದೆಂದೂ; ಅದರ ಭಯದಿಂದ ಪ್ರಜಾ ಪ್ರಯತ್ನಗಳಿಗೆ ಹಾನಿಯುಂಟಾಗುವುದೆಂದೂ ಗೋಖಲೆಯವರು ವಾದಿಸಿ, ಸರಕಾರದವರು ತಾಳ್ಮೆಯಿಂದಲೂ ಸಹನೆಯಿಂದಲೂ ವರ್ತಿಸುವುದು ನ್ಯಾಯವೆಂದು ಒತ್ತಿ ಹೇಳಿದರು.

(೮) ವರ್ತಮಾನಪತ್ರಿಕೆಗಳ ಸ್ವಾತಂತ್ರ್ಯವನ್ನು ಕಡಿಮೆಮಾಡಿ ಅವುಗಳ ಚಾಲಕರಿಗೆ ಭೀತಿ ಹುಟ್ಟಿಸುವಂತೆ ಶಿಕ್ಷೆಗಳನ್ನು ವಿಧಿಸಬೇಕೆಂಬ ಕಾನೂನನ್ನೂ ಗೋಖಲೆಯವರು ಮೇಲಿನಂತೆ ಖಂಡಿಸಿದರು.

(೯) ಸುಂಕದ ಕಟ್ಟಳೆಯ ಬದಲಾವಣೆ :—೧೯೧೦ರಲ್ಲಿ ಇಂಡಿಯಾ ಸರಕಾರಕ್ಕೆ ಆದಾಯ ಸಾಲದೆ ಹೋದೀತೆಂದು ತೋರಿಬಂದಕಾರಣ, ಅದನ್ನು ಸರಿಪಡಿಸಿಕೊಳ್ಳುವುದಕ್ಕಾಗಿ ಈ ದೇಶವು ಆಮದಾಗಿ ತರಿಸಿಕೊಳ್ಳುವ ಬೆಳ್ಳಿಯಮೇಲೂ ಕೆರೋಸಿನ್ ಎಣ್ಣೆಯ ಮೇಲೂ ಸುಂಕಹಾಕಬೇಕೆಂದು ಸರಕಾರದವರು ಅಭಿಪ್ರಾಯಪಟ್ಟರು. ಗೋಖಲೆಯವರು ಆ ಎರಡು ವಸ್ತುಗಳೂ ಈ ದೇಶದ ಬಡಜನರಿಗೆ ಬೇಕಾದವುಗಳಾದುದರಿಂದ ಅವುಗಳ ಮೇಲೆ ಸುಂಕ ಹಾಕಿ ಅವುಗಳ ಬೆಲೆಯನ್ನು ಹೆಚ್ಚಿಸುವುದು ನ್ಯಾಯವಲ್ಲವೆಂದೂ, ಹಾಗೆ ಅವಶ್ಯವಾದರೆ ಇಂಡಿಯಾ ದೇಶದಿಂದ ರಫ್ತಾಗಿ ಹೋಗುವ ಸಣಬಿನ ಮೇಲೂ, ಇಲ್ಲಿಗೆ ಆಮದಾಗಿ ಬರುವ ವಿದೇಶೀ ಸಕ್ಕರೆಯ ಮೇಲೂ ಸುಂಕವನ್ನು ವಿಧಿಸಬಹುದೆಂದೂ ವಾದಿಸಿದರು.

(೧೦) ಸರಕಾರದ ಬೊಕ್ಕಸದಲ್ಲಿ ಹಣವನ್ನು ಶಿಲ್ಕು ನಿಲ್ಲಿಸಿಕೊಂಡಿರುವುದಕ್ಕೆ ಬದಲಾಗಿ ಅದನ್ನು ಮ್ಯುನಿಸಿಪಾಲಿಟಿಗಳ ಮುಖಾಂತರ ಪ್ರಜಾರೋಗ್ಯದ ಕೆಲಸಗಳಿಗೆ ವಿನಿಯೋಗಿಸಬೇಕೆಂದು ಅವರು ಸಲಹೆಕೊಟ್ಟರು.

(೧೧) ರೆಯಿಲ್ವೇ ಆಡಳಿತಗಳಲ್ಲಿ ನಡೆಯುತ್ತಿರುವ ದುಂದು ವೆಚ್ಚವನ್ನು ತಪ್ಪಿಸಿ, ರೆಯಿಲ್ವೇ ಬಡಾವಣೆಗೆ ವಿಶೇಷ ಆತುರಪಡದೆ, ಕ್ರಮೇಣ ರೆಯಿಲ್ವೇ ಆಡಳಿತವನ್ನೆಲ್ಲಾ ಸರಕಾರವೇ ಕಂಪೆನಿಗಳ ಕೈಯಿಂದ ತೆಗೆದುಕೊಂಡು ಸ್ವಂತವಾಗಿ ನಡೆಸಬೇಕೆಂದು ಅವರು ವಾದಿಸಿದರು.

(೧೨) ಶಾಸನ ಸಭೆ ಮೊದಲಾದ ಪ್ರಜಾ ಸಂಸ್ಥೆಗಳ ಸದಸ್ಯರು ತಾವು ಜಾತಿಗಳ ಮತ್ತು ಮತಗಳ ಪ್ರತಿನಿಧಿಗಳೆಂದು ಭಾವಿಸಿಕೊಳ್ಳದೆ, ತಮ್ಮ ಹೃದಯದಲ್ಲಿ ಸರ್ವದಾ ದೇಶವೊಂದಕ್ಕೇ ಪ್ರಥಮ ಸ್ಥಾನವನ್ನು ಕೊಟ್ಟು, ತಾವು ತಮ್ಮತಮ್ಮ ಮನೆಗಳಲ್ಲಿ ಯಾವ ಕುಲದ ಅಥವಾ ಮತದ ಜನರೇ ಆಗಿದ್ದರೂ, ಸಾರ್ವಜನಿಕ ಸಭೆಗಳಲ್ಲಿ ಮಾತ್ರ ತಾವು ಎಲ್ಲ ಕುಲ ಎಲ್ಲ ಮತಗಳಿಗೂ ಪ್ರತಿನಿಧಿಯಾದಂತೆ ನಡೆಯಬೇಕೆಂದು ಅವರು ಬಿನ್ನಯಿಸುತ್ತಿದ್ದರು.

(೧೩) ಸರಕಾರದ ಆಡಳಿತಗಳ ವೆಚ್ಚವು ಅತಿಯಾಗಿ ಹೆಚ್ಚಿರುವುದರ ಕಾರಣಗಳನ್ನು ಕಂಡುಹಿಡಿದು ಖರ್ಚನ್ನು ಕಡಿಮೆಮಾಡುವ ಬಗೆಗಳನ್ನು ಸೂಚಿಸಲು ಒಂದು ವಿಚಾರಕ ಮಂಡಲಿಯನ್ನು ನಿಯಮಿಸಬೇಕೆಂದು ಅವರು ಅರಿಕೆಮಾಡಿದರು.

(೧೪) ಅಫೀಮಿನ ರಫ್ತಿನಮೇಲೆ ಸುಂಕವನ್ನು ಸ್ವಲ್ಪ ಸ್ವಲ್ಪವಾಗಿ ಹೆಚ್ಚಿಸುತ್ತ ಹೋಗಿ, ಅದರಿಂದ ದೊರೆತ ಆದಾಯದಿಂದ ಒಂದು ನಿಧಿಯನ್ನು ಏರ್ಪಡಿಸಿ, ಕೆಲವು ವರ್ಷಗಳ ತರುವಾಯ ಅಫೀಮು ವ್ಯಾಪಾರವನ್ನು ಸಂಪೂರ್ಣವಾಗಿ ನಿಲ್ಲಿಸಿ, ಆಗ ಹಾಗೆ ನಷ್ಟವಾಗುವ ಸುಂಕದ ವರಮಾನಕ್ಕೆ ಪ್ರತಿಯಾಗಿ ಆ ನಿಧಿಯನ್ನು ಉಪಯೋಗಪಡಿಸಿಕೊಳ್ಳಬೇಕೆಂದು ಅವರು ಅರಿಕೆಮಾಡಿದರು.

(೧೫) ವರ್ತಮಾನ ಪತ್ರಿಕೆಗಳು ಯಾರೊಬ್ಬರ ದಾಕ್ಷಿಣ್ಯಕ್ಕೂ ಒಳಪಡದೆ ನಡೆಯಬೇಕಾದುವಾದಕಾರಣ, ಅವುಗಳಿಗೆ ಸರಕಾರವು ದ್ರವ್ಯಸಹಾಯವನ್ನು ಕೊಟ್ಟು ತನ್ನ ಹಂಗಿಗೆ ಅವುಗಳನ್ನು ಸಿಕ್ಕಹಾಕಿಕೊಳ್ಳುವುದು ಸರಿಯಲ್ಲವೆಂದು ಅವರು ವಾದಿಸಿದರು.

(೧೬) ಈ ದೇಶದೊಳಗೆ ತಯಾರಾಗುವ ಹತ್ತಿಯ ಜವಳಿಯ ಮೇಲಿನ ಸುಂಕವನ್ನು ವಜಾ ಮಾಡುವುದರಿಂದ ದೇಶೀಯ ಗಿರಣಿ (ಮಿಲ್ಲು)ಗಳಿಗೆ ಸಹಾಯವಾಗುವುದಲ್ಲದೆ ಜನರಿಗೆ ಬಟ್ಟೆಯು ಅಗ್ಗವಾಗಿ ದೊರೆಯುವುದೆಂದು ಅವರು ಸೂಚಿಸಿದರು.

(೧೭) ಇಂಡಿಯಾ ದೇಶದಲ್ಲಿ ಸಕ್ಕರೆಯ ತಯಾರಿಯು ಎಷ್ಟುಮಟ್ಟಿಗೆ ನಡೆಯುತ್ತಿದೆ? ವಿದೇಶೀ ಸಕ್ಕರೆಯ ಪೋಟಾಪೋಟಿಯಿಂದ ಸ್ವದೇಶೀ ಸಕ್ಕರೆಯು ಮೂಲೆಗೆ ಬೀಳದಿರುವಂತೆ ಮಾಡಲು ಸರಕಾರವು ಏನೇನು ಮಾಡಬೇಕು?—ಎಂಬುದನ್ನು ನಿಶ್ಚಯಿಸಿ, ಸಕ್ಕರೆಯ ಆಮದಿಗೆ ಸುಂಕದ ತಡೆಯನ್ನು ಏರ್ಪಡಿಸಲು ಒಂದು ವಿಚಾರಕ ಮಂಡಲಿಯನ್ನು ನಿಯಮಿಸಬೇಕೆಂದು ಅವರು ಅರಿಕೆಮಾಡಿದರು.

(೧೮) ದೇಶದ ರಾಜ್ಯೋದ್ಯೋಗಗಳಲ್ಲಿ ವಿದೇಶೀಯರ ಸಂಖ್ಯೆಯು ಕಡಿಮೆಯಾಗಿ ಸ್ವದೇಶೀಯರ ಸಂಖ್ಯೆಯೇ ಹೆಚ್ಚಾಗುವಂತೆ ಮಾಡಲು ಯಾವ ಏರ್ಪಾಟುಗಳನ್ನು ಸರಕಾರವು ನಡಿಸಬೇಕೆಂದು ನಿರ್ಧರಿಸಲು ಒಂದು ವಿಚಾರಕ ಮಂಡಲಿಯು ನಿಯಮಿತವಾಗಬೇಕೆಂದು ಅವರು ಬಿನ್ನಯಿಸಿದರು.

(೧೯) ಕಾರ್ಖಾನೆಗಳಲ್ಲಿ ಕೂಲಿ ಕೆಲಸಮಾಡುವ ಹುಡುಗ ಹುಡುಗಿಯರ ವಿದ್ಯಾಭ್ಯಾಸಕ್ಕಾಗಿ ಕಾರ್ಖಾನೆಗಳವರೇ ಉಚಿತವಾಗಿ ಪಾಠಶಾಲೆಗಳನ್ನಿಡಿಸುವಂತೆ ಮಾಡಬೇಕೆಂದು ಅವರು ವಾದಿಸಿದರು.

(೨೦) ಆದಾಯದ ತೆರಿಗೆಯನ್ನು ಗೊತ್ತುಮಾಡುವುದಕ್ಕಾಗಿ ಜನರ ವರಮಾನಗಳನ್ನು ನಿಷ್ಕರ್ಷಿಸುವುದರಲ್ಲಿ ಅಧಿಕಾರಿಗಳಿಂದ ಅನ್ಯಾಯಗಳು ನಡೆಯದಂತೆ ನೋಡಿಕೊಳ್ಳಬೇಕೆಂದು ಅವರು ಪುನಃಪುನಃ ಎಚ್ಚರಿಸಿದರು.

(೨೧) ಈ ದೇಶದಲ್ಲಿ ರೆಯಿಲ್ವೇಗಳನ್ನು ನಡಿಸುತ್ತಿರುವ ಸಾಹುಕಾರೀ ಕಂಪೆನಿಗಳಿಗೂ, ಸರಕಾರದ ಪರವಾಗಿ ಮೇಲ್ವಿಚಾರಣೆ ಮಾಡುವುದಕ್ಕೆ ರೆಯಿಲ್ವೇ (ಬೋರ್ಡು) ಮಂಡಲಿಗೂ ಉಂಟಾಗಿದ್ದ ಭಿನ್ನಾಭಿಪ್ರಾಯಗಳನ್ನು ವಿಮರ್ಶೆ ಮಾಡಿ ತೀರ್ಮಾನಕೊಡುವ ಕೆಲಸಕ್ಕೆ ಒಂದಾನೊಂದು ರೆಯಿಲ್ವೇ ಕಂಪೆನಿಗೆ ಸಂಬಂಧಪಟ್ಟ ವರ್ತಕರಾದ ಲಾರ್ಡ್ ಇಂಚ್‌ಕೇಪ್ ಎಂಬವರನ್ನೇ ನಿಯಮಿಸಿದ್ದು ಸರಿಯಲ್ಲವೆಂದೂ, ಅಂಥಾ ಏರ್ಪಾಟು ಅವಶ್ಯವಿದ್ದರೆ ಅದನ್ನು ಇಂಡಿಯಾ (ಗವರ್ನರ್ ಜನರಲ್‌ರವರ) ಸರಕಾರವು ಮಾಡಬೇಕಾಗಿತ್ತೇ ಹೊರತು, ಇಂಗ್ಲೆಂಡಿನಲ್ಲಿರುವ ಇಂಡಿಯಾ ವಿಷಯಕ ಮಂತ್ರಿಯು (ಸೆಕ್ರೆಟರಿ ಆಫ್ ಸ್ಟೇಟ್) ತಾನೇ ಸ್ವತಂತ್ರಿಸಿ ಅದನ್ನು ಮಾಡಬಾರದಾಗಿತ್ತೆಂದೂ ಅವರು ವಾದಿಸಿದರು.

(೨೨) ಇಂಡಿಯಾ ದೇಶದಲ್ಲಿ ಪೋಲೀಸ್ ಆಡಳಿತವು ಹೇಗೆ ನಡೆಯುತ್ತಿದೆಯೆಂಬುದನ್ನು ವಿಚಾರಿಸುವುದಕ್ಕೂ, ಅಪರಾಧದ (ಕ್ರಿಮಿನಲ್) ವ್ಯವಹಾರಗಳಲ್ಲಿ ದಸ್ತಗಿರಿ ಮಾಡಲ್ಪಟ್ಟವರಿಂದ ಪೋಲೀಸಿನವರು ಒಡಂಬಡಿಕೆಯ ವಾಜ್ಮೂಲಗಳನ್ನು ಪಡೆಯುವ ಕ್ರಮಕ್ಕೆ ಸಂಬಂಧಪಟ್ಟ ಕಾಯಿದೆಗಳನ್ನು ಹೇಗೆ ಹೇಗೆ ತಿದ್ದಬೇಕೆಂಬುದನ್ನು ಗೊತ್ತುಮಾಡುವುದಕ್ಕೂ ಒಂದು ಕಮಿಟಿ (ಉಪಸಭೆ)ಯನ್ನು ನಿಯಮಿಸಬೇಕೆಂದು ಅವರು ಸೂಚಿಸಿದರು.

(೨೩) ಜಿಲ್ಲೆ (ಡಿಸ್ಟ್ರಿಕ್ಟು) ಗಳ ಆಳಿಕೆಯು ಪ್ರಜಾ ಸಮ್ಮತವಾಗುವಂತೆ ಮಾಡುವುದಕ್ಕೋಸ್ಕರ, ಪ್ರತಿಯೊಂದು ಜಿಲ್ಲೆಯಲ್ಲಿಯೂ ಒಂಬತ್ತು ಮಂದಿ ಸದಸ್ಯರುಳ್ಳ ಒಂದು ಸಭೆಯಿರಬೇಕು; ಅವರಲ್ಲಿ ಕೆಲವರು ಪ್ರಜೆಗಳಿಂದ ಆರಿಸಲ್ಪಟ್ಟಂಥವರಾಗಿಯೂ ಕೆಲವರು ಸರಕಾರದಿಂದ ನಿಯಮಿಸಲ್ಪಟ್ಟವರಾಗಿಯೂ ಇರಬೇಕು; ಎಲ್ಲಾ ಮುಖ್ಯ ವಿಷಯಗಳಲ್ಲಿಯೂ ಜಿಲ್ಲೆಯ 'ಕಲೆಕ್ಟರ್' (ಅಥವಾ ಮೈಸೂರು ಸೀಮೆಯ ಡೆಪ್ಯುಟಿ ಕಮಿಷನರ್) ಎಂಬ ಮುಖ್ಯಾಧಿಕಾರಿಯು ಆ ಸಭೆಯ ಅಭಿಪ್ರಾಯ ಸಲಹೆಗಳನ್ನು ಕೇಳಬೇಕು—ಹೀಗೆಂದು ಅವರು ಅರಿಕೆಮಾಡಿದರು.

(೨೪) ನೆಟಾಲ್ ಎಂಬ ಬ್ರಿಟಿಷ್ ಉಪರಾಷ್ಟ್ರ (ಕಾಲನೀ)ದಲ್ಲಿ ಒಪ್ಪಂದಕ್ಕೆ ಮೈ ಮಾರಿಕೊಂಡಿರುವ,—ಎಂದರೆ ರಾಜೀನಾಮೆ ಕೊಡುವ ಸ್ವಾತಂತ್ರ್ಯವಿಲ್ಲದ,—ಕೂಲಿ ಕೆಲಸಕ್ಕಾಗಿ ಇಂಡಿಯದಿಂದ ಜನರನ್ನು ಸಾಗಿಸುವ ಪದ್ಧತಿಯನ್ನು ನಿಲ್ಲಿಸಬೇಕೆಂದು ಅವರು ಅರಿಕೆಮಾಡಿದರು.

(೨೫) ಅದೇ ರೀತಿ ಮತ್ತಾವ ಬ್ರಿಟಿಷ್ ಉಪರಾಷ್ಟ್ರದಲ್ಲಿಯೇ ಆಗಲಿ, ಇನ್ನೆಲ್ಲಿಯೇ ಆಗಲಿ, ಗುಲಾಮತನದ ಒಪ್ಪಂದದ ನಿರ್ಬಂಧಕ್ಕೊಳಪಟ್ಟ ಕೂಲಿಯ ಕೆಲಸಕ್ಕೆ ಈ ದೇಶದ ಜನರನ್ನು ಆಕರ್ಷಿಸುವುದನ್ನು ತಪ್ಪಿಸಲು ಸರಕಾರದವರು ತಕ್ಕ ಏರ್ಪಾಟುಗಳನ್ನು ನಡಿಸಬೇಕೆಂದೂ ಅವರು ಬಿನ್ನಯಿಸಿದರು.

(೨೬) ಸಾಲೀಯಾನಾ ಬರುವ ರಾಜ್ಯಾದಾಯದ ಹಣವನ್ನು ದೆಹಲೀ ನಗರ ವಿಸ್ತಾರಕ್ಕೆ (ನೂತನ ದೆಹಲೀ ನಿರ್ಮಾಣಕ್ಕೆ) ವಿನಿಯೋಗಿಸಬಾರದೆಂದು ಅವರು ಬಿನ್ನಹ ಮಾಡಿದರು.

(೨೭) ಸಾರ್ವದೇಶೀಯ ಸರಕಾರದ ಬೊಕ್ಕಸದಲ್ಲಿ ಖರ್ಚು ಕಳೆದು ಉಳಿಯುವ ಶೇಷವನ್ನು ನಾನಾಪ್ರಾಂತಗಳ ಸರಕಾರಗಳಿಗೆ ಹಂಚಿಕೊಡಬೇಕು; ಪ್ರಾಂತೀಯ ಸರಕಾರದವರು ಹಾಗೆ ದೊರೆತ ಹಣವನ್ನು ಒಂದು ನಿಧಿಯಾಗಿಟ್ಟುಕೊಂಡು ಅದನ್ನು ವಿದ್ಯೆ, ಆರೋಗ್ಯ. ವೈದ್ಯ, ಸಹಾಯಗಳನ್ನು ಹೆಚ್ಚಿಸಲು ವಿನಿಯೋಗಿಸಬೇಕು; ಈ ನಿಧಿಯನ್ನು ಸಾರ್ವದೇಶೀಯ ಸರಕಾರವು ವರ್ಷೇ ವರ್ಷೇ ಸಾಧ್ಯವಾದಷ್ಟು ವೃದ್ಧಿಪಡಿಸುತ್ತ ಹೋಗಬೇಕು; ಹೀಗೆಂದು ಅವರು ಬಿನ್ನಹಮಾಡಿದರು.

(೨೮) ಮ್ಯುನಿಸಿಪಾಲಿಟಿ ಮೊದಲಾದ ಸ್ಥಳೀಯ ಸಂಸ್ಥೆಗಳಿಗೆ ಸದ್ಯಃ ಇರತಕ್ಕ ವರಮಾನಗಳಾವುವು ; ಅವುಗಳ ಕರ್ತವ್ಯಗಳಿಗೆ ಆ ಆದಾಯವು ಎಷ್ಟು ಮಾತ್ರ ಸಾಲುವುದು ; ಅದನ್ನು ಹೆಚ್ಚಿಸುವುದು ಹೇಗೆ—ಎಂಬ ಬಗೆಗೆ ಸಲಹೆ ಕೊಡಲು ಒಂದು ವಿಚಾರಕ ಮಂಡಲಿಯನ್ನು ನಿಯಮಿಸಬೇಕೆಂದು ಅವರು ತಿಳಿಸಿದರು.

(೨೯) ಇಂಡಿಯಾ ದೇಶದ ನಾಣ್ಯ ಕ್ರಮದಲ್ಲಿ ಚಿನ್ನದ ನಾಣ್ಯಗಳನ್ನೂ ಏರ್ಪಡಿಸಿ, ಈ ದೇಶದ ಟಂಕಸಾಲೆಗಳಲ್ಲಿಯೇ ಅವು ತಯಾರಾಗುವಂತೆ ಮಾಡಬೇಕೆಂದು ಅವರು ಕೋರಿದರು.

(೩೦) ದೇಶದ ಬಾಲಕ ಬಾಲಿಕೆಯರಲ್ಲಿ ಏಳು ವರ್ಷದ ಮೇಲಿನ ಮತ್ತು ಹನ್ನೊಂದು ವರ್ಷದೊಳಗಿನ ವಯಸ್ಸಿನವರಿಗೆಲ್ಲ, ಅವರವರಿಗೆ ಅನುಕೂಲವಾದೆಡೆಗಳಲ್ಲಿ ಪಾಠಶಾಲೆಗಳನ್ನು ಸ್ಥಾಪಿಸಿ, ಅವರಿಂದ ಯಾವ ರುಸುಮನ್ನೂ ಪಡೆಯದೆ, ಸರಕಾರವು ವಿದ್ಯೆ ಕಲಿಸಬೇಕು ; ಮತ್ತು ಯಾವ ತಾಯಿ ತಂದೆ ಅಥವಾ ಪೋಷಕರು ತಮ್ಮ ಮಕ್ಕಳನ್ನು ಪಾಠಶಾಲೆಗೆ ಕಳುಹಿಸುವುದಿಲ್ಲವೋ ಅವರನ್ನು ಶಿಕ್ಷೆಗೆ ಗುರಿಪಡಿಸಬೇಕು— ಹೀಗೆಂಬ ಕಾನೂನು ಮಾಡಬೇಕೆಂದು ಅವರು ಒತ್ತಾಯಮಾಡಿ ಸೂಚಿಸಿದರು.

ಗೋಖಲೆಯವರ ಭಾಷಣ ವಿಷಯ ಪಟ್ಟಿಕೆಯಲ್ಲಿ ಸೇರಬೇಕಾದ ಅಂಶಗಳು ಈ ಮೇಲಣ ೩೦ ಅಲ್ಲದೆ ಇನ್ನೂ ಎಷ್ಟೋ ಇವೆ. ಸಾರ್ವದೇಶೀಯ ಶಾಸನ ಸಭೆಯಲ್ಲಿ ಅವರು ಮಾಡಿದ ಉಪನ್ಯಾಸಗಳು ಒತ್ತಾಗಿ ಅಚ್ಚಾದ ೮೦೪ ಪುಟಗಳನ್ನು ತುಂಬಿವೆ. ಅವುಗಳಲ್ಲಿ ಅವರು ಉದಾಹರಿಸಿರುವ ಲೆಕ್ಕಗಳನ್ನೂ, ಐತಿಹಾಸಿಕ ಸಂಗತಿಗಳನ್ನೂ, ಅರ್ಥಶಾಸ್ತ್ರ ರಾಜ್ಯಶಾಸ್ತ್ರಗಳ ತತ್ತ್ವಗಳನ್ನೂ, ರಾಜಕೀಯ ರಹಸ್ಯಗಳನ್ನೂ ನೋಡಿದರೆ, ಅವರು ಎಷ್ಟು ಗ್ರಂಥಗಳನ್ನೋದಿರಬೇಕು, ಎಷ್ಟು ಸಾವಧಾನವಾಗಿ ಪರ್ಯಾಲೋಚಿಸಿರಬೇಕು, ಎಷ್ಟು ಮಂದಿಯಿಂದ ವಿಷಯ ಸಂಗ್ರಹ ಮಾಡಿರಬೇಕು, ಎಷ್ಟು ಶ್ರಮಪಟ್ಟು ತಮ್ಮ ಅಭಿಪ್ರಾಯಗಳನ್ನು ಪರಿಷ್ಕಾರ ಪಡಿಸಿರಬೇಕು—ಎಂಬೀ ಯೋಚನೆಗಳು ಎಂಥವನಿಗಾದರೂ ಮನಸ್ಸಿಗೆ ಬಂದು, ಅವರ ಬುದ್ಧಿಶಕ್ತಿಯ ವಿಷಯದಲ್ಲಿ ಗೌರವವೂ, ಅವರ ಕಾರ್ಯಶಕ್ತಿಯ ವಿಷಯದಲ್ಲಿ ಆಶ್ಚರ್ಯವೂ ನೆಲೆಗೊಳ್ಳುವುವು. ಮೇಲೆ ಸೂಚಿಸಿರುವ ೩೦ ವಿಷಯಗಳ ಮೇಲೆ ಗೋಖಲೆಯವರು ಕೊಟ್ಟ ಅಭಿಪ್ರಾಯಗಳು ನಮ್ಮ ದೇಶದಲ್ಲಿ ಈಗ ಸರ್ವಸಾಮಾನ್ಯವಾಗಿ ಅಂಗೀಕೃತವಾಗಿವೆ. ಅವು ಈಗ ಹಾಗಾಗಿರುವುದಕ್ಕೆ ಗೋಖಲೆಯವರು ಅವುಗಳನ್ನು ಪ್ರತಿಪಾದಿಸುವುದರಲ್ಲಿ

ತೋರಿದ್ದ ಯುಕ್ತಿ ಸಾಮರ್ಥ್ಯಗಳೇ ಬಹುಮಟ್ಟಿಗೆ ಕಾರಣವೆಂದು ಹೇಳಬಹುದು.

ಗೋಖಲೆಯವರ ಉಪನ್ಯಾಸ ರೀತಿಯನ್ನು ಕುರಿತು ಇಲ್ಲಿ ಒಂದು ಮಾತು ಹೇಳಬಹುದು. ಅವರು ಮೊದಲೇ ಬರೆದಿಟ್ಟುಕೊಂಡಿದ್ದುದನ್ನು ತಂದು ಸಭೆಯಲ್ಲಿ ತೆಗೆದು ಓದುತ್ತಿದ್ದವರಲ್ಲ; ಅಥವಾ ಅದನ್ನು ಮನೆಯಲ್ಲಿ ಕಂಠಪಾಠ ಮಾಡಿಕೊಂಡು ಸಭೆಗೆ ಬಂದು ಅಲ್ಲಿ ಶ್ಲೋಕ ಹೇಳುವಂತೆ ಅದನ್ನು ನೆನಪಿನಿಂದ ಹೇಳಿ ಒಪ್ಪಿಸುತ್ತಿದ್ದವರಲ್ಲ; ಅಥವಾ ಸಭೆಯಲ್ಲಿ ಏನು ಹೇಳಬೇಕೆಂಬುದನ್ನು ಮೊದಲೇ ಆಲೋಚಿಸಿಟ್ಟುಕೊಳ್ಳದೆ, ಅಲ್ಲಿ ಬಂದು ನಿಂತ ಬಳಿಕ ವಿಷಯಗಳನ್ನೂ ಮಾತುಗಳನ್ನೂ ಹುಡುಕಾಡುತ್ತಾ ಸಭಿಕರ ಕಾಲವನ್ನು ಕಳೆದು ಬೇಸರವನ್ನುಂಟುಮಾಡುತ್ತಿದ್ದವರೂ ಅಲ್ಲ. ತಾವು ಹೇಳಬೇಕಾದುದನ್ನೆಲ್ಲಾ ಮೊದಲೇ ಚೆನ್ನಾಗಿ ಚಿಂತನೆ ಮಾಡಿ, ತಕ್ಕ ಪದಗಳನ್ನು ಮನಸ್ಸಿನಲ್ಲಿಯೇ ಸಿದ್ಧಪಡಿಸಿಕೊಂಡು, ವಿಷಯದ ಪೂರ್ವಾಪರ ಸಂಯೋಜನೆಯನ್ನು ಪೂರ್ತಿಯಾಗಿ ಗೊತ್ತುಮಾಡಿಕೊಂಡೇ ಅವರು ಸಭೆಗೆ ಬರುತ್ತಿದ್ದರು. ಸ್ವಂತ ಜ್ಞಾಪಕಾರ್ಥವಾಗಿ ವಿಷಯಗಳನ್ನು ಗುರುತು ಹಾಕಿಕೊಂಡಿದ್ದ ಸಣ್ಣ ಕಾಗದದ ಚೂರೊಂದನ್ನು ಮಾತ್ರ ಕೈಯಲ್ಲಿ ಹಿಡಿದು ನಿಂತು, ಒಂದು ಘಂಟೆ ಎರಡು ಘಂಟೆ ಮೂರು ಘಂಟೆಗಳ ಕಾಲವಾದರೂ ತಡವರಿಸದೆ, ನಿಲುಕಡೆಯಿಲ್ಲದೆ, ಗಂಭೀರವಾಗಿ ಅವರು ಮಾತನಾಡುತ್ತಿದ್ದರು. ಅವರ ಭಾಷಣವು ಸುಶಬ್ದಗಳಿಂದಲೂ ಭಾವಗರ್ಭಿತವಾದ ಪದವಿನ್ಯಾಸದಿಂದಲೂ ಕೂಡಿ, ಶ್ರಾವ್ಯವಾಗಿಯೂ ಪರಿಣಾಮಕಾರಿಯಾಗಿಯೂ ಇರುತ್ತಿತ್ತು. ಅದು ಬರಿಯ ಉದ್ಗಾರವಲ್ಲ. ಅದರಲ್ಲಿ ವಾಗಾಡಂಬರವಾಗಲಿ ಅಲಂಕಾರ ಚಿತ್ರಗಳಾಗಲಿ ಇರದೆ, ಮಿತವೂ ಸರಳತೆಯೂ ಕಾಣಬರುತ್ತಿದ್ದುವು. ಅವರ ಮುಖವು ವರ್ಚಸ್ಸುಳ್ಳುದಾಗಿಯೂ ಅವರ ಕಂಠಧ್ವನಿಯು ಇಂಪಾದುದಾಗಿಯೂ ಇದ್ದ ಕಾರಣ, ಅವರ ಬಾಯಿಂದ ಹೊರಟ ಸಾಮಾನ್ಯ ಮಾತಿಗೇ ಒಂದು ತೆರದ ಜೀವಕಳೆಯುಂಟಾಗುತ್ತಿತ್ತು. ಉಪನ್ಯಾಸಕಾಲದಲ್ಲಿ ಅವರು ಕೈಕಾಲುಗಳನ್ನು ಬೀಸುವುದು, ಕುಣಿವವರಂತೆ ಮೈ ಸೊಟ್ಟು ಮಾಡುವುದು ಮೊದಲಾದ ಅಂಗ ವಿಕಾರಗಳನ್ನು

ತೋರುತ್ತಿದ್ದವರಲ್ಲ; ದೊಡ್ಡ ಗಂಟಲಿನಿಂದ ಕೂಗುತ್ತಿದ್ದವರಲ್ಲ. ಅವರ ಕಣ್ಣಿ ಹೊಳಪು, ಅವರ ಮುಖದ ತೇಜಸ್ಸು—ಇವುಗಳೇ ಅವರ ಮನೋಭಾವವನ್ನು ತೋರಿಸಿ, ಅವರ ಮಾತುಗಳಿಗೆ ಆಯುಧಕ್ಕಿರಬೇಕಾದ ಹರಿತವನ್ನುಂಟುಮಾಡುತ್ತಿದ್ದುವು. ವೈಸ್‌ರಾಯರವರ ಸಭೆಯಲ್ಲಿ ಅವರು ಮಾತನಾಡುವ ಸಮಯವನ್ನು ತಿಳಿದು, ಆ ವಾಕ್ಪ್ರವಾಹದ ಸೊಬಗನ್ನು ನೋಡಬೇಕೆಂಬ ಕುತೂಹಲದಿಂದ ಅನೇಕ ಮಂದಿ ಆಂಗ್ಲೇಯ ದೊಡ್ಡಮನುಷ್ಯರೂ ಮಹಿಳೆಯರೂ ಸಹ ಅಲ್ಲಿ ನೆರೆದು ಕಾದಿರುತ್ತಿದ್ದರು.

ಗೋಖಲೆಯವರ ಭಾಷಣಗಳಲ್ಲಿ ಒಂದು ವಿಶೇಷ ಗುಣವುಂಟು. ಸಾಮಾನ್ಯವಾಗಿ ರಾಜ್ಯವಿಚಾರಕರ್ತನ ಭಾಷಣದ ಸ್ವಾರಸ್ಯವೇನಿದ್ದರೂ ತಾತ್ಕಾಲಿಕ ಮಾತ್ರವಾಗಿರುವುದು. ಅದರ ವೇಗವು ಅದನ್ನು ಕಿವಿಯಿಂದ ಕೇಳಿದವರಿಗೆ ಹೆಚ್ಚಾಗಿರುವುದು; ವರ್ತಮಾನ ಪತ್ರಗಳಲ್ಲಿ ಓದುವವರಿಗೆ ಅದು ಸುಮಾರಾಗಿರುವುದು; ಒಂದೆರಡು ವಾರಗಳ ತರುವಾಯ ಅದು ಸಾಧಾರಣ ಜನರಿಗೆ ರುಚಿಸದು. ಅದರ ವಿಷಯಗಳು ಹಳೆಯವಾಗುವುವು; ಅದರ ಖಾರವು ಹಾರಿಹೋಗುವುದು. ಗೋಖಲೆಯವರ ಭಾಷಣಗಳಾದರೋ ಪುಸ್ತಕ ರೂಪವನ್ನು ತಾಳಿ ನಿಲ್ಲಲರ್ಹವಾದುವು. ಈಗ ಓದುವವರಿಗೆ ಅವುಗಳ ಗುಣವು ಕಡಿಮೆ ತೋರುವುದಕ್ಕೆ ಪ್ರತಿಯಾಗಿ, ಓದಿದಷ್ಟೂ ಅವುಗಳಲ್ಲಿ ಅಭಿರುಚಿ ಹೆಚ್ಚುವುದು. ಅವುಗಳ ವಿಷಯ ಮಹತ್ತ್ವವಂತಹುದು; ಅವುಗಳ ಶೈಲಿಯ ಸೊಗಸೂ ಅಂತಹುದು. ಅವರಿಗಿಂತ ಹೆಚ್ಚಾಗಿ ವೀರಾವೇಶಪಡೆದು ಮಾತನಾಡಿದವರ ಉಪನ್ಯಾಸಗಳು ಜನರಿಗೆ ನೀರಸವಾಗಿ ತೋರಿ ಮರೆತುಹೋಗಿರುವಾಗ, ಗೋಖಲೆಯವರ ಉಪನ್ಯಾಸಗಳು ದೇಶಾಭಿಮಾನಿಗಳಿಗೆ ಪಾಠ ಗ್ರಂಥದಂತೆ ಬೇಕಾದುವಾಗಿರುವುವು. ಇಂಡಿಯಾ ದೇಶದ ರಾಜ್ಯತಂತ್ರದ ಮರ್ಮಗಳನ್ನರಿತು ದೇಶಾಭ್ಯುದಯ ಸಾಧನೆಯ ಮಾರ್ಗದಲ್ಲಿ ನಡೆಯಬೇಕೆನ್ನುವವರಿಗೆ ಗೋಖಲೆಯವರ ಭಾಷಣಗಳುಳ್ಳ ೧,೨೫೦ ಪುಟಗಳ ಪುಸ್ತಕಕ್ಕಿಂತ ಉತ್ತಮವಾದ ಪಾರಾಯಣ ಗ್ರಂಥವಾವುದೂ ಇರದು. ಅದು ಇಂದಿಗೂ ನಾಳೆಗೂ ಸಹ ಅಮೌಲ್ಯವಾದುದು.

ಬ್ರಿಟಿಷ್ ಇಂಡಿಯಾ ಸರಕಾರದ ಆದಾಯ ವ್ಯಯ ವಿಮರ್ಶೆಯಲ್ಲಿ ಗೋಖಲೆಯವರು ತೋರಿಸಿದ ಕೌಶಲವು ಅದ್ವಿತೀಯವೆನಿಸಿದೆ. ತಾವು ಉಪಯೋಗಿಸಬೇಕಾದ ಪ್ರತಿಯೊಂದು ಮಾತನ್ನೂ ತೂಕಮಾಡಿ, ಪ್ರತಿಯೊಂದು ಅಂಕಿಯನ್ನೂ ಗುಣಿಸಿ, ಪ್ರತಿಯೊಂದು ಅಭಿಪ್ರಾಯವನ್ನೂ ಪರೀಕ್ಷಿಸಿ, ಆಮೇಲೆ ಉಪನ್ಯಾಸ ಕೊಡುವುದು ಅವರ ಪದ್ಧತಿ. ಅವರ ಭಾಷಣಗಳಲ್ಲಿ ಒಂದು ಅತ್ಯುಕ್ತಿಯಾಗಲಿ, ಒಂದು ವ್ಯರ್ಥ ವಚನವಾಗಲಿ, ಒಂದು ನಿರಾಧಾರವಾದ ಅಂಶವಾಗಲಿ ಕಂಡುಬರುತ್ತಿರಲಿಲ್ಲ. ಇಷ್ಟೊಂದು ಜಾಗರೂಕತೆಯಿಂದಿರುವವರು ವಿಷಯ ಸಂಗ್ರಹಕ್ಕೂ, ವಿಮರ್ಶೆಗೂ, ಆಲೋಚನೆಗೂ ಹೆಚ್ಚು ಕಾಲವನ್ನು ವಿನಿಯೋಗಿಸಬೇಕಲ್ಲವೆ? ಆ ರೀತಿ ಕಾಲವನ್ನು ವಿನಿಯೋಗಿಸಿ ಪ್ರಯಾಸಪಡಲಾರದವರು ಸಾರ್ವಜನಿಕ ವ್ಯವಹಾರಗಳಿಗೆ ಅನುಪಯೋಗವೆಂದು ಗೋಖಲೆಯವರು ತಿಳಿದು, ಅದನ್ನು ತಮ್ಮ ನಡತೆಯಲ್ಲಿಯೇ ತೋರಿಸಿರುವರು.

ಚರ್ಚೆಯಲ್ಲಿ ಗೋಖಲೆಯವರು ಅತಿ ಚತುರರು; ಪ್ರತಿವಾದಿಗಳು ಮಾಡಿದ ತಪ್ಪುಗಳನ್ನು ತತ್‌ಕ್ಷಣವೇ ತೋರಿಸಿಕೊಡುವುದಕ್ಕೂ ಅವರ ಆಕ್ಷೇಪಣೆಗಳಿಗೆ ತತ್‌ಕ್ಷಣವೇ ಸಮಾಧಾನ ಹೇಳುವುದಕ್ಕೂ ಸಿದ್ಧರಾಗಿರುತ್ತಿದ್ದರು. ಒಂದು ಸಲ ವೈಸ್‌ರಾಯರ ಸಭೆಯಲ್ಲಿ ಆದಾಯ ವ್ಯಯದ ಚರ್ಚೆಯು ನಡೆಯಬೇಕಾಗಿರುವಲ್ಲಿ, ಈ ದೇಶದ ಸೈನ್ಯಾಧಿಪತಿಯಾಗಿದ್ದ ಲಾರ್ಡ್ ಕಿಚನರ್ ಮಹಾಶಯರು—ತಮ್ಮ ಇಲಾಖೆಯ ಆಡಳಿತದ ವಿಷಯವಾಗಿ ಗೋಖಲೆಯವರು ಯಾವ ಆಕ್ಷೇಪಣೆಗಳನ್ನು ಮಾಡಿಯಾರೋ, ಅದಕ್ಕೆ ತಾವು ಯಾವ ಪ್ರತ್ಯುತ್ತರಗಳನ್ನು ಹೇಳಬೇಕಾದೀತೋ—ಎಂಬುದನ್ನು ಪೂರ್ವಭಾವಿಯಾಗಿಯೇ ತಿಳಿದುಕೊಳ್ಳಬೇಕೆಂದಿಚ್ಛಿಸಿ, ಗೋಖಲೆಯವರನ್ನು ರಹಸ್ಯವಾಗಿ ಕಂಡು ತಮ್ಮ ಶಂಕೆಯನ್ನು ಸೂಚಿಸಿದರಂತೆ. ಅದರ ಮೇಲೆ ಕಿಚನರವರು ರಣಪಂಡಿತರೇ ಹೊರತು ವಾದಪಂಡಿತರಲ್ಲವೆಂಬುದನ್ನು ಗೋಖಲೆಯವರು ಗಮನಕ್ಕೆ ತಂದುಕೊಂಡು, ಚರ್ಚಾಕಾಲದಲ್ಲಿ ಅವರಿಗೆ ಮುಖಭಂಗಮಾಡುವುದು ಸರಿಯಲ್ಲವೆಂದು ತೀರ್ಮಾನಿಸಿ, ಸೈನ್ಯದ ವೆಚ್ಚವನ್ನು ಕುರಿತು ಮಾತನಾಡುವಾಗ ಕಾಠಿಣ್ಯವನ್ನು ತೋರದೆ ಸೌಮ್ಯದಿಂದ ವಿಮರ್ಶೆ ನಡಿಸಿದರಂತೆ.

ಗೋಖಲೆಯವರು ಮಾಡಿದ ರಾಜ್ಯಕೋಶ ವಿಷಯಕವಾದ ೧೪-೧೫ ಉಪನ್ಯಾಸಗಳನ್ನು ಪರಿಶೀಲಿಸಿದರೆ ಮುಖ್ಯವಾಗಿ ಕಂಡುಬರುವ ಅಂಶಗಳಾವುವೆಂದರೆ :—

(೧) ರಾಜ್ಯಯಂತ್ರದ, ಎಂದರೆ ಸರಕಾರೀ ಸಿಬ್ಬಂದಿಯ, ಮೇಲಂತಸ್ತಿನ ವೆಚ್ಚವು ಅತಿಯಾಗಿ ಮಿತಿಮೀರಿದೆ. ಭಾರೀ ಅಧಿಕಾರಿಗಳ ಸಂಖ್ಯೆಯು ಹೆಚ್ಚು ; ಅವರಿಗೆ ಸಲ್ಲುತ್ತಿರುವ ವೇತನಗಳ ದರವೂ ಹೆಚ್ಚು. ಈ ವೆಚ್ಚವನ್ನು ಕಡಿಮೆಮಾಡಿ, ಉಳಿಸಿದ ಹಣವನ್ನು ಪ್ರಜಾ ಸೌಕರ್ಯಗಳಿಗಾಗಿ ಉಪಯೋಗಿಸಬೇಕು.

(೨) ಸೈನ್ಯಕ್ಕಾಗಿ ಆಗುತ್ತಿರುವ ವ್ಯಯವೂ ವಿಪರೀತ. ಸೈನ್ಯದ ಖರ್ಚನ್ನು ಕಡಮೆಮಾಡಿದರೆ ತೆರಿಗೆಯ ಭಾರವನ್ನು ಕಡಮೆಮಾಡಲು ಆಗುವುದು ; ಅಥವಾ ಇತರ ಪ್ರಜೋಪಯುಕ್ತ ಕಾರ್ಯಗಳಿಗೋಸ್ಕರ ಹಣವನ್ನು ಮಿಗಿಸಲು ಆಗುವುದು.

(೩) ಪ್ರಜೆಗಳಲ್ಲಿ ಕೀಳು ದರ್ಜೆಯವರಿಂದ—ಎಂದರೆ ತುಂಬಾ ಬಡವರಾದವರಿಂದ—ಅವರ ಯೋಗ್ಯತೆಯನ್ನು ಮೀರಿದಷ್ಟು ತೆರಿಗೆ ಕಂದಾಯಗಳು ವಸೂಲಾಗುತ್ತಿವೆ. ಈ ತೆರಿಗೆಯ ಭಾರವನ್ನು ಕಡಿಮೆಮಾಡಬೇಕು.

(೪) ಸ್ವದೇಶದ ಯಂತ್ರಕರ್ಮ ಕೈಗಾರಿಕೆಗಳಿಗೆ ಪರದೇಶದ ಪದಾರ್ಥಗಳಿಂದುಂಟಾಗಿರುವ ಪೋಟಾಪೋಟಿಯನ್ನು ತಪ್ಪಿಸುವುದಕ್ಕೋಸ್ಕರ ಪರದೇಶಗಳಿಂದ ಆಮದಾಗಿ ಬರುವ ಪದಾರ್ಥಗಳ ಮೇಲೆ ಸುಂಕವನ್ನು ಹೆಚ್ಚಿಸಿ, ಸ್ವದೇಶದ ಸಂಪದಭಿವೃದ್ಧಿಗೆ ಸಹಾಯ ಕೊಡುವುದರಿಂದ, ಪ್ರಜೆಗಳ ಆದಾಯವನ್ನೂ ರಾಜ್ಯಾದಾಯವನ್ನೂ ಸಹ ಹೆಚ್ಚಿಸಬಹುದು.

(೫) ಸರಕಾರವು ಪ್ರಜೆಗಳಿಂದ ಅವರ ಯೋಗ್ಯತೆಗೆ ಮೀರಿದ ಕಂದಾಯ ಕವಳಿಗೆಗಳನ್ನು ವಸೂಲುಮಾಡಿಟ್ಟುಕೊಂಡು, ರಾಜ್ಯದ ಭಂಡಾರದಲ್ಲಿ ಹಣ ಶಿಲ್ಕು ನಿಂತಿದೆಯೆಂದು ಹಿಗ್ಗುವುದು ನ್ಯಾಯವಲ್ಲ. ಪ್ರಜೆಗಳ ಹಣವು ಅವರಲ್ಲಿಯೇ ಇರಬೇಕು, ಅಥವಾ ಅವರ ಸೌಕರ್ಯಕ್ಕಾಗಿ ವಿನಿಯೋಗವಾಗುತ್ತಿರಬೇಕು. ಈ ಎರಡನ್ನೂ ತಪ್ಪಿಸಿ ಅದನ್ನು ಖಜಾನೆಯಲ್ಲಿ ಮೂಟೆ ಕಟ್ಟಿರಿಸಿಕೊಳ್ಳಲು ಸರಕಾರಕ್ಕೆ ಅಧಿಕಾರವಿಲ್ಲ.

(೬) ಸರಕಾರೀ ಕೆಲಸಗಳಿಗೆ ಸ್ವದೇಶೀಯರನ್ನೇ ಸಾಧ್ಯವಾದ ಮಟ್ಟಿಗೂ ಆರಿಸಿ ನಿಯಮಿಸಬೇಕು. ಪರದೇಶೀಯರಿಗೆ ಕೊಡುವಷ್ಟು ಭಾರೀ ವೇತನವನ್ನು ಸ್ವದೇಶೀಯರಿಗೆ ಕೊಡಬೇಕಾದುದಿಲ್ಲ. ಆದಕಾರಣ ಸ್ವದೇಶೀಯರನ್ನು ದೊಡ್ಡ ಹುದ್ದೆಗಳಿಗೆ ನಿಯಮಿಸಿದರೆ ರಾಜ್ಯವ್ಯಯವು ಮಿತವಾಗುವುದು. ಅದಲ್ಲದೆ, ಸ್ವದೇಶೀಯರಿಗೆ ದೇಶವಾತ್ಸಲ್ಯವೂ ದೇಶ ವಿಷಯಕ ಜ್ಞಾನವೂ ಹೆಚ್ಚಾಗಿರುವ ಕಾರಣ, ಅವರಿಂದ ರಾಜ್ಯಕಾರ್ಯಗಳು ನಡೆಯುವಷ್ಟು ಸಮರ್ಪಕವಾಗಿ ಅನ್ಯರಿಂದ ನಡೆಯಲಾರವು.

(೭) ಮಿತವ್ಯಯಮಾಡಿ, ಉಳಿದ ರಾಜ್ಯಾದಾಯವನ್ನು ಮ್ಯುನಿಸಿಪಾಲಿಟಿಗಳಿಗೂ ಲೋಕಲ್ ಬೋರ್ಡುಗಳಿಗೂ ಹಂಚಬೇಕು. ಈಗ ನಮ್ಮ ದೇಶದಲ್ಲಿ ವಿದ್ಯಾಪ್ರಚಾರ, ಗ್ರಾಮಪಾರಿಶುದ್ಧ್ಯ (ಅಥವಾ ಆರೋಗ್ಯಾಭಿವೃದ್ಧಿ)—ಇವೆರಡೂ ಅತ್ಯಂತಾವಶ್ಯಕವಾದ ಪ್ರಜಾ ಕಾರ್ಯಗಳು. ಈ ಎರಡು ಬಾಬುಗಳಿಗಾಗಿ ಸರಕಾರವು ತನ್ನ ಆದಾಯದಲ್ಲಿ ಎಷ್ಟು ಸಾಧ್ಯವಾದರೆ ಅಷ್ಟು ಭಾಗವನ್ನು ಮ್ಯುನಿಸಿಪಾಲಿಟಿ ಲೋಕಲ್ ಬೋರ್ಡುಗಳ ದ್ವಾರಾ ಪ್ರಜೆಗಳ ಪ್ರಯೋಜನಕ್ಕಾಗಿಯೇ ಹಿಂದಿರುಗಿಸಬೇಕು.

(೮) ಹೊಸದಾಗಿ ಸುಂಕ ತೆರಿಗೆಗಳನ್ನು ವಿಧಿಸಬೇಕಾಗಿ ಬಂದರೆ, ಅವು ಬಡವರಿಗೆ ಯಾವ ರೀತಿಯಲ್ಲಿಯೂ ಅನನುಕೂಲವನ್ನುಂಟುಮಾಡದಂತೆ ನೋಡಿಕೊಳ್ಳಬೇಕು. ಉಪ್ಪು ಮೊದಲಾದ ಸಾಮಾನ್ಯ ಜನರ ಆಹಾರ ಪದಾರ್ಥಗಳಮೇಲೆ ಯಾವ ಸಂದರ್ಭದಲ್ಲಿಯೂ ತೆರಿಗೆ ಹಾಕಕೂಡದು. ಹೆಂಡದ ವ್ಯಾಪಾರದ ಸಂಬಂಧವನ್ನಂತೂ ಸರಕಾರವು ಸಂಪೂರ್ಣವಾಗಿ ತ್ಯಜಿಸಬೇಕು ; ಏಕೆಂದರೆ ಉಪ್ಪಿನ ಸುಂಕವು ಬಡವರ ಹಣವನ್ನು ಮಾತ್ರ ಸೆಳೆದುಕೊಳ್ಳುವುದು ; ಹೆಂಡದ ವ್ಯಾಪಾರವಾದರೋ ಅವರ ಹಣ, ನೀತಿ, ಮಾನ, ಬಲ— ಇವುಗಳನ್ನೆಲ್ಲ ಅಪಹರಿಸುವುದು.

ಇವು ಸ್ಥೂಲಾಂಶಗಳು. ಸೂಕ್ಷ್ಮವಾದ ಅಂಶಗಳು ಗೋಖಲೆಯವರ ಉಪನ್ಯಾಸಗಳಲ್ಲೆಷ್ಟೋ ಇವೆ. ಅವುಗಳನ್ನು ನಮ್ಮ ನ್ಯಾಯ ವಿಧಾಯಕ ಸಭಾಸದರುಗಳೂ, ಪ್ರಜಾಪ್ರತಿನಿಧಿಗಳೂ, ಇತರ ಸಾರ್ವಜನಿಕ ಕಾರ್ಯಕರ್ತರುಗಳೂ ತಿಳಿದುಕೊಳ್ಳುವುದು ಆವಶ್ಯಕ.

ಗೋಖಲೆಯವರು ಮಾಡಿದ ಪ್ರಜಾಹಿತವಾದವು ಲಾರ್ಡ್ ಮಿಂಟೋ ಮತ್ತು ಲಾರ್ಡ್ ಹಾರ್ಡಿಂಜ್ ವೈಸ್‌ರಾಯರುಗಳ ಕಾಲದಲ್ಲಿ ಬಹುಮಟ್ಟಿಗೆ ಫಲಕ್ಕೆ ಬಂದಿತು. ರಾಜ್ಯದ ಆದಾಯವ್ಯಯಗಳ ಲೆಕ್ಕಪತ್ರಗಳನ್ನು ಬರೆದಿರಿಸುವ ಕ್ರಮದ ವಿಷಯದಲ್ಲಿಯೂ, ಆಯವ್ಯಯಗಳ ಅಂದಾಜುಪಟ್ಟಿಯನ್ನು ತಯಾರಿಸಿ ಶಾಸನಸಭೆಗೆ ವಿವರಿಸುವ ಕ್ರಮದ ವಿಷಯದಲ್ಲಿಯೂ ಗೋಖಲೆಯವರು ಕೊಟ್ಟ ಸಲಹೆಗಳನ್ನು ಇಂಡಿಯಾ ಸರಕಾರದ ಕೋಶಾಧಿಕಾರಿಗಳೂ ಗಣಕಾಧಿಕಾರಿಗಳೂ ಬಹುಮಟ್ಟಿಗೆ ಅಂಗೀಕರಿಸಿರುವರು. ಸರಕಾರದ ಜಮಾ ಖರ್ಚುಗಳ ಲೆಕ್ಕಗಳಲ್ಲಿ ಈಗ ಕಾಣಬರುವ ನಿಷ್ಕರ್ಷೆಯೂ ಸ್ಫುಟತೆಯೂ ಬಹುಮಟ್ಟಿಗೆ ಗೋಖಲೆಯವರ ಆಕ್ಷೇಪಣೆ ಸೂಚನೆಗಳಿಂದ ಉಂಟಾದುವೆಂದು ತಿಳಿದವರು ಹೇಳುತ್ತಾರೆ. ಅವರ ಕೆಲಸಕ್ಕೆ ಇಷ್ಟು

ಒಳ್ಳೆಯ ಪರಿಣಾಮವುಂಟಾಗಲು ಅವರ ವಿಷಯದಲ್ಲಿ ಸರ್ ಗಯ್ ಫ್ಲೀಟ್ ವುಡ್ ವಿಲ್ಸನ್ ಎಂಬ ಇಂಡಿಯಾ ಸರಕಾರದ ಕೋಶಾಧ್ಯಕ್ಷರಿಗೆ ಇದ್ದ ಗೌರವ ಸಹಾನುಭೂತಿಗಳೇ ಕಾರಣ. ಫ್ಲೀಟ್‌ವುಡ್ ವಿಲ್ಸನ್‌ರವರು ಗೋಖಲೆಯವರನ್ನು "ಇಂಡಿಯದ ಗ್ಲಾಡ್‌ಸ್ಟನ್" ಎಂದು ಕರೆದು, ಇಂಗ್ಲೆಂಡಿನ ಆ ಪ್ರಸಿದ್ಧ ಮಹಾಮಂತ್ರಿಗಿದ್ದ ರಾಜ್ಯಕೋಶ ವಿಚಕ್ಷಣೆಯು ಗೋಖಲೆಯವರಲ್ಲಿದ್ದಿತೆಂದು ಸೂಚಿಸಿರುವರು. ಗೋಖಲೆಯವರಿಲ್ಲದ ಸಭೆಯಲ್ಲಿ ರಾಜ್ಯಕೋಶ ವಿಚಾರವನ್ನು ಚರ್ಚಿಸುವುದು ಕಥಾನಾಯಕ ಪಾತ್ರವನ್ನೇ ಬಿಟ್ಟು ನಾಟಕವಾಡಲು ಹೊರಟಂತೆ—ಎಂದು ಅವರು ಹೇಳುತ್ತಿದ್ದರು. ಗೋಖಲೆಯವರು ಯಾವ ಆಕ್ಷೇಪಣೆ ತಂದಾರೋ ಎಂಬ ಕಳವಳವೂ, ಅವರ ಪ್ರಶ್ನೆಗೆ ಉತ್ತರ ಹೇಳುವುದು ಸುಲಭವಲ್ಲವೆಂಬ ಹೆದರಿಕೆಯೂ, ಅವರು ನಯದಲ್ಲಿಯೂ ಮರ್ಯಾದೆಯಲ್ಲಿಯೂ ತಪ್ಪುವವರಲ್ಲವಾದ ಕಾರಣ ಅವರಲ್ಲಿ ವಿಹಿತ ರೀತಿಯಿಂದ ನಡೆದುಕೊಳ್ಳಬೇಕೆಂಬ ಜಾಗರೂಕತೆಯೂ ಫ್ಲೀಟ್‌ವುಡ್ ವಿಲ್ಸನ್‌ರವರಲ್ಲಿ ತುಂಬಿದ್ದುವು. ತಾವು ಗೋಖಲೆಯವರಿಗೆ ಭಯಪಟ್ಟಂತೆ ಮತ್ತಾರಿಗೂ ಭಯಪಟ್ಟವರಲ್ಲವೆಂದು ಆ ಪ್ರಸಿದ್ಧ ಕೋಶವ್ಯಾಪಾರ ನಿಪುಣರು ಕಂಠೋಕ್ತವಾಗಿ ಹೇಳಿದ್ದಾರೆ. ಗೋಖಲೆಯವರ ವಾದಮಹಿಮೆಯ ಮೂಲಕ ಇಂಡಿಯಾ ಸರಕಾರದ ಆಯವ್ಯಯ ನಿರ್ಣಯ ಕ್ರಮದಲ್ಲಿ ನಡೆದಿರುವ ಮಾರ್ಪಾಟುಗಳು ಅಲ್ಲಿಂದ ಮೈಸೂರಿಗೂ ಸ್ವಲ್ಪಮಾತ್ರವಾದರೂ ವ್ಯಾಪಿಸಿರುವುವೆಂದು ಹೇಳಲು ಯಾವ ಅಡ್ಡಿಯೂ ಇರದು.

ಈ ಪ್ರಕರಣವನ್ನು ಮುಗಿಸುವುದಕ್ಕೆ ಮುಂಚೆ ಮತ್ತೊಂದು ಮಾತನ್ನು ಹೇಳಬೇಕಾಗಿದೆ. ಅದು ಗೋಖಲೆಯವರ ವಿದೇಶ ಪ್ರಯಾಣಗಳನ್ನು ಕುರಿತುದು. ಇಂಡಿಯಾ ಸರಕಾರದ ಮುಖ್ಯ ಅಧಿಕಾರ ಸೂತ್ರಗಳಿರುವುದು ಲಂಡನ್ ಪಟ್ಟಣದಲ್ಲಿರುವ (ಸೆಕ್ರೆಟರಿ) ಮಂತ್ರಿಯ ಕೈಯಲ್ಲಷ್ಟೆ? ಇಂಡಿಯಾ ದೇಶದ ಪ್ರಜೆಗಳ ಕಷ್ಟ ನಿಷ್ಠುರಗಳನ್ನು ಇಂಡಿಯಾ ಸರಕಾರದ ಮಾತೃಸ್ಥಾನವಾದ ಇಂಗ್ಲೆಂಡಿನಲ್ಲಿಯ ಸಾರ್ವಭೌಮ ಸರಕಾರಕ್ಕೂ ಅಲ್ಲಿಯ ಪ್ರಜಾಮಂಡಲಿಗೂ ತಿಳಿಯಪಡಿಸಿ, ಇಲ್ಲಿಯ ಸರಕಾರಕ್ಕೆ ಆಗಬೇ

ಕಾಗಿಗ್ದ ಸಂಸ್ಕಾರಗಳನ್ನು ಅಲ್ಲಿಂದ ಆಗಮಾಡಿಸಬೇಕೆಂಬ ಉದ್ದೇಶವನ್ನಿಟ್ಟುಕೊಂಡು, ಗೋಖಲೆಯವರು ಶಾಸನ ಸಭೆಯಿಂದ ವಿರಾಮ ದೊರೆತಾಗ ಅನೇಕಾವೃತ್ತಿ ಆ ದೇಶಕ್ಕೆ ಹೋಗಿ ಬಂದರು.

---

## ಪ್ರಕರಣ ೫—ದೇಶನಾಯಕತ್ವ

ಜನಪದ ಸಭೆಯ ಅಧ್ಯಕ್ಷತೆ—ಪೌರ ಸಭಾಧ್ಯಕ್ಷತೆ—ಇಂಗ್ಲೆಂಡಿನಲ್ಲಿ ಪ್ರವಾಸ—ಮಾರ್ಲೆ ಮುಂತಾದವರೊಡನೆ ಭಾಷಣ—ಪ್ರತಿವಾದಿಗಳನ್ನು ಸಮಾಧಾನಗೊಳಿಸುವಿಕೆ—ರಾಜ್ಯಾಂಗ ಪರಿಷ್ಕಾರ ವಿಚಾರ—ಮಾರ್ಲೆಯವರ ಮಾರ್ಪಾಟುಗಳು

ಗೋಖಲೆಯವರ ವಿಚಾರಪಟುತೆಯೂ, ನೀತಿ ಸೂಕ್ಷ್ಮಜ್ಞತೆಯೂ, ವಾದ ಕೌಶಲವೂ, ಉಪಾಯಶಕ್ತಿಯೂ, ನಯವಿನಯಗಳೂ ಆ ಕಾಲದ ಪ್ರಜಾಪ್ರಮುಖರೆಲ್ಲರನ್ನೂ ಮೆಚ್ಚಿಸಿ ತಲೆದೂಗಿಸಿದುವು. ಅವರಿಗಿಂತ ಹಿರಿಯರಾಗಿದ್ದವರು ಕೂಡ ಅವರ ಜಾಣ್ಮೆಯನ್ನೂ ದೂರದರ್ಶಿತೆಯನ್ನೂ ಕೊಂಡಾಡುತ್ತಿದ್ದರು. ಅವರೆಲ್ಲರೂ ಏಕವಾಕ್ಯದಿಂದ ಅವರನ್ನು ೧೯೦೫ನೆಯ ಇಸವಿಯ ಡಿಸೆಂಬರಿನಲ್ಲಿ ಕಾಶೀಪಟ್ಟಣದಲ್ಲಿ ನೆರೆಯಬೇಕಾಗಿದ್ದ (ಕಾಂಗ್ರೆಸ್) ಭಾರತೀಯ ಜನಪದ ಮಹಾಸಭೆಯ ಅಧ್ಯಕ್ಷಪದವಿಗೆ ಪರಮಾದರದಿಂದ ಆರಿಸಿದರು. ಪ್ರಸಿದ್ಧ ವಿದ್ವಾಂಸರೂ, ಗ್ರಂಥಕರ್ತರೂ, ದೇಶಭಕ್ತರೂ, ಹಿಂದೆ ಒಂದುಸಲ ಕಾಂಗ್ರೆಸ್ಸಿನ ಅಧ್ಯಕ್ಷರೂ ಆಗಿದ್ದ ರಮೇಶಚಂದ್ರದತ್ತರವರು ಕಾಶಿಯ ಮಹಾ ಸಭೆಯಲ್ಲಿ ನಿಂತು ಗೋಖಲೆಯವರ ಗುಣಗಳನ್ನು ಪ್ರಶಂಸಿಸಿ, ಅವರು ಮಾಡಿದ್ದ ದೇಶಸೇವೆಯನ್ನು ಶ್ಲಾಘಿಸಿ, ಅವರೇ ಅಗ್ರಾಸನಕ್ಕೆ ಅರ್ಹರೆಂದು ಸೂಚಿಸಿದರು. ಸ್ವದೇಶೀಯರು ಮಾಡಬಹುದಾದ ಸನ್ಮಾನಗಳಲ್ಲೆಲ್ಲ ಅತ್ಯಂತೋನ್ನತವಾಗಿರುವ ಆ ಅಧ್ಯಕ್ಷಪದವಿಯನ್ನು ಗೋಖಲೆಯವರು ಬಹು ಸಂಕೋಚಪಟ್ಟುಕೊಂಡು ಅಂಗೀಕರಿಸಿ, ಬಹು ವಿಷಯಗರ್ಭಿತವಾದ ಮತ್ತು ಗಂಭೀರವಾದ ಉಪನ್ಯಾಸವನ್ನು ಮಾಡಿದರು. ಆ ವೇಳೆಗೆ ಕೆಲವು ವರ್ಷಗಳ ಹಿಂದಿನಿಂದಲೂ ರಾಜಕೀಯ ಅಶಾಂತಿಯು ಪ್ರಬುದ್ಧರಾದ ಭಾರತೀಯರಲ್ಲಿ ಹರಡುತ್ತಿತ್ತೆಂಬು

ದನ್ನು ಹಿಂದೆಯೇ ನೆನೆದಿರುವೆವಷ್ಟೆ? ವಂಗ ವಿಭಜನ ಕಾರಣದಿಂದ ಹುಟ್ಟಿದ್ದ "ಸ್ವದೇಶೀ" ಸಮಾರಂಭವು ಆಗ ಬಲಿತು ಹರಡುತ್ತಿತ್ತು. ದೇಶೀಯ ರಾಜ್ಯವಿಚಾರಕರ್ತರು ರೋಷಾವೇಶವನ್ನು ತಾಳಿದ್ದರು. ಸರಕಾರದವರೂ ತಮ್ಮ ಕತ್ತಿಗಳನ್ನು ಮಸೆಯುತ್ತಿದ್ದರು. ಅಂತಹ ಸಮಯದಲ್ಲಿ ದೇಶೀಯ ಮಹಾಸಭೆಯ ನಾಯಕರಾಗಿ ನಿಂತು ಜನಪದಾಭಿಪ್ರಾಯವನ್ನು ತಕ್ಕ ರೀತಿಯಲ್ಲಿ ವ್ಯಕ್ತಪಡಿಸಬೇಕಾದವರ ಕರ್ತವ್ಯಭಾರವು ಹೇಗೆ ಹಗುರವಾಗಿದ್ದೀತು? ಆ ಕಷ್ಟದ ಜವಾಬ್ದಾರಿಯನ್ನು ಗೋಖಲೆಯವರು ನೆರವೇರಿಸಿದ ರೀತಿಯು ಅವರ ಯಶಸ್ಸನ್ನು ಮತ್ತಷ್ಟು ವಿಸ್ತರಿಸಿತು. ಅವರು ಸರಕಾರದಲ್ಲಿದ್ದ ಲೋಪ ದೋಷಗಳನ್ನೂ, ಪ್ರಜೆಗಳಿಗಿದ್ದ ಅಸಮಾಧಾನ ಅಭಿಲಾಷೆಗಳನ್ನೂ ಧಾರಾಳವಾಗಿಯೂ ಸಕಾರಣವಾಗಿಯೂ ವಿವರಿಸಿ, ಉಭಯ ಪಕ್ಷಗಳವರಿಗೂ ಸಹನೆಯನ್ನೂ ಅನ್ಯೋನ್ಯ ಹಿತಭಾವವನ್ನೂ ನ್ಯಾಯೈಕ ನಿರತತೆಯನ್ನೂ ಬೋಧಿಸಿದರು. ಯಾವ ಲಾರ್ಡ್ ಕರ್ಜನ್‌ರವರು ತಮ್ಮ ಬುದ್ಧಿ ಸಾಮರ್ಥ್ಯಗಳನ್ನು ಹೊಗಳಿ ತಮಗೆ ಪ್ರತಿಷ್ಠೆಯನ್ನುಂಟುಮಾಡಿ ಕೊಟ್ಟಿದ್ದರೋ, ಆ ಪ್ರಖ್ಯಾತ ವೈಸ್‌ರಾಯರ ಆಳಿಕೆಯನ್ನೇ ಗೋಖಲೆಯವರು ಔರಂಗಜೇಬನ ದವಲತ್ತಿಗೆ ಹೋಲಿಸಿ, ಕರ್ಜನ್‌ರವರ ವಂಗ ವಿಭಜನೆಯೇ ಮೊದಲಾದ ಧೃಷ್ಟ ಕೃತ್ಯಗಳ ವಿಷಯದಲ್ಲಿ ಜನರ ತೀಕ್ಷ್ಣವಾದ ಅಸಂತೃಪ್ತಿಯನ್ನು ವ್ಯಕ್ತಪಡಿಸಿ, ಸ್ವದೇಶೀ ಸಮಾರಂಭದ ಆವಶ್ಯಕತೆಯನ್ನೂ ಅದರ ಮಾಹಾತ್ಮ್ಯವನ್ನೂ ವಿವರಿಸಿದರು. ಪ್ರಜಾ ಸಂಕ್ಷೋಭೆಯನ್ನು ನಿವಾರಣೆಮಾಡುವುದು ಬ್ರಿಟಿಷ್ ಸರಕಾರದ ಕ್ಷೇಮಕ್ಕೇ ಅತ್ಯಂತಾವಶ್ಯಕವೆಂಬುದನ್ನೂ, ಪ್ರಜೆಗಳ ಕೃತಜ್ಞತೆಯು ಸರಕಾರಕ್ಕೆ ದೊರೆತು ಸರಕಾರದ ಬುಡವು ಭದ್ರಪಡಬೇಕಾದರೆ ರಾಜ್ಯಾಂಗಗಳಿಗೆ ಯಾವ ಯಾವ ಸಂಸ್ಕಾರಗಳು ಆವಶ್ಯಕವಾಗಿದ್ದುವೆಂಬುದನ್ನೂ ಗೋಖಲೆಯವರು ಉದಾಹರಣಪೂರ್ವಕವಾಗಿ ತೋರಿಸಿ, ಈ ಕೆಳಗಿನ ವಾಕ್ಯಗಳಿಂದ ತಮ್ಮ ಉಪನ್ಯಾಸವನ್ನು ಉಪಸಂಹರಿಸಿದರು :—

ಈಗ ನಾವು ಕೈಕೊಂಡಿರುವಂಥಾ ಹೋರಾಟದ ನೀತಿ ಪ್ರಯುಕ್ತ ಫಲಿತಾಂಶವು ರಾಜ್ಯ ಸಂಸ್ಥೆಗಳ ಪರಿಷ್ಕಾರದಲ್ಲಿ ತೋರುವುದಕ್ಕಿಂತ ಹೆಚ್ಚಾಗಿ, ಆ ಹೋರಾಟದ ಮೂಲಕ

ನಮಗೆ ಉಂಟಾಗುವ ಸಂಸ್ಕಾರದಲ್ಲಿ ತೋರಿಬರುವುದು. ಒಂದು ಜನದ ಜೀವಿತ ಕರ್ಮದ ವ್ಯಾಪನೆಯು ಅವರ ರಾಜಕೀಯ ಸಂಸ್ಥೆಗಳ ಸಂಬಂಧವು ಎಷ್ಟು ದೂರ ಹರಡಿರುವುದೋ ಅದಕ್ಕಿಂತ ವಿಶಾಲವಾಗಿರುವುದು. ಅಂತಹ ಜನಜೀವನವೆಲ್ಲವೂ,—ನಮ್ಮ ಪ್ರಯತ್ನಗಳು ಸರಿಯಾಗಿ ನಡೆದುದೇ ಆದರೆ,—ಅದರಲ್ಲಿ ನಮಗೆ ಬರಬಹುದಾದ ಪರಾಜಯಗಳಿಂದಲೂ ಸಹ ಉತ್ತಮಗೊಳ್ಳುವುದು. ಶ್ರೀಮಾನ್ ರಾನಡೆಯವರು ೯ ವರ್ಷಗಳ ಕೆಳಗೆ ಹೀಗೆ ಅಪ್ಪಣೆ ಕೊಡಿಸಿದರು :—"ನಮ್ಮ ಕೆಲಸದ ನಿಜವಾದ ಉದ್ದೇಶ್ಯವೇನೆಂದರೆ, ನಮ್ಮ ಜನರ ಬುದ್ಧಿಗೆ ಬಿಡುಗಡೆಯನ್ನುಂಟುಮಾಡಿ, ಅವರ ಕರ್ತವ್ಯ ಜ್ಞಾನವನ್ನು ಉನ್ನತಿಗೊಳಿಸಿ, ಅವರ ಶಕ್ತಿಗಳೆಲ್ಲವನ್ನೂ ಅತ್ಯುತ್ತಮದಶೆಗೆ ತಂದು, ಅವರಿಗೆ ಒಂದು ನವ್ಯಭಾವವನ್ನೂ, ಸತ್ತ್ವ ಶುದ್ಧಿಯನ್ನೂ, ಉತ್ಕೃಷ್ಟ ಮಾನವ ಲಕ್ಷಣಗಳ ಸಂಪೂರ್ಣತೆಯನ್ನೂ ಉಂಟು ಮಾಡಿಕೊಡುವುದು. ಹಾಗೆ ನಾವು ಹೊಸಬರೂ, ಪರಿಶುದ್ಧರೂ, ಪೌರುಷ ಪರಿಪೂರ್ಣರೂ ಆಗುವವರೆಗೂ, ನಮ್ಮ ಪೂರ್ವಿಕರು ಒಂದಾನೊಂದು ಕಾಲದಲ್ಲಿ ಎನ್ನಿಸಿಕೊಂಡಿದ್ದಂತೆ ನಾವೂ ಮಹಾ ಸಮಾರಂಭಯೋಗ್ಯರೆಂದೂ ಮಹಾ ಕಾರ್ಯಕರ್ತರೆಂದೂ ಎನ್ನಿಸಿಕೊಳ್ಳಲಾರೆವು. . . . . . . . ನಾವು ಹಾಗೆ ಆಗುವ ಕಾಲಕ್ಕೆ, ದುರ್ಭಿಕ್ಷ ವ್ಯಾಧಿಗಳೂ, ಅನ್ಯಾಯ ದುಃಖಗಳೂ ನಮಗೆ ಕಟ್ಟುಕಥೆಗಳಂತೆ ತೋರುವವುಗಳಾಗಿ, ಈಗ ನಾವು ಯಾವ ಕಾಲವನ್ನು ಪುರಾಣ ಯುಗವೆಂದು ತಿಳಿದಿರುವೆವೋ ಆ ಕಾಲದಲ್ಲಿ ನಡೆದಂತೆ ಪುನಃ ದೇವತೆಗಳು ಭೂಲೋಕಕ್ಕಿಳಿದು ಮನುಷ್ಯರೊಡನೆ ಬೆರೆಯುವರು." ಮಹಾಶಯರೆ, ಈ ದಿವ್ಯ ವಚನದೊಡನೆ ಸ್ಮರಿಸಲರ್ಹವಾದ ಮಾತನ್ನಿನ್ನೊಂದನ್ನು ನಾನು ಹೇಳಲರಿಯೆನು. ಲೋಕಕ್ಕೆ ಉತ್ತಮ ತತ್ತ್ವವನ್ನು ಬೋಧಿಸಿರುವ ಮತ್ತೊಬ್ಬ ಮಹನೀಯನ (ಬ್ರೌನಿಂಗ್ ಕವಿಯ) ವಚನವನ್ನು ಮಾತ್ರ ತಮ್ಮ ಜ್ಞಾಪಕಕ್ಕೆ ತರುವೆನು :—

(ಸಾಂಗತ್ಯ) ಪರಿಪೂರ್ಣ ಸಂಕಲ್ಪವೆನ್ನದು ನೀವದ
ರರೆಯ ಮಾತ್ರವ ಕಾಣ್ಬರೆಂಬಾ |
ಕರುಣಾಳು ದೇವನ ಕರದೊಳಿಮ್ಮಯ ಜೀವ
ಚರಿತೆಯ ಸೂತ್ರಂಗಳಿಹುವು ||
ಪರಿಕಿಸಲಾತನ ಕೃತಿಯನೆಲ್ಲವನಾಗ
ಸರಿತೋರ್ಪುದಿಂದಿನ ದಶೆಯು |
ನಿರುಕಿಸಿ ಲವಮಾತ್ರವನು ಬೆದರುವುದೇಕೆ ?
ಶರಣೆಂದಾತನನೆ ನಂಬಿಹುದು ||

ಮುಂದಿನ ಕಥೆಗೆ ಹೊರಡುವುದಕ್ಕೆ ಮುಂಚೆ ೧೯೦೫ನೆಯ ಇಸವಿಗೆ ಸಂಬಂಧಪಟ್ಟ ಇನ್ನೊಂದು ಸಂಗತಿಯನ್ನು ಇಲ್ಲಿ ಹೇಳಬಹುದು. ಗೋಖಲೆ

ಯವರು ಅನೇಕ ವರ್ಷಗಳ ಕಾಲ ಪೂನಾ ಪಟ್ಟಣದ ಮ್ಯುನಿಸಿಪಾಲಿಟಿಯ ಮೆಂಬರಾಗಿದ್ದರೆಂದು ಹಿಂದೆ ಹೇಳಿರುವೆವು. ೧೯೦೫ರಲ್ಲಿ ಅವರು ಆ ಪೌರಸಭೆಯ ಮಾನ್ಯ (ವೇತನರಹಿತ) ಅಧ್ಯಕ್ಷ ಪದವಿಗೆ ಚುನಾಯಿಸಲ್ಪಟ್ಟರು. ಮ್ಯುನಿಸಿಪಲ್ ಪ್ರೆಸಿಡೆಂಟರಾಗಿ ಅವರು ತೋರಿಸಿದ ಕಾರ್ಯ ವಿಚಕ್ಷಣೆಯನ್ನು ಅವರ ಶಿಷ್ಯರೂ ಸ್ನೇಹಿತರೂ ಆದ ಮ|| ರಾ|| ಆರ್. ಪಿ. ಪರಂಜಪೆಯವರು ಈ ರೀತಿ ಬಣ್ಣಿಸಿರುವರು :—

"ಮನಸ್ವೀ ಹರಟುತ್ತಾ ಅಪ್ರಕೃತ ವಿಷಯ ಚರ್ಚೆಯಲ್ಲಿ ಕಾಲಹರಣ ಮಾಡುತ್ತಿದ್ದ ಮೆಂಬರುಗಳಿಗೆ (ಹೊಸ ಅಧ್ಯಕ್ಷರಿಂದ) ಆಗಾಗ ಮುಖಭಂಗವಾಗುತ್ತಿದ್ದರೂ, ಮ್ಯುನಿಸಿಪಲ್ ಮೀಟಿಂಗುಗಳ ಕೆಲಸವು ಕ್ಷಿಪ್ರವಾಗಿಯೂ ಕ್ರಮತಪ್ಪದೆ ಸಾಂಗವಾಗಿಯೂ ನೆರವೇರುತ್ತಿತ್ತು. ಪುರಪ್ರತಿನಿಧಿಗಳು ಪೌರಕಾರ್ಯಗಳ ವಿಷಯವಾಗಿ ಮ್ಯುನಿಸಿಪಲ್ ಅಧಿಕಾರಿಗಳಿಗೆ ಪ್ರಶ್ನೆ ಹಾಕುವ ಪದ್ಧತಿಯನ್ನೂ, ಮ್ಯುನಿಸಿಪಲ್ ಚರ್ಚೆಗಳ ವರದಿಯನ್ನು ಮುದ್ರಿಸಿ ಪ್ರಕಟಿಸುವ ಪದ್ಧತಿಯನ್ನೂ ಗೋಖಲೆಯವರು ಮೊದಲು ಮಾಡಿದರು. ಇತರ ಕಾರ್ಯಭಾರಗಳು ಹೆಚ್ಚಿದ ಕಾರಣ, ಎರಡು ವರ್ಷಗಳ ಮೇಲೆ ಅವರು ಮ್ಯುನಿಸಿಪಲ್ ಕೆಲಸವನ್ನು ಬಿಡಬೇಕಾಯಿತು. ಪ್ರತಿಯೊಬ್ಬ ಸಾರ್ವಜನಿಕ ಕಾರ್ಯಾಸಕ್ತನೂ ದೊಡ್ಡ ದೊಡ್ಡ ರಾಜಕೀಯ ವ್ಯವಹಾರಗಳಿಗೆ ಕೈಹಾಕುವುದಕ್ಕೆ ಮೊದಲು ಸ್ಥಳೀಯ ಪ್ರಜಾಪ್ರಭುತ್ವದ ಬಗೆಯನ್ನು ಸ್ವಾನುಭವದಿಂದ ತಿಳಿಯಬೇಕೆಂಬ ತತ್ತ್ವವನ್ನು ಗೋಖಲೆಯವರು ತಮ್ಮ ನಡತೆಯಲ್ಲಿ ನಿದರ್ಶನಗೊಳಿಸಿರುವರು."

ಜನಪದ ಮಹಾಸಭೆಯ ಮೂಲಕವಾಗಿಯೂ ಇತರ ವಿಧಗಳಲ್ಲಿಯೂ ಭಾರತೀಯರು ನಡಸುತ್ತಿದ್ದ ರಾಜಕೀಯ ಸಮಾರಂಭವು ಸಫಲವಾಗುವುದಕ್ಕೆ ಇಂಗ್ಲೆಂಡಿನಲ್ಲಿ ಮಾಡಬೇಕಾಗಿದ್ದ ಕೆಲಸವು ಹೆಚ್ಚಾಗಿತ್ತು. ಇಂಡಿಯಾ ಸರಕಾರದ ಅಧಿಕಾರ ಸೂತ್ರಗಳಿರುವುದು ಇಂಗ್ಲೆಂಡಿನ ಕೈಯಲ್ಲೆಂದು ಹೇಳಿದೆವಲ್ಲವೆ? ಇಂಗ್ಲೆಂಡಿನ ಸರಕಾರವಾದರೋ ಅಲ್ಲಿಯ ಪ್ರಜಾಪ್ರತಿನಿಧಿ ಸಭೆಯಾದ ಪಾರ್ಲಿಮೆಂಟಿನ ಅಂಗವಾಗಿ, ಅದಕ್ಕೆ ವಿಧೇಯವಾಗಿರುವ (ಕ್ಯಾಬಿನೆಟ್) ಮಂತ್ರಿ ಮಂಡಲದಿಂದ ನಡೆಯತಕ್ಕುದು. ಆ ಪಾರ್ಲಿಮೆಂಟ್ ಸಭೆಯ ಸದಸ್ಯರು ಬ್ರಿಟಿಷ್ ಪ್ರಜೆಗಳಿಂದ ಆರಿಸಲ್ಪಟ್ಟವರು. ಇಂಡಿಯಾ ಸರಕಾರದ ಮೇಲುಗಡೆಯ ರಾಜ್ಯಯಂತ್ರ ರಚನೆಯು ಈ ಪ್ರಕಾರವಾಗಿರುವುದರಿಂದ, ಇಲ್ಲಿ ಯಾವ ಮಾರ್ಪಾಟುಗಳು ನಡೆಯಬೇಕೆಂ

ದರೂ ಅವಕ್ಕೆ ಬೇಕಾದ ಪ್ರೇರಣೆಯೂ ಬಲವೂ ಮೇಲಿನಿಂದ—ಎಂದರೆ ಇಂಗ್ಲೆಂಡಿನಿಂದ—ಬರಬೇಕು. ಅಲ್ಲಿಯ ಮಂತ್ರಿಮಂಡಲವು ಸಹಾಯ ಮಾಡಲು ಪ್ರಯತ್ನಿಸಿ, ಅದನ್ನು ಅಲ್ಲಿಯ ಪಾರ್ಲಿಮೆಂಟು ಸಭೆಯು ಅನು ಮೋದಿಸಿದಲ್ಲದೆ, ಇಂಡಿಯದ ರಾಜ್ಯವ್ಯವಸ್ಥೆಗೆ ಯಾವ ಸಂಸ್ಕಾರವೂ ಆಗುವ ಆಶೆಯಿಲ್ಲ. ಈ ತತ್ತ್ವವನ್ನು ಗೋಖಲೆಯವರು ತಿಳಿದಿದ್ದರಾದ ಕಾರಣ, ಇಂಗ್ಲೆಂಡಿನ ಮಂತ್ರಿಮಂಡಲಕ್ಕೂ, ಅವರಲ್ಲಿ ಮುಖ್ಯವಾಗಿ ಇಂಡಿಯಾ ವಿಚಾರದ ಮಂತ್ರಿಗೂ, ಪಾರ್ಲಿಮೆಂಟಿನ ಇತರ ಸದಸ್ಯರಿಗೂ, ಬ್ರಿಟಿಷ್ ಮಹಾಜನರಿಗೂ ಸಹ ಇಂಡಿಯಾ ದೇಶೀಯರ ಕಷ್ಟ ಕೊರತೆಗಳನ್ನೂ ಆಶೆ ಸಂಕಲ್ಪಗಳನ್ನೂ ಮುಖತಃ ತಿಳಿಯಪಡಿಸಲು ಇಲ್ಲಿಯ ಪ್ರಜಾಪಕ್ಷೀ ಯರು ಕೆಲಮಂದಿ ಆಗಾಗ ಅಲ್ಲಿಗೆ ಹೋಗುವುದು ಅವಶ್ಯವೆಂದು ಅವರು ನಿಶ್ಚಯಿಸಿದ್ದರು. ಹಾಗೆ ಮಾಡದಿದ್ದರೆ ಇಲ್ಲಿಯ ಸಂದರ್ಭಗಳು ಸಾರ್ವಭೌಮ ಸರಕಾರದ ಮನಸ್ಸಿಗೆ ಬರುವ ಸಂಭವವಿರಲಿಲ್ಲ. ಇಂಡಿಯಾ ಸರಕಾರದವರು ನಿಜವಾದ ಪ್ರಜಾಭಿಪ್ರಾಯವನ್ನು ಅಲ್ಲಿಗೆ ತಿಳಿಸತಕ್ಕವರಲ್ಲ; ಸಾರ್ವಭೌಮ ಸರಕಾರದವರು ತಾವಾಗಿ ಇಲ್ಲಿಯ ಪ್ರಜೆಗಳ ಮನೋಗತವೇನೆಂದು ಸ್ವತಂತ್ರಿಸಿ ವಿಚಾರಿಸತಕ್ಕವರಲ್ಲ. ಹೀಗಿರುವಲ್ಲಿ, ದೇಶದ ಕೆಲಸಕ್ಕಾಗಿ ದೇಶೀಯರೇ ಹೊರಡಬೇಕಾಗಿತ್ತು. ಅದರಂತೆ ಗೋಖಲೆಯವರು ೧೯೦೬ರಲ್ಲಿ ಇಂಗ್ಲೆಂಡಿಗೆ ಪ್ರಯಾಣ ಬೆಳೆಸಿದರು. ಆಗಲೇ ರಮೇಶಚಂದ್ರ ದತ್ತರವರೂ ಅಲ್ಲಿಗೆ ತೆರಳಿದ್ದರು. ಅವರಿಬ್ಬರೂ ಲಂಡನ್ ನಗರದಲ್ಲಿಯ "ನ್ಯಾಷನಲ್ ಲಿಬರಲ್ ಕ್ಲಬ್" (ಜಾನಪದೀಯ ಸ್ವತಂತ್ರವಾದಿಗಳ ಗೋಷ್ಠಿ) ಎಂಬ ರಾಜಕೀಯ ಕೂಟದ ಮಂದಿರದಲ್ಲಿ ಇಳಿದುಕೊಂಡು, ಆ ಮಹಾಪಟ್ಟಣ ದಲ್ಲಿಯೂ ಇತರ ಕಡೆಗಳಲ್ಲಿಯೂ ನೋಡಬೇಕಾಗಿದ್ದ ಆಂಗ್ಲೇಯ ಪ್ರಮುಖ ಜನರನ್ನೆಲ್ಲಾ ನೋಡಿ ಮಾತನಾಡಿ ಬರುತ್ತಿದ್ದರು. ಅವರಲ್ಲಿ ಅತಿಮುಖ್ಯರಾದೊಬ್ಬರು (ಲಾರ್ಡ್) ಜಾನ್ ಮಾರ್ಲೇಯವರು. ಅವರು ಮಹಾವಿದ್ವಾಂಸರು, ಪ್ರಖ್ಯಾತ ಗ್ರಂಥ ಲೇಖಕರು, ಮತ್ತು ಅದ್ವಿತೀಯ ವಾದ ರಾಜ್ಯಕಾರ್ಯಾನುಭವವುಳ್ಳವರು; ಜನಪದ ಧರ್ಮದ ಮತ್ತು ಪ್ರಜಾ ವಿಹಿತ ರಾಜ್ಯಕ್ರಮದ ಶ್ರೇಷ್ಠತೆಯನ್ನು ಅವರು ತಮ್ಮ ಉದ್ದಾಮ

ಗಳಾದ ಉಪನ್ಯಾಸಗಳಲ್ಲಿ ಬೋಧಿಸಿ, ತಾವು ಅಧಿಕಾರಪಡೆದ ಕಾಲದಲ್ಲಿ ಆ ತತ್ತ್ವಗಳನ್ನು ಕೂಡಿದಮಟ್ಟಿಗೆ ಆಚರಣೆಯಲ್ಲಿ ತೋರಲು ಶ್ರಮಪಟ್ಟವರು. ಅವರನ್ನು ಬ್ರಿಟಿಷ್ ಜನಸಾಮಾನ್ಯವು ವಾಡಿಕೆಯಾಗಿ "ಆನೆಸ್ಟ್ ಜಾನ್" (ಸತ್ಯಸಂಧ ಜಾನ್) ಎಂದು ಕರೆಯುತ್ತಿದ್ದರೆಂಬ ಸಂಗತಿಯಿಂದ ಅವರು ಎಂತಹ ನಿಯಮವುಳ್ಳವರೆಂಬುದನ್ನು ನಾವು ಊಹಿಸಬಹುದು. ಪ್ರಸಕ್ತ ಸಮಯದಲ್ಲಿ ಅವರು ಬ್ರಿಟಿಷ್ ಮಂತ್ರಿಮಂಡಲದೊಳಗೆ ಇಂಡಿಯಾ ದೇಶದ ವಿಚಾರಕ್ಕೆ ಸಂಬಂಧಪಟ್ಟ ಮಂತ್ರಿ (ಸೆಕ್ರೆಟರಿ ಆಫ್ ಸ್ಟೇಟ್ ಫಾರ್ ಇಂಡಿಯಾ) ಆಗಿದ್ದರು. ಅಂಥವರು ಈ ಅಧಿಕಾರಕ್ಕೆ ಬಂದ ವಿಷಯದಲ್ಲಿ ಭಾರತೀಯರಿಗೆ ಉಂಟಾದ ಸಂತೋಷವನ್ನು ಗೋಖಲೆಯವರು ತಮ್ಮ ಕಾಂಗ್ರೆಸ್ ಭಾಷಣದಲ್ಲಿ ಸೂಚಿಸಿ, ಮಾರ್ಲೇಯವರಿಂದ ತಮ್ಮ ದೇಶಕ್ಕೆ ಅತ್ಯಂತೋಪಕಾರವಾದೀತೆಂಬ ನಿರೀಕ್ಷಣೆಯನ್ನು ವ್ಯಕ್ತಪಡಿಸಿದ್ದರು. ಆದರೆ ಮಾರ್ಲೇಯವರು ಸರ್ವಾಧಿಕಾರಿಗಳೇನೂ ಆಗಿರಲಿಲ್ಲವೆಂಬುದನ್ನು ನಾವು ಮರೆಯಬಾರದು; ಗೋಖಲೆಯವರು ಅದನ್ನು ಮರೆತಿರಲಿಲ್ಲ. ಮಾರ್ಲೇಯವರು ಬ್ರಿಟಿಷ್ ಮಂತ್ರಿಮಂಡಲದ ಪೈಕಿ ಒಬ್ಬರು. ಅವರ ಸಹೋದ್ಯೋಗಿಗಳು ಸಮ್ಮತಿಸಿದ ಹೊರತು ಯಾವ ಕೆಲಸವನ್ನೂ ಅವರು ಮಾಡಲಾಗುತ್ತಿರಲಿಲ್ಲ. ಅದಲ್ಲದೆ ಪಾರ್ಲಿಮೆಂಟು ಸಭೆಯ ಅಧಿಕಪಕ್ಷವು (ಮೆಜಾರಿಟಿ) ಅವರ ಉದ್ದೇಶಕ್ಕೆ ಅನುಮತಿಕೊಟ್ಟ ಹೊರತು, ಅದನ್ನು ಅವರು ನೆರವೇರಿಸಲಾಗುತ್ತಿರಲಿಲ್ಲ. ಆಗಿನ ಸ್ಥಿತಿಯಲ್ಲಿ, ಮಾರ್ಲೇಯವರ ಸಹೋದ್ಯೋಗಿಗಳ ಪೈಕಿಯೂ, ಪಾರ್ಲಿಮೆಂಟಿನ ಸದಸ್ಯರ ಪೈಕಿಯೂ ಇಂಡಿಯದ ವಿಷಯದಲ್ಲಿ ಉದಾಸೀನರಾದವರು ಬಹುಮಂದಿ ಇದ್ದರು; ವಿರೋಧಿಗಳೂ ಅನೇಕರಿದ್ದರು; ಅಭಿಮಾನಿಗಳು ಕೆಲಮಂದಿ ಮಾತ್ರವಿದ್ದರು. ಆದಕಾರಣ ಮಾರ್ಲೇಯವರಿಗೆ ಇಂಡಿಯಾ ದೇಶೀಯರ ಬಿನ್ನಹವನ್ನು ತಿಳಿಸಿ, ಅವರ ಸ್ನೇಹವನ್ನು ದೃಢಪಡಿಸಿಕೊಳ್ಳುವುದಲ್ಲದೆ, ತಮಗೆ ಆಗ್ಗೆ ದೊರೆತಿದ್ದ ಇತರ ಕೆಲವುಮಂದಿ ಅಭಿಮಾನಿಗಳನ್ನು ಗಟ್ಟಿಮಾಡಿಕೊಳ್ಳುವುದೂ, ಹೊಸ ಅಭಿಮಾನಿಗಳನ್ನು ಸಂಪಾದಿಸುವುದೂ ಗೋಖಲೆ ದತ್ತರುಗಳ ಕರ್ತವ್ಯವಾಗಿತ್ತು. ಬ್ರಿಟಿಷ್ ಮಹಾಜನರ ಸಭೆಗಳಲ್ಲಿ ಉಪನ್ಯಸಿಸುವುದು, ಬ್ರಿಟಿಷ್

ಪತ್ರಿಕೆಗಳಲ್ಲಿ ಬರೆಯುವುದು, ಪಾರ್ಲಿಮೆಂಟಿನ ಸದಸ್ಯರೊಡನೆಯೂ ಇತರ ಪ್ರಮುಖ ಜನರೊಡನೆಯೂ ಸಮಯದೊರೆತಂತೆಲ್ಲ ಕಲೆತು, ಅವರಿಗೆ ಸಮಾಚಾರಗಳನ್ನು ತಿಳಿಸಿ, ಅವರ ಸಹಾಯವನ್ನು ಬಯಸುವುದು—ಇವು ಅವರು ಮಾಡಬೇಕಾಗಿದ್ದ ಕೆಲಸಗಳು. ಈ ಕೆಲಸಗಳನ್ನು ಸಾರ್ಥಕವಾಗುವಂತೆ ನೆರವೇರಿಸಲು ಸಂಚಾರಮಾಡುವುದರಲ್ಲಿಯೂ, ತಕ್ಕ ಅವಕಾಶಗಳನ್ನು ಕಲ್ಪಿಸಿಕೊಳ್ಳುವುದರಲ್ಲಿಯೂ, ಅವುಗಳನ್ನು ಉಪಯೋಗಪಡಿಸಿಕೊಳ್ಳುವುದರಲ್ಲಿಯೂ ಗೋಖಲೆಯವರೂ ದತ್ತರವರೂ ಪಾಲುಮಾರದವರಾಗಿ, ದೇಹಶಕ್ತಿ ಬುದ್ಧಿಶಕ್ತಿಗಳ ವ್ಯಯವನ್ನು ಲಕ್ಷಿಸದವರಾಗಿದ್ದರು. ಗೋಖಲೆಯವರ ಶ್ರದ್ಧೆ ಉತ್ಸಾಹಗಳು ಎಷ್ಟರಮಟ್ಟಿನವೆಂಬುದನ್ನು ದತ್ತರವರೇ ಅನೇಕ ಕಡೆ ಸೂಚಿಸಿರುವರು. ೧೯೦೬ನೆಯ ಜುಲೈ ೨೫ರಲ್ಲಿ ಅವರು ತಮ್ಮ ಮೊಮ್ಮಗಳಿಗೆ ಬರೆದ ಒಂದು ಕಾಗದದಲ್ಲಿ ಹೀಗೆ ಹೇಳಿರುವರು :—

"........ಪಾರ್ಲಿಮೆಂಟಿನ ಶ್ರದ್ಧಾವಂತರಾದ ಸದಸ್ಯರನ್ನು ಇಂಡಿಯಾ ದೇಶದ ವಿಚಾರಗಳಲ್ಲಿ ಈ ಮೂರು ತಿಂಗಳೂ ತಯಾರು ಮಾಡಿರುವ ಕೀರ್ತಿಯು ಗೋಖಲೆಯವರಿಗೆ ಸಲ್ಲತಕ್ಕುದು. ಇಂಡಿಯದ ಆಯವ್ಯಯ ವಿಮರ್ಶೆಯ ಹಿಂದಿನ ದಿವಸ ಗೋಖಲೆಯವರನ್ನೂ ನನ್ನನ್ನೂ ಪಾರ್ಲಿಮೆಂಟು ಮೆಂಬರುಗಳು "ಟೀ" (ಚಹಾ) ಕೂಟವೊಂದಕ್ಕೆ ಕರೆದಿದ್ದರು ; ಆಗ ಬಂದಿದ್ದ ಐವತ್ತಕ್ಕಿಂತ ಹೆಚ್ಚು ಮಂದಿ ಪಾರ್ಲಿಮೆಂಟು ಸದಸ್ಯರ ಮುಂದೆ ನಾವು ಉಪನ್ಯಾಸಮಾಡಿದೆವು. (ಪ್ರಪಂಚದ) ಸಮಸ್ತ ಜನಪದಗಳಿಗೂ ಸಂಬಂಧಪಟ್ಟ ವಿಚಾರಗಳಿಗಾಗಿ ಈ ವಾರ ನಡೆಯಬೇಕಾಗಿರುವ ಪಾರ್ಲಿಮೆಂಟ್ ಉಪಸಭೆಗೂ ಕೂಡ ಗೋಖಲೆಯವರನ್ನು ಕರೆದಿದ್ದಾರೆ".

ಗೋಖಲೆಯವರು ಇಂಗ್ಲೆಂಡಿನಲ್ಲಿ ಪದೇಪದೇ ನೋಡುತ್ತಿದ್ದ ಬ್ರಿಟಿಷ್ ಸಹಾಯಕರ ಹೆಸರುಗಳನ್ನು ಇಲ್ಲಿ ಕೊಡುವುದು ಉಚಿತವಾಗಿದೆ. ಅವರು ಯಾರು ಯಾರೆಂದರೆ :—ಎ. ಓ. ಹ್ಯೂಂ, ಸರ್ ವಿಲಿಯಂ ವೆಡ್ಡರ್ ಬರ್ನ್, ಸರ್ ಹೆನ್ರೀ ಕಾಟನ್, ಕೀರ್ ಹಾರ್ಡಿ (ಇವರುಗಳ ವಿಷಯವನ್ನು ಹಿಂದೆ ಹೇಳಿದೆ); ಲಾರ್ಡ್ ರಿಪ್ಪನ್ ಮತ್ತು ಸರ್ ಚಾರ್ಲೆಸ್ ಡಿಲ್ಕ್; ಜಾನ್ ರೆಡ್ಮಂಡ್, ಓಗ್ರ್ಯಾಡೀ ಮತ್ತು ಓಡಾನೆಲ್ ಮುಂತಾದ ಐರ್ಲೆಂಡ್ ದೇಶಾಭಿಮಾನಿಗಳು ; ರಾಬರ್ಟ್ಸನ್, ರುದರ್‌ಫರ್ಡ್, ಹಾರ್ಟ್

ಡೇವೀಸ್, ಮ್ಯಾಕರ್ನೆಸ್ ಮೊದಲಾದ 'ಲೇಬರ್' (ಅಥವಾ ಕಾರ್ಮಿಕ ಜನರ) ಪಕ್ಷದ ಪ್ರಮುಖರು.

ಕಾಶಿಯ ಮಹಾಸಭೆ ಸೇರುವುದಕ್ಕೆ ಮುಂಚೆ ಇಂಗ್ಲೆಂಡಿಗೆ ಹೋಗಿದ್ದಾಗ ಗೋಖಲೆಯವರು ಮಾರ್ಲೇ ಮಂತ್ರಿಗಳನ್ನು ಕಂಡು ಮಾತನಾಡಿದ್ದರು. ಆ ಸಭೆಯ ತರುವಾಯ ಅಲ್ಲಿಗೆ ಹೋದಮೇಲೆ ಅವರಿಬ್ಬರೂ ಅನೇಕಸಲ ಕಲೆತು ಪರಸ್ಪರ ಸಲಹೆಗಳನ್ನು ತೆಗೆದುಕೊಂಡರು. ಅವರ ಸಂಭಾಷಣೆಗಳನ್ನು ಕುರಿತು ಲಾರ್ಡ್ ಮಾರ್ಲೇಯವರೇ ತಮ್ಮ ದಿನವಹಿಯ ಪುಸ್ತಕದಲ್ಲಿಯೂ ಮಿಂಟೋ ವೈಸ್‌ರಾಯರಿಗೆ ಕಳುಹಿದ ಕಾಗದಗಳಲ್ಲಿಯೂ ಹೀಗೆ ಬರೆದಿರುವರು:—

"೧೯೦೫ನೆಯ ನವಂಬರ್ ೨೨— . . . . . . . ಬೊಂಬಾಯಿಂದ ಬಂದಿರುವ ಮಹಾರಾಷ್ಟ್ರ ಬ್ರಾಹ್ಮಣ ಗೋಖಲೆಯೊಡನೆ ಅರ್ಧಘಂಟೆ ಮಾತನಾಡಿದುದು, ಬಹು ಸ್ವಾರಸ್ಯ.'

"೧೯೦೬ನೆಯ ಮೇ ೧೧— . . . . ಮೊನ್ನೆ ಗೋಖಲೆಯೊಡನೆ ಸ್ವಲ್ಪ ಹೊತ್ತು ಪೀಠಿಕಾರೂಪವಾದ ಮಾತು ನಡೆಯಿತು ; ಕೆಲವು ದಿನಗಳಮೇಲೆ ಇನ್ನೂ ಮಾತನಾಡುವೆನು. . . . ಪಾರ್ಲಿಮೆಂಟಿನಲ್ಲಿ ಎದೆಯುದ್ದ ಹರಿಯುತ್ತಿರುವ ಪ್ರಜಾಭಿಮಾನದ ಪ್ರವಾಹಗಳನ್ನು ತಿದ್ದುವುದರಲ್ಲಿ ಗೋಖಲೆಯಿಂದ ನನಗೆ ಬಾಧಕವಾಗದೆ ಸಹಾಯವೇ ಆದೀತೆಂದು ತುಂಬಾ ಆಶೆಯಿದೆ."

"೧೯೦೬ನೆಯ ಆಗಸ್ಟ್ ೨—ನಿನ್ನೆ ಗೋಖಲೆಯೊಡನೆ ಐದನೆಯ ಸಲದ ಸಂಭಾಷಣೆ. ಆತನಿಗೆ ಸಮರ್ಪಕವಾಗುವ ರೀತಿಯಲ್ಲಿ ನಾವು ನಡೆದುಕೊಳ್ಳುವುದು ನಮಗೇ ಬಹಳ ಅನುಕೂಲ. ನನಗೆ ತಿಳಿಯಬಂದಿರುವುದನ್ನೆಲ್ಲ ನಾನು ಯೋಚಿಸಿ ನೋಡಿ,— ಪಾರ್ಲಿಮೆಂಟಿನಲ್ಲಿ ಇಂಡಿಯದ ಪರವಾಗಿ ಮಾತನಾಡುವವರ ಮೇಲೆಲ್ಲ ಆತನ ಪ್ರಭಾವವು ಸುಮುಖವಾಗಿದೆಯೆಂದೂ, ನನ್ನ ಉಪನ್ಯಾಸವನ್ನು ಅನಿಶ್ಚಿತ, ಅಂಜಿಕೆ, ಸಪ್ಪೆ, ಟೊಳ್ಳು ಎಂದು ಅಲ್ಲಗಳೆದವರಿಗೆ ಆತನು ಎದುರು ನಿಂತು ಅದರ ಹಿತಸೂಚನೆಯನ್ನು ಪ್ರಶಂಸಿಸಿರುವನೆಂದೂ ನಂಬಿಕೊಂಡಿದ್ದೇನೆ. ಆತನಿಗೆ ರಾಜ್ಯತಂತ್ರಜ್ಞನ ಬುದ್ಧಿಯಿದೆ ; ಕಾರ್ಯನಿರ್ವಾಹಕರಿಗಿರುವ ಉತ್ತರಭಾರವನ್ನು ಆತನು ಅರಿಯಬಲ್ಲ ; ಕಾರ್ಯಸಾಧನೆಗೆ ಲೌಕಿಕ ಪರಿಜ್ಞಾನದಿಂದ ತೋರಿಬರುವ ಉಪಾಯಗಳ ಮೇಲೆ ಆತನಿಗೆ ಗಮನವುಂಟು. ಆತನು ತನ್ನ ಆಶೆ ಉದ್ದೇಶ್ಯಗಳ ಪರಮಾವಧಿ ಯಾವುದೆಂಬುದನ್ನು ಗುಪ್ತವಾಗಿಟ್ಟಿಲ್ಲ. ಅದು

ಇಂಡಿಯಾ ದೇಶವು ಸ್ವರಾಜ್ಯ ಸಮನ್ವಿತವಾದ ಬ್ರಿಟಿಷ್ ಅಂತರ್ಗತ ರಾಷ್ಟ್ರಕ್ಕೆ (''ಕಾಲನಿ''ಗೆ) ಸಮಾನವಾದ ಸ್ಥಿತಿಯನ್ನು ಪಡೆಯಬೇಕೆಂಬುದು''.

ಮಾರ್ಲೀಯವರ ಸ್ವೀಯ ಕಥಾ ಸ್ಮೃತಿಯಲ್ಲಿ ಗೋಖಲೆಯವರ ಪ್ರಸ್ತಾವವು ಇನ್ನೂ ಅನೇಕ ಕಡೆಗಳಲ್ಲಿದೆ. ಅಲ್ಲದೆ, ಅವರು ಪಾರ್ಲಿಮೆಂಟಿನಲ್ಲಿಯೂ ಇತರ ಸ್ಥಳಗಳಲ್ಲಿಯೂ ಮಾಡಿದ ಉಪನ್ಯಾಸಗಳಲ್ಲಿ ಗೋಖಲೆಯವರ ಅಭಿಪ್ರಾಯಗಳನ್ನೂ ಕಾರ್ಯರೀತಿಯನ್ನೂ ಉದಾಹರಿಸಿ ತಮಗೆ ಅವರ ವಿಷಯದಲ್ಲಿದ್ದ ಗೌರವಾತಿಶಯವನ್ನು ಸೂಚಿಸಿರುವರು.

ಗೋಖಲೆ ಮಾರ್ಲೀ ಅವರುಗಳ ಪರಸ್ಪರ ಸಂಭಾಷಣೆಗಳ ಮುಖ್ಯ ವಿಷಯವು ಇಂಡಿಯದ ರಾಜ್ಯ ವ್ಯವಸ್ಥಾ ಪರಿಷ್ಕರಣ. ಅದರ ಜೊತೆಗೆ ಪ್ರಾಸ್ತಾವಿಕವಾಗಿ, ಇಂಡಿಯದಲ್ಲಿ ಆಗ ಸರಕಾರದಿಂದ ನಡೆಯುತಲಿದ್ದ ಅಕ್ರಮ ದಾಂಧಲೆಗಳ ವಿಷಯವನ್ನೂ ಗೋಖಲೆಯವರು ಮಾರ್ಲೀಯವರಿಗೂ ಇತರ ಅಭಿಮಾನಿಗಳಿಗೂ ತಿಳಿಯಪಡಿಸುತ್ತಿದ್ದರು. ಆಗ ಇಲ್ಲಿಯ ಪ್ರಜಾಪ್ರಮುಖರು ಮಾಡುತ್ತಿದ್ದ ಗದ್ದಲವನ್ನು ಹೇಗಾದರೂ ಅಣಗಿಸಬೇಕೆಂಬ ಉದ್ದೇಶದಿಂದ ಸರಕಾರದವರು ಅನೇಕ ವರ್ತಮಾನಪತ್ರಿಕೆಗಳ ಮೇಲೆ ರಾಜದ್ರೋಹಾಪರಾಧವನ್ನು ಆಪಾದನೆಮಾಡಿ, ಅವುಗಳ ಮುದ್ರಾಪಕರನ್ನೂ ಸಂಪಾದಕ ಪ್ರಕಾಶಕರುಗಳನ್ನೂ ದಂಡಕಾರಾಗೃಹವಾಸಗಳಿಗೆ ಗುರಿಪಡಿಸಿ, ಪ್ರಜೆಗಳ ಲೇಖನ ಸ್ವಾತಂತ್ರ್ಯಕ್ಕೆ ಭಂಗ ತಂದಿದ್ದರು ; ಅನೇಕಮಂದಿ ಪ್ರಜಾಪ್ರಮುಖರಿಗೆ ವಾಗ್ಬಂಧನ ಮಾಡಿಸಿದ್ದರು ; ಅನೇಕರನ್ನು, ಅವರ ತಪ್ಪೇನೆಂಬ ಹೇಳಿಕೆ ಕೇಳಿಕೆಗಳಿಗೆ ಕೂಡ ಅವಕಾಶ ಕೊಡದೆಯೇ, ದೇಶದಿಂದ ಹೊರಕ್ಕೆ ಕರೆದೊಯ್ದಿದ್ದರು ; ಇನ್ನೂ ಅನೇಕಮಂದಿಗೆ ಸಭೆ ನಡಸುವ ಸ್ವಾತಂತ್ರ್ಯವನ್ನು ತಪ್ಪಿಸಿದ್ದರು. ಹೀಗೆ ನಾನಾ ವಿಧಗಳಲ್ಲಿ ಪ್ರಜೆಗಳಿಗೂ ಅವರ ಮುಖಂಡರೆನ್ನಿಸಿಕೊಂಡಿರುವವರಿಗೂ ಭಯೋತ್ಪಾದನೆಮಾಡಿಸಿ, ಪ್ರಜಾಪಕ್ಷದ ಸದ್ದು ಮೇಲಕ್ಕೆ ಬಾರದಂತೆ ಮಾಡಬೇಕೆಂಬುದೇ ಇಂಡಿಯಾ ಸರಕಾರದ ಆಶಯವಾಗಿತ್ತು. ಆದರೆ ಮಾರ್ಲೀ ಮಂತ್ರಿಗಳು ಅಂಥಾ ಮಾರ್ಗವನ್ನು ಮನಸಾ ಒಪ್ಪತಕ್ಕವರಲ್ಲವೆಂಬುದು ಸಕಲಜನ ವಿದಿತವಾಗಿತ್ತು. ಅವರು ತಮ್ಮ ಯಾವಜ್ಜೀವವನ್ನೂ ಪ್ರಜಾಸ್ವಾಮ್ಯ ಪ್ರಜಾ ಸ್ವಾತಂತ್ರ್ಯಗಳ

ಪ್ರತಿಪಾದನೆಯಲ್ಲಿಯೇ ಕಳೆದಿದ್ದವರು. ಅಂಥವರು ಇಂಡಿಯಾ ವಿಚಾರಕ್ಕೆ ಮುಖ್ಯ ಜವಾಬ್ದಾರರಾಗಿದ್ದ ಕಾಲದಲ್ಲಿ ಕೂಡ, ಇಂಡಿಯಾ ಸರಕಾರವು ಪ್ರಜೆಗಳನ್ನು ದಮನಮಾಡುವ ಪ್ರಯತ್ನದಲ್ಲಿ ಇಷ್ಟು ನಿರಂಕುಶವಾಗಿದ್ದದ್ದು ಎಲ್ಲರಿಗೂ ವಿಸ್ಮಯವನ್ನುಂಟುಮಾಡಿತ್ತು. ಆದರೆ ಮಾರ್ಲೇಯವರ ಅಧಿಕಾರದ ನಿರ್ಬಂಧಗಳೆಂಥವೆಂಬುದನ್ನು ಗೋಖಲೆಯವರು ಅರಿತಿದ್ದರು. ಮಾರ್ಲೇಯವರ ಸಹೋದ್ಯೋಗಿಗಳಾಗಿದ್ದ ಇತರ ಮಂತ್ರಿಗಳು ಅವರಷ್ಟು ಉದಾತ್ತಭಾವದವರಾಗಿರಲಿಲ್ಲ; ಅಲ್ಲದೆ ಅವರಿಗೆಲ್ಲ ಮೇಲ್ಪಟ್ಟಿದ್ದ ಪಾರ್ಲಿಮೆಂಟು ಸಭೆಯಲ್ಲಿ ಅಧಿಕಸಂಖ್ಯಾಪಕ್ಷವು (ಮೆಜಾರಿಟಿ) ಇಂಡಿಯಾ ವಿಷಯದಲ್ಲಿ ಸಹಾಯಭೂತಿಯುಳ್ಳದಾಗಿರಲಿಲ್ಲ. ಇಷ್ಟರಮೇಲೆ, ಇಂಡಿಯಾ ದೇಶದಲ್ಲಿ ಸರಕಾರದ ಭಾರವನ್ನು ವಹಿಸಿರುವವರ ಮಾತನ್ನು ಸ್ವಲ್ಪವೂ ಲೆಕ್ಕಿಸದೆ, ಅವರು ಮಾಡಿದುದನ್ನೆಲ್ಲ ಖಂಡಿಸಿ, ಅವರಿಗೆ ಒತ್ತಾಸೆ ಕೊಡದೆ ಹೋದರೆ, ಅವರೆಲ್ಲ ಕೆಲಸಕ್ಕೆ ರಾಜೀನಾಮೆ ಕೊಟ್ಟು ತಮ್ಮಮೇಲೆ ತಿರುಗಿಬಿದ್ದಾರು, ಅಥವಾ ಹಟದಿಂದ ಆಡಳಿತವನ್ನು ಮತ್ತಷ್ಟು ಕೆಡಿಸಿಬಿಟ್ಟಾರು— ಎಂಬ ಭೀತಿಯೂ ಮಾರ್ಲೇಯವರಿಗೆ ಸಹಜವಾಗಿತ್ತು. ಹೀಗೆ ಎರಡು ಮೂರು ಪಕ್ಕಗಳಲ್ಲಿಯೂ ಪ್ರತಿಕೂಲಗಳೇ ಇದ್ದುದರಿಂದ ಮಾರ್ಲೇಯವರು ತಮ್ಮ ಪ್ರಜಾಭಿಮಾನದ ತತ್ತ್ವಗಳ ಪಾಲನೆಯು ಸ್ವಲ್ಪಮಟ್ಟಿಗಾದರೂ ಸಾಧ್ಯವಾಗುವಂತೆ ಮಾಡುವುದಕ್ಕೋಸ್ಕರ ಆ ತತ್ತ್ವಗಳನ್ನು ಸ್ವಲ್ಪಮಟ್ಟಿಗೆ ನುಂಗಿಕೊಂಡು, ಆ ವಿಷಮ ಸಂದರ್ಭದಲ್ಲಿ ಎಷ್ಟುಮಾತ್ರ ಉಪಕಾರ ಮಾಡುವುದು ಸಾಧ್ಯವಾಗಿತ್ತೋ ಅಷ್ಟು ಸ್ವಲ್ಪವನ್ನಾದರೂ ಮಾಡುವುದರಿಂದಲೇ ತೃಪ್ತರಾಗಬೇಕಾಗಿತ್ತು. "ಆಗ ಮಾರ್ಲೇಯವರು ಮಾಡಿದುದೇನು?" ಎಂದು ನಾವು ಕೇಳುವುದಕ್ಕಿಂತ, "ಆಗ ಮಾರ್ಲೇಯವರು ನಿಲ್ಲಿಸಿದುದೇನು?" ಎಂದು ಕೇಳುವುದು ನ್ಯಾಯವಾಗಿದೆ. ಆ ಸಮಯದಲ್ಲಿ ಇಂಡಿಯಾ ಸೆಕ್ರೆಟರೀ ಅಧಿಕಾರದಲ್ಲಿ ಮಾರ್ಲೇಯವರಲ್ಲದೆ ಮತ್ತಾರಾದರೂ ಇದ್ದಿದ್ದರೆ, ಇಂಡಿಯದಲ್ಲಿ ಪ್ರಜಾನಿಗ್ರಹವು ಮತ್ತಷ್ಟು ಅತಿಯಾಗಿ ನಡೆಯುತ್ತಿತ್ತೆಂಬುದಕ್ಕೆ ಸಂದೇಹವಿಲ್ಲ. ಮಾರ್ಲೇಯವರು ದೃಢವ್ರತರೂ ಎಲ್ಲರ ಗೌರವಕ್ಕೂ ಪಾತ್ರರೂ ಆಗಿದ್ದುದರಿಂದ ಸ್ವಲ್ಪಮಟ್ಟಿಗಾದರೂ ಅವರು ತಮ್ಮ

ಕೈಕೆಳಗಿನ ಅಧಿಕಾರಿಗಳ ವರ್ತನೆಯನ್ನು ಹದ್ದಿನಲ್ಲಿಡುವುದು ಸಾಧ್ಯವಾಯಿತು. ಆ ವಿಚಾರವಂತಿರಲಿ. ಮಾರ್ಲೇಯವರು ಇಂಡಿಯಾ ಸರಕಾರದ ಆಡಳಿತಗಳಲ್ಲಿ ಕೈಹಾಕಬೇಕಾಗಿದ್ದಿದ್ದರೆ ಅದಕ್ಕೆ ಯಾವುದಾದರೊಂದು ಪ್ರಬಲವಾದ ನಿಮಿತ್ತವು ಅವಶ್ಯಕವಾಗಿತ್ತು. ಯಾವ ನೆವವೂ ಇಲ್ಲದೆ ಸುಮ್ಮಸುಮ್ಮನೆ ಇಂಡಿಯಾ ಸರಕಾರದವರನ್ನು ಆಕ್ಷೇಪಿಸುವುದೂ ಅವರ ಕೈಯನ್ನು ತಡೆಯುವುದೂ ಅಧಿಕಾರ ನೀತಿಗೆ ವಿರೋಧವಾಗುತ್ತಿತ್ತು. ಆದ ಕಾರಣ ಇಂಡಿಯದ ಅಧಿಕಾರಿಗಳ ಅಕ್ರಮಗಳನ್ನು ಉದ್ಘಾಟಿಸಿ ಪುಕಾರು ಮಾಡಿ ಮಾರ್ಲೇಯವರ ಪ್ರವೇಶಕ್ಕೆ ನಿಮಿತ್ತವನ್ನು ಕಲ್ಪಿಸುವ ಉದ್ದೇಶದಿಂದ, ಇಂಡಿಯದ ಅಭಿಮಾನಿಗಳಾದ ಸರ್ ಹೆನ್ರೀ ಕಾಟನ್, ಕೀರ್ ಹಾರ್ಡಿ, ರುದರ್ ಫೋರ್ಡ್, ಮ್ಯಾಕರ್ನೆಸ್ ಮೊದಲಾದವರು ಪಾರ್ಲಿಮೆಂಟು ಸಭೆಯಲ್ಲಿ ಪದೇಪದೇ ಪ್ರಶ್ನೆಗಳನ್ನು ಕೇಳುತ್ತಲೂ, ಚರ್ಚೆಗಳನ್ನು ಉಂಟಾಗಿಸುತ್ತಲೂ ಇದ್ದರು. ಆದರೆ ಈ ಪ್ರಶ್ನೆ ತರ್ಕಗಳು ಮಿತವಾಗಿದ್ದಿದ್ದರೆ ಪ್ರಯೋಜಕಗಳಾಗುತ್ತಿದ್ದುವೇ ವಿನಾ, ಮಿತಿಮೀರಿದ್ದರೆ ಬಾಧಕಗಳಾಗುತ್ತಿದ್ದುವು. ಏಕೆಂದರೆ, ಯಾವುದಾದರೂ ಒಂದು ವಿಷಯದಲ್ಲಿ ಯಾವ ಸಭೆಯಲ್ಲಾದರೂ ಭಿನ್ನಾಭಿಪ್ರಾಯಗಳುಂಟಾಗಿ ವೈಷಮ್ಯಗಳು ಹುಟ್ಟಿದ್ದರೆ, ಆಗ ಆ ವಿಷಯದಲ್ಲಿ ಒಂದು ಪಕ್ಷದವರು ಮುಷ್ಕರ ಮಾಡಿದಷ್ಟೂ ಅವರ ಪ್ರತಿಪಕ್ಷದವರು ವಿರೋಧಿಗಳಾಗುವುದು ಸ್ವಾಭಾವಿಕ. ಒಂದು ಕಡೆಯವರು ಎಷ್ಟು ಗಟ್ಟಿಯಾಗಿ ಒಂದು ಏರ್ಪಾಟು ಬೇಕೆಂದು ಕೂಗುವರೋ, ಮತ್ತೊಂದು ಕಡೆಯವರು ಅಷ್ಟು ಗಟ್ಟಿಯಾಗಿ ಅದು ಬೇಡವೆಂದು ಅರಚುವರು. ಈ ಆರ್ಭಟ ಪ್ರತ್ಯಾರ್ಭಟಗಳಲ್ಲಿ ಉಭಯತ್ರರ ಮನಸ್ಸುಗಳೂ ಕೆಟ್ಟು, ಉದ್ದಿಷ್ಟ ಕಾರ್ಯವು ದುಸ್ಸಾಧ್ಯವಾಗುವುದು. ಆದಕಾರಣ, ಕಾರ್ಯವಾದಿಯಾದವನು ಲಗುವು ಬಿಗುವುಗಳನ್ನರಿತು ತನ್ನ ಪಕ್ಷದ ಮಾತನ್ನಾಡಬೇಕು. ಪ್ರಕೃತ, ಕಾಟನ್ ಪ್ರಭೃತಿಗಳು ಇಂಡಿಯಾ ವಿಷಯದಲ್ಲಿ ಸದುದ್ದೇಶದಿಂದಲೇ ಮಾತನಾಡತಕ್ಕವರಾದರೂ, ಅವರು ಸುಸಮಯವನ್ನರಿಯದೆಯೂ ಅತಿ ಕಠಿನೋಕ್ತಿಗಳಿಂದಲೂ ಮಾತನಾಡಿದರೆ, ಅದರಿಂದ ಯಾರುಯಾರು ಮಂತ್ರಿಮಂಡಲದ ಪೈಕಿಯೂ ಪಾರ್ಲಿಮೆಂಟು ಸಭಿಕರ

ಪೈಕಿಯೂ ಇಂಡಿಯಾ ದೇಶಕ್ಕೆ ವಿರೋಧಿಗಳಾಗಿದ್ದರೋ ಅಂಥವರೆಲ್ಲ ಮತ್ತಷ್ಟು ಕ್ರುದ್ಧರಾಗಿ, ತಮಗೆ ಪ್ರತಿಬಂಧಕವಾದಾರೆಂಬ ಭೀತಿಯು ಮಾರ್ಲೀಯವರಿಗೆ ಪೂರಾ ಇತ್ತು. ಆದರೆ ತಾವಾಗಿ ಆ ಭೀತಿಯನ್ನು ಕಾಟನ್ ಪ್ರಭೃತಿಗಳಿಗೆ ತಿಳಿಸುವುದು ಅಧಿಕಾರ ಮರ್ಯಾದೆಗೆ ತಕ್ಕುದಾಗಿರಲಿಲ್ಲ. ಆದುದರಿಂದ ಮತ್ತಾರಾದರೂ ಆ ಇಂಡಿಯಾ ಅಭಿಮಾನಿಗಳಾದ ಪಾರ್ಲಿಮೆಂಟು ಸಭಿಕರಿಗೆ ಆಗಾಗ ಸರಿಯಾಗಿ ತಿಳಿವಳಿಕೆ ಕೊಟ್ಟು ಅವರನ್ನು ಉಚಿತಮಾರ್ಗದಲ್ಲಿ ನಡಸಬೇಕಾಗಿತ್ತು. ಈ ಕೆಲಸವನ್ನು ಗೋಖಲೆಯವರು ಕೈಕೊಂಡರು.

ಸ್ವದೇಶೀಯರನ್ನು ಕಾರ್ಯಸಾಧಕ ಮಾರ್ಗದಲ್ಲಿ ನಿಲ್ಲಿಸುವ ಕೆಲಸವೂ ದೊಡ್ಡದಾಗಿತ್ತು. ನಮ್ಮ ಅತಿವೇಗಗಾಮಿಗಳು (ಎಕ್ಸ್‌ಟ್ರೀಮಿಸ್ಟ್) ತಮ್ಮ ಲೇಖನ ಭಾಷಣಗಳಲ್ಲಿ ಸಮಯಾಸಮಯಗಳನ್ನು ಗಣಿಸದೆಯೂ ತಾರತಮ್ಯಗಳನ್ನು ಲಕ್ಷ್ಯದಲ್ಲಿಡದೆಯೂ ಅಧಿಕಾರಿಗಳನ್ನು ದೂಷಿಸುವುದರಿಂದ ಸರಕಾರದ ಕಾಠಿಣ್ಯವು ಹೆಚ್ಚುವುದಲ್ಲದೆ, ವಿರೋಧಿಗಳ ಛಲವು ಬೆಳೆದು, ಪ್ರತಿಕ್ರಿಯೆಯು ಅಸಾಧ್ಯವಾಗಿ, ಇಂಡಿಯಾಕ್ಕೆ ಇರುವ ಕೊಂಚ ಮಂದಿ ಸ್ನೇಹಿತರೂ ಮನಮುರಿದವರಾಗಿ, ಅವರ ಸಹಾಯದಿಂದಲೇ ನಡೆಯಬೇಕಾಗಿದ್ದ ಸುಧಾರಣೆಗಳಿಗೆ ಅಡಚಣೆಯುಂಟಾದೀತೆಂಬ ಭಯಕ್ಕೆ ಬೇಕಾದಷ್ಟು ಕಾರಣವಿತ್ತು. ಈ ಅತಿವೇಗಗಾಮಿಗಳಿಗೆ ತಾಳ್ಮೆ ಸ್ಥೈರಣೆಗಳನ್ನು ಬೋಧಿಸಿ, ಮಿತವೇಗಗಾಮಿಗಳ ಪಕ್ಷವನ್ನು ಬಲಪಡಿಸುವುದೂ ಆಗಿನ ಸಂದರ್ಭಕ್ಕೆ ಅತ್ಯಾವಶ್ಯಕವಾಗಿತ್ತು. ಈ ಕೆಲಸವೂ ಗೋಖಲೆಯವರನ್ನೇ ಹೊಂದಿತ್ತು.

ಹೀಗೆ ಒಂದು ಕಡೆ ತಮ್ಮ ದೇಶದ ನಿಜಸ್ಥಿತಿಯನ್ನು ಕುರಿತು ಉಪನ್ಯಸಿಸುವುದು ; ಮತ್ತೊಂದು ಕಡೆ ಮಂತ್ರಿಗಳೊಡನೆ ಮಿಳಿತರಾಗಿ ಕಾರ್ಯಸಾಧನರೀತಿಯನ್ನು ಪರ್ಯಾಲೋಚಿಸುವುದು ; ಒಂದು ಕಡೆ ಸ್ನೇಹಿತರನ್ನು ಪ್ರೋತ್ಸಾಹಿಸುವುದು ; ಇನ್ನೊಂದು ಕಡೆ ಅವರು ಆತುರಪಟ್ಟು ನಡೆಯದಂತೆ ನೋಡಿಕೊಳ್ಳುವುದು ; ಒಂದುಕಡೆ ರಾಜ್ಯಕ್ರಮದ ಲೋಪದೋಷಗಳನ್ನು ಪ್ರಕಾಶಪಡಿಸುವುದು ; ಇನ್ನೊಂದು ಕಡೆ ದೇಶೀಯರಿಗೆ

ಸಹನೆಯನ್ನೂ ಧೈರ್ಯವನ್ನೂ ಉಪದೇಶಿಸುವುದು—ಈ ವಿವಿಧ ಯುಕ್ತ್ಯನು ಸಂಧಾನಗಳಲ್ಲಿ ಗೋಖಲೆಯವರು ಸಂತತ ಪ್ರಯತ್ನರಾಗಿದ್ದರು. ಅವರು ಮಾಡಿದ ಕಲಸವು ಸಾರ್ವಭೌಮ ಸರಕಾರದ ವರ್ತನೆಯನ್ನು ಎಷ್ಟುಮಾತ್ರ ತಿದ್ದಿ ಸುಮುಖಗೊಳಿಸಿತೆನ್ನುವುದಕ್ಕೆ ಆ ಸರಕಾರದ ಮಂತ್ರಿಗಳಾದ ಮಾರ್ಲೇಯವರು ಬರೆದಿಟ್ಟಿರುವ ಮೇಲಣ ವಾಕ್ಯಗಳೇ ನಿದರ್ಶನಗಳಾಗಿವೆ. ಮತ್ತಾವ ಭಾರತೀಯ ರಾಜ್ಯ ಪರಿಷ್ಕಾರಕನನ್ನೂ ಆ ಮಹನೀಯರು ಅಷ್ಟು ಬಾರಿ ಅಷ್ಟು ಪ್ರಕಾಶವಾಗಿ ಪ್ರಶಂಸಿಸಿಲ್ಲ.

ವಂಗವಿಭಜನವನ್ನು ರದ್ದುಪಡಿಸಿ ಆ ಪ್ರಾಂತವನ್ನು ಪುನಃ ಒಂದು ಗೂಡಿಸುವ ವಿಷಯದಲ್ಲಿಯೂ ತಕ್ಕ ಪ್ರಯತ್ನವನ್ನು ನಡಿಸುವುದಾಗಿ ಮಾರ್ಲೇಯವರು ಗೋಖಲೆಯವರಿಗೆ ಗೋಪ್ಯವಾಗಿ ವಾಗ್ದಾನಮಾಡಿದ್ದರಂತೆ. ಗೋಖಲೆಯವರು ಈ ದೇಶಕ್ಕೆ ಹಿಂದಿರುಗಿದ ಬಳಿಕ, ಅತಿವೇಗ ಪಕ್ಷದ ಪತ್ರಕರ್ತನೊಬ್ಬನನ್ನು ಸೈರಣೆಗೊಳಿಸುವ ಉದ್ದೇಶದಿಂದ ಆ ಗೋಪ್ಯ ವಾಗ್ದಾನವನ್ನು ಆತನಿಗೆ ಅವರು ರಹಸ್ಯದಲ್ಲಿ ಸೂಚಿಸಿದರು. ಆ ಮಹಾಶಯನು ಆ ರಹಸ್ಯವನ್ನು ಇತರರಿಗಿಂತ ಮುಂಚೆ ಪ್ರಕಟಗೊಳಿಸಿದರೆ ತನ್ನ ಪತ್ರಿಕೆಯ ಪ್ರಾಶಸ್ತ್ಯವು ಹೆಚ್ಚುವುದೆಂಬ ಆಶೆಯಿಂದಲೋ, ಇಲ್ಲವೆ ಮಾರ್ಲೇಯವರನ್ನು ಅವರ ಮಾತಿಗೇ ಕಟ್ಟಿಹಾಕಿದಂತಾಗುವುದೆಂಬ ಭ್ರಾಂತಿಯಿಂದಲೋ,—ಆ ರಹಸ್ಯವನ್ನು ಕಾಪಾಡುವೆನೆಂದು ತಾನು ಗೋಖಲೆಯವರಿಗೆ ಕೊಟ್ಟಿದ್ದ ಭಾಷೆಯನ್ನು ಲೆಕ್ಕಿಸದೆ,—ಅದನ್ನು ತನ್ನ (ಇಂಗ್ಲಿಷ್) ಪತ್ರಿಕೆಯಲ್ಲಿ ಪ್ರಕಟಿಸಿಬಿಟ್ಟನು. ಇದರ ಫಲಿತಾಂಶವು ಕಾರ್ಯವಿಘಾತವೇ ಆಯಿತು. ಆ ಪ್ರಕಟನೆಯು ಇಂಡಿಯದ ವಿರೋಧಿಗಳನ್ನು ಎಬ್ಬಿಸಿ ರೇಗಿಸಿತು. ಅವರು ಆಗ್ಗೆ ಪ್ರಬಲರಾಗಿದ್ದುದರಿಂದ ಮಾರ್ಲೇಯವರು ಆ ಯೋಚನೆಯನ್ನೇ ಬದಿಗಿಟ್ಟು, ಅದು ತಮ್ಮ ಕಾಲದಲ್ಲಿ ಸಾಗದೆಂದು ಬಹಿರಂಗವಾಗಿ ಹೇಳಬೇಕಾಯಿತು. ಈ ಸಂಗತಿಯು ರಾಜಕೀಯ ವ್ಯಾಪಾರಗಳು ಎಷ್ಟು ಸೂಕ್ಷ್ಮವಾದುವು, ಅವುಗಳ ಚಾಲಕರು ನಯ, ಇಂಗಿತಜ್ಞತೆ, ಮಿತಭಾಷಿತೆ ಮುಂತಾದ ಗುಣಗಳನ್ನು ತೋರದಿದ್ದರೆ ಎಷ್ಟು ಹಾನಿಯಾಗಬಹುದು—ಎಂಬುದಕ್ಕೆ ಒಳ್ಳೆಯ ಉದಾಹರಣೆಯಾಗಿದೆ.

ರಾಜಕೀಯ ಪರಿಷ್ಕ್ರಿಯೆಯ ವಿಷಯವು ತಮ್ಮ ಸಮಾಲೋಚನೆಯಲ್ಲಿರುವುದೆಂದು ೧೯೦೭ನೆಯ ಇಸವಿಯ ಮಾರ್ಚಿ ತಿಂಗಳಲ್ಲಿ ವೈಸರಾಯ್' ಲಾರ್ಡ್ ಮಿಂಟೋ ಅವರು ತಮ್ಮ ಶಾಸನ ಸಭೆಯಲ್ಲಿ ಪ್ರಕಾಶವಾಗಿ ಹೇಳಿದ್ದರು. ಅದು ಯಾವ ರೀತಿ ಪರಿಣಮಿಸುವುದೋ ನೋಡಬೇಕೆಂದು ದೇಶೀಯರೂ, ಅವರಿಗೆ ಪ್ರತಿವಾದಿಗಳಾಗಿ ಈ ದೇಶದಲ್ಲಿ ಸ್ವಾಸ್ಥ್ಯಗಳನ್ನು ಕಲ್ಪಿಸಿಕೊಂಡಿರುವ ವಿದೇಶೀಯರೂ ಸಹ ಕುತೂಹಲಿಗಳಾಗಿದ್ದರು. ಗದ್ದಲವನ್ನು ಹೆಚ್ಚಿಸಿದಷ್ಟೂ ತಮ್ಮ ಪಕ್ಷಕ್ಕೆ ಅನುಕೂಲವು ಹೆಚ್ಚುವುದೆಂಬ ಭಾವನೆಯಿಂದ, ಕೆಲವುಮಂದಿ ದೇಶಾಭಿಮಾನಿಗಳು ಕೋಪಾಟೋಪದ ಭಾಷಣಗಳಿಂದಲೂ ಲೇಖನಗಳಿಂದಲೂ ದೇಶೀಯರನ್ನು ಹುರಿದುಂಬಿಸಿ, ಬ್ರಿಟಿಷ್ ಸರಕಾರವು ಯಾವ ಸುಧಾರಣೆಯನ್ನೂ ಮಾಡತಕ್ಕುದಲ್ಲವೆಂದೂ, ಅದು ಬರಿಯ ಒಳ್ಳೆಯ ಮಾತುಗಳಿಂದ ಕಾಲಹರಣಮಾಡತಕ್ಕುದೆಂದೂ, ಜನರು ಅದರ ಪ್ರಸಾದಕ್ಕಾಗಿ ಕಾದಿರದೆ, ಸ್ವತಂತ್ರ ಮಾರ್ಗವನ್ನವಲಂಬಿಸಿ, ಅದು ತಾನಾಗಿ ವಿಧೇಯತೆಯಿಂದ ಬಗ್ಗಿ ಬಂದು ತಮ್ಮ ಮಾತನ್ನು ಕೇಳುವಂತೆ ಮಾಡಿಸಬಲ್ಲ ಉಪಾಯವನ್ನು ದೇಶೀಯರು ಯೋಚಿಸಬೇಕೆಂದೂ ಸಾರುತ್ತಿದ್ದರು. ಇದಕ್ಕೆ ಪ್ರತಿಯಾಗಿ, ಆಂಗ್ಲೇಯ ಪತ್ರಿಕೆಗಳವರು ಇಂಡಿಯದ ಪ್ರಜಾ ಪ್ರಮುಖರನ್ನು ಅವರು ಇಂಗ್ಲಿಷ್ ಓದಿದ ನಾಲ್ಕಾರು ಮಂದಿ ಸ್ವಾರ್ಥಪರರೇ ವಿನಾ ನಿಜವಾದ ಪ್ರಜಾಬಂಧುಗಳೇನೂ ಅಲ್ಲವೆಂದು ಅಲ್ಲಗಳೆಯುತ್ತಲೂ, ಅವರು ಹೆಚ್ಚಿನ ರಾಜಕೀಯಾಧಿಕಾರಗಳಿಗೆ ಅರ್ಹರಲ್ಲವೆನ್ನುತ್ತಲೂ, ಅವರಿಗೆ ಪ್ರತಿಷ್ಠೆಕೊಡುವುದು ಬ್ರಿಟಿಷ್ ಚಕ್ರಾಧಿಪತ್ಯಕ್ಕೇ ಹಾನಿಕರವೆಂದು ವಾದಿಸುತ್ತಲೂ ಇದ್ದರು. ಈ ಎರಡು ಪಕ್ಷಗಳಿಂದಲೂ ಕೆಲಸ ಕೆಡದಂತೆ ಮಾಡಲು ಶ್ರಮಪಟ್ಟವರು ಗೋಖಲೆಯವರು. ತಮ್ಮ ಶ್ರಮವು ಸಾರ್ಥಕವಾಗಿ, ಇಂಡಿಯದ ರಾಜ್ಯವ್ಯವಸ್ಥೆಯು ಸಂಸ್ಕಾರವನ್ನು ಪಡೆದು, ಅದರಿಂದ ಪ್ರಜಾಧಿಕಾರವು ಸ್ವಲ್ಪಮಟ್ಟಿಗಾದರೂ ಸಿದ್ಧಿಸೀತೆಂಬ ಭರವಸೆಯು ಅವರಿಗೆ ಇಂಗ್ಲೆಂಡಿನಲ್ಲಿ ತೋರಿಬಂದ ಕೂಡಲೆ, ಅವರು— ಇನ್ನು ತಮ್ಮ ಜನರು ಆ ಸಂಸ್ಕಾರಗಳನ್ನು ಯಾವರೀತಿ ಪರಿಗ್ರಹಿಸಬೇಕು, ಅವುಗಳಿಂದ ಲಭ್ಯವಾಗತಕ್ಕ ಅಧಿಕಾರಗಳನ್ನು ಅವರು ಹೇಗೆ ಉಪಯೋಗ

ಪಡಿಸಿಕೊಳ್ಳಬೇಕು—ಎಂಬ ವಿಷಯಗಳನ್ನು ಕುರಿತು ಅವರಿಗೆ ತಕ್ಕ ತಿಳಿವಳಿಕೆ ಕೊಡಲು ಸ್ವದೇಶಕ್ಕೆ ಬಂದರು.

ಏತನ್ಮಧ್ಯೆ, ಮಿಂಟೋ ವೈಸ್‌ರಾಯವರಿಗೂ ಮಾರ್ಲೀ ಸೆಕ್ರೆಟರಿಯವರಿಗೂ ಬಹುದಿನಗಳಿಂದ ಸುಧಾರಣೆಗಳ ವಿಷಯದಲ್ಲಿ ಪತ್ರಿಕಾ ಮುಖೇನ ನಡೆಯುತ್ತಿದ್ದ ಪ್ರಸಂಗವು ೧೯೦೮ನೆಯ ಇಸ್ವಿ ನವಂಬರ್ ತಿಂಗಳಲ್ಲಿ ಸಿದ್ಧಾಂತಕ್ಕೆ ಬಂದಿತು. ಅದರಂತೆ ಆದ ತೀರ್ಮಾನಗಳನ್ನು ಮಾರ್ಲೀಯವರು ಮಿಂಟೋ ಅವರಿಗೆ ಆ ತಿಂಗಳು ೨೭ನೆಯ ತಾರೀಖಿನಲ್ಲಿ ಬರೆದ ಪ್ರಕಟ ಪತ್ರದಲ್ಲಿ ವಿವರಿಸಿದರು. ಆ ತೀರ್ಮಾನಗಳು ಶಾಸನ ರೂಪವನ್ನು ತಾಳಿ, ಪಾರ್ಲಿಮೆಂಟು ಸಭೆಯಲ್ಲಿ ಚರ್ಚೆಗೆ ಬಂದು ಅಂಗೀಕೃತ ವಾಗಬೇಕಾದ ಕೆಲಸವು ಇನ್ನೂ ಬಾಕಿಯಿತ್ತು. ಅದು ಹಾಗೆ ಆಗುವುದಕ್ಕೆ ಮೊದಲು ಇಂಡಿಯಾ ದೇಶದ ಜನರು ಆ ತೀರ್ಮಾನಗಳ ವಿಷಯದಲ್ಲಿ ಸಮ್ಮತಿಯನ್ನು ತೋರಿಸುವುದು ಆವಶ್ಯಕವಾಗಿತ್ತು. ಇಂಡಿಯಾ ದೇಶಕ್ಕೆ ವಿರೋಧಿಗಳೂ ಉದಾಸೀನರೂ ಆದವರು ಪಾರ್ಲಿಮೆಂಟಿನಲ್ಲಿ ಅನೇಕ ಮಂದಿ ಇದ್ದರಲ್ಲವೆ? ಇಂಡಿಯಾ ದೇಶದ ಜನರು ಮಾರ್ಲೀಯವರ ಸುಧಾರಣೆಗಳ ವಿಷಯದಲ್ಲಿ ವಿಮುಖರಾಗಿರುವರೆಂದು ಹೇಳಲು ಅಂಥಾ ಪಾರ್ಲಿಮೆಂಟು ಸಭಿಕರಿಗೆ ಅವಕಾಶ ದೊರೆತಿದ್ದಿದ್ದರೆ, ಮಾರ್ಲೀಯವರು ಮಾಡಿಸಬೇಕೆಂದಿದ್ದ ಕಾನೂನಿಗೆ ಅವರು ಅಡ್ಡಹಾಕುವುದು ಖಂಡಿತವಾಗಿತ್ತು. ಹಾಗಿದ್ದಕಾರಣ, ಮಾರ್ಲೀಯವರ ಪ್ರಯತ್ನವು ಸಂಪೂರ್ಣವಾಗಿ ನೆರವೇರಬೇಕಾಗಿದ್ದರೆ, ಅವರು ವೈಸ್‌ರಾಯರ ಮೂಲಕ ಪ್ರಕಟಗೊಳಿಸಿದ್ದ ರಾಜ್ಯ ಪರಿಷ್ಕರಣೆಯ ಸೂಚನೆಗಳನ್ನು ಭಾರತೀಯರು ತಮ್ಮ ಜನಪದ ಸಭೆಯ ಮೂಲಕವೂ ಇತರ ವಿಧಗಳಲ್ಲಿಯೂ ಅನುಮೋದಿಸಿ, ಮಾರ್ಲೀಯವರಿಗೆ ಉಪೋದ್ಬಲಕೊಡುವುದು ಆವಶ್ಯಕವಾಗಿತ್ತು. ತಮ್ಮ ಜನರಿಂದ ಆ ಕೆಲಸವನ್ನು ಮಾಡಿಸುವುದೇ ಗೋಖಲೆಯವರಿಗೆ ಆಗ ಇದ್ದ ಕರ್ತವ್ಯ.

ಇಂಡಿಯಾ ದೇಶದ ರಾಜ್ಯವ್ಯವಸ್ಥೆಯ ಪರಿಷ್ಕಾರಗಳನ್ನು ಕುರಿತು ಗೋಖಲೆಯವರೊಡನೆ ಮಾರ್ಲೀಯವರು ಕಡೆಯಸಲ ಆಲೋಚನೆಮಾಡಿದುದು ೧೯೦೮ನೆಯ ಡಿಸೆಂಬರ್ ೪ರ ಸುಮಾರಿನಲ್ಲಿ. ಮಾರ್ಲೀಯವರು

ಆ ತಾರೀಖಿನಲ್ಲಿ ವೈಸ್‌ರಾಯ್ ಮಿಂಟೋ ಯವರಿಗೆ ಬರೆದ ಕಾಗದದಲ್ಲಿ ಈ ರೀತಿ ಹೇಳಿರುವರು :—

"ಬುಧವಾರದ ದಿನ ಗೋಖಲೆಯವರನ್ನು ಬೀಳ್ಕೊಡುವ ಮಾತು ಕಥೆಗಳಾದುವು. ಅವರು ತಾವು ಪುನಃ ಇಂಗ್ಲೆಂಡಿಗೆ ಬರುತಕ್ಕದಿಲ್ಲವೆಂದು ಯೋಚಿಸಿಕೊಂಡಿರುವರು. ಇಂಡಿಯಾ ದೇಶಕ್ಕಾಗಿ ತಾವು ಮಾಡಬೇಕಾದ ಕೆಲಸವು ಸದ್ಯಃ ಇಲ್ಲಿ ಇನ್ನು ಏನೂ ಇಲ್ಲ; ತಮ್ಮ ದೇಶದಲ್ಲಿಯೇ ಮಾಡಬೇಕು ; ಇದೇ ಸಂಧಿ ಸಮಯ ; ನೀವೂ ನಾನೂ ಮಾಡಿರುವ ಪ್ರಯತ್ನದಿಂದ ಏನೂ ಫಲಿಸದಿದ್ದರೆ, ಅತಿವೇಗಪಕ್ಷದವರು ತಮ್ಮಿಷ್ಟ ಬಂದಂತೆ ನಡಿಸುವರು ; ಅವ್ಯವಸ್ಥೆ, ಅಪಾಯ, ವಿನಾಶ ಇವು ತಪ್ಪವು. (ಹೀಗೆ ಗೋಖಲೆಯವರ ಮಾತು.) ಒಟ್ಟಿನಮೇಲೆ, ಗೋಖಲೆಯವರ ಧ್ವನಿಯು ನನ್ನನ್ನಾಕರ್ಷಿಸಿ ನನ್ನ ಮನಸ್ಸನ್ನು ಹಿಡಿದಿದೆ. ನಾವು ಮಾಡಬೇಕೆಂದಿರುವ ಪರಿಷ್ಕರಣ (ರಿಫಾರಂ=ಸುಧಾರಣೆ) ಗಳನ್ನು ಜನಪದ ಸಭೆಯು ಚೆನ್ನಾಗಿ ಅಂಗೀಕರಿಸುವುದೆಂದು ಅವರು ನಂಬಿಕೆ ಕೊಡುತ್ತಾರೆ. ಆ ಪರಿಷ್ಕಾರಗಳ ಬಗೆಯೆಂತಹುದೆಂಬುದನ್ನು ನಾನು ಅವರಿಗೆ ಖಂಡಿತವಾದ ಮಾತುಗಳಿಂದ ವಿವರಿಸಿಲ್ಲ ; ಆದರೆ ಅವು ಯಾವರೀತಿ ಇರಬಹುದೆಂಬುದನ್ನು ಊಹಿಸುವುದು ಅಂತಹ ಅನುಭವಶಾಲಿಗೆ ಸುಲಭವಲ್ಲವೆ ?"

ಗೋಖಲೆಯವರು ಸ್ವದೇಶಕ್ಕೆ ಹಿಂದಿರುಗಿದ ಕೆಲವು ದಿನಗಳಲ್ಲಿ— ೧೯೦೮ನೆಯ ಡಿಸೆಂಬರ್ ೨೮ರಲ್ಲಿ—ಜನಪದ ಮಹಾಸಭೆಯ ೨೩ನೆಯ ಸಮ್ಮೇಳನವು ಮದ್ರಾಸಿನಲ್ಲಿ ಜರುಗಿತು. ಡಾಕ್ಟರ್ ಸರ್ ರಾಷ್ ಬೆಹಾರಿ ಘೋಷ್ ಎಂಬ ಪ್ರಸಿದ್ಧ ವಂಗೀಯರು ಅಗ್ರಾಸನವನ್ನಲಂಕರಿಸಿದ್ದರು. ಆಗ ಗೋಖಲೆಯವರು ಮಾರ್ಲೇ ಮಂತ್ರಿಗಳು ಸೂಚಿಸಿದ್ದ ಪರಿಷ್ಕಾರ ಪ್ರಕ್ರಿಯೆಯನ್ನು ಕುರಿತು ವಿಸ್ತಾರವಾಗಿ ಉಪನ್ಯಸಿಸಿ, ಆ ಮಂತ್ರಿವರ್ಯರ ಪಕ್ಷವನ್ನು ಬಲವತ್ತರಪಡಿಸಿದರು.

ಮಾರ್ಲೇಯವರು ಮಾಡಿಸಿದ ಪರಿಷ್ಕಾರಗಳು ಎಂತಹುವೆಂಬುದನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸಬೇಕಾಗಿದೆ. ಅವುಗಳಲ್ಲಿ ಮುಖ್ಯವಾದುವು ಈ ಕೆಳಗಿನವು :—

(೧) ಬೊಂಬಾಯಿ, ಮದ್ರಾಸು, ಬಂಗಾಳಾ ಮೊದಲಾದ ಪ್ರಾಂತೀಯ ಶಾಸನ (ಲೆಜಿಸ್ಲೆಟಿವ್) ಸಭೆಗಳನ್ನು ದೊಡ್ಡದುಮಾಡಿ, ಅವುಗಳಲ್ಲಿ ಪ್ರಜೆಗಳಿಂದ ಚುನಾಯಿಸಲ್ಪಟ್ಟ ಮತ್ತು ಸರಕಾರದಿಂದ ನಿಯಮಿಸಲ್ಪಟ್ಟ ಪ್ರಜಾವರ್ಗೀಯ (ನಾನ್-ಅಫಿಷಿಯಲ್) ಸದಸ್ಯರ ಒಟ್ಟು ಸಂಖ್ಯೆಯೇ (ಮೆಜಾರಿಟಿ) ಅಧಿಕಪಕ್ಷವಾಗುವಂತೆ ಮಾಡುವುದು.

(೨) ಗವರ್ನರ್-ಜನರಲ್ ಅವರ ಸಾರ್ವದೇಶೀಯ ಶಾಸನಸಭೆಯನ್ನೂ ದೊಡ್ಡದು ಮಾಡಿ, ಅದರಲ್ಲಿಯೂ ಪ್ರಜೆಗಳಿಂದ ಆರಿಸಲ್ಪಟ್ಟವರ ಸಂಖ್ಯೆಯನ್ನು ಹೆಚ್ಚಿಸುವುದು.

(೩) ಸಾರ್ವಜನಿಕ ವಿಷಯಗಳನ್ನು ಚರ್ಚೆಗೆ ತಂದು ಸರಕಾರಕ್ಕೆ ಸಲಹೆಗಳನ್ನು ಕೊಡುವ, ಮತ್ತು ರಾಜ್ಯದ ಆಯವ್ಯಯ ಪಟ್ಟಿಕೆಯನ್ನೂ ನಾನಾ ಇಲಾಖೆಗಳ ಕಾರ್ಯ ಕಲಾಪಗಳನ್ನೂ ಪರೀಕ್ಷಿಸಿ ಜನಾಭಿಮತವನ್ನು ಸೂಚಿಸುವ ಅಧಿಕಾರಗಳನ್ನು ಶಾಸನ ಸಭೆಗಳಿಗೆ ಕೊಡುವುದು.

(೪) ಸಾರ್ವದೇಶೀಯ ಸರಕಾರದ ಮತ್ತು ಪ್ರಾಂತೀಯ ಸರಕಾರಗಳ— ಎಂದರೆ ವೈಸ್‌ರಾಯ್ ಮತ್ತು ಗವರ್ನರುಗಳ (ಎಕ್ಸಿಕ್ಯುಟಿವ್ ಕೌನ್ಸಿಲ್) ಕಾರ್ಯ ನಿರ್ವಾಹಕ ಮಂಡಲಿಗಳಲ್ಲಿ ಒಬ್ಬೊಬ್ಬ ಭಾರತೀಯನನ್ನಾದರೂ ಸೇರಿಸಿಕೊಳ್ಳುವುದು.*

(೫) ಪ್ರಾಂತೀಯ ಸರಕಾರಗಳ ಆಯವ್ಯಯ ಪಟ್ಟಿಕೆಯನ್ನು ತಯಾರುಮಾಡು ವುದರಲ್ಲಿ ಪ್ರಜಾವರ್ಗೀಯರ ಸಹಾಯವನ್ನು ತೆಗೆದುಕೊಳ್ಳುವುದು.

(೬) ಲೋಕಲ್ ಸೆಲ್ಫ್-ಗವರ್ನ್‌ಮೆಂಟಿನ, ಅಥವಾ ಪ್ರಾದೇಶಿಕ ಸ್ವರಾಜ್ಯದ, ಏರ್ಪಾಟುಗಳನ್ನು ವಿಸ್ತರಿಸಿ, ಸ್ಥಳೀಯ ಕಾರ್ಯಗಳ ಯಾಜಮಾನ್ಯವನ್ನು ಸ್ಥಳಿಕರಿಗೇ ಸಂಪೂರ್ಣವಾಗಿ ವಹಿಸಿಕೊಡುವುದು.

ಈ ಪರಿಷ್ಕಾರ ಪ್ರಕ್ರಮವನ್ನು ಕುರಿತು ಮಾತನಾಡುವ ಕಾಲದಲ್ಲಿ ಗೋಖಲೆಯವರಿಂದ ಹೊರಟ ಕೆಲವು ವಾಕ್ಯಗಳು ಸ್ಮರಣೀಯಗಳಾಗಿವೆ. ಅವುಗಳ ಅನುವಾದವಿದು :—

ಈ ಮೇಲಿನ ಏರ್ಪಾಟುಗಳಲ್ಲಿ ನಮ್ಮ ರಾಜಕೀಯ ಪರಿಪುಷ್ಟಿಗೆ ಬೇಕಾದಷ್ಟು ಅವಕಾಶವಿದೆ. ನಾವು ಬೆಳೆವಣಿಗೆ ಹೊಂದಿ ನಮ್ಮ ಜವಾಬ್ದಾರಿಗಳನ್ನು ಸರಿಯಾಗಿ ನಡೆಯಿಸುತ್ತ ಹೋದಹಾಗೆಲ್ಲಾ, ಜವಾಬ್ದಾರೀ ಸರಕಾರವೆಂದು ಹೇಳುವ ವ್ಯವಸ್ಥೆಯ ಕಡೆಗೆ ನಾವು ಹೆಚ್ಚು ಹೆಚ್ಚಾಗಿ ಮುಂಬರಿಯಲಾಗುವುದೆಂದು ನನಗೆ ನಿಸ್ಸಂದೇಹವಾಗಿದೆ. ಟೀಕೆಮಾಡುವವರ ಸ್ಥಿತಿಯಿಂದ ಈಗ ನಾವು ಸರಕಾರದೊಡನೆ ಜವಾಬ್ದಾರೀ "ಸಹಕಾರ" ವನ್ನು ನಡಿಸುವ ಸ್ಥಿತಿಗೆ ಬರುವವರಾಗಿದ್ದೇವೆ. ಇನ್ನು ಜವಾಬ್ದಾರೀ "ಸಹಕಾರ" ದಿಂದ ಜವಾಬ್ದಾರೀ "ಸರಕಾರ" ಕ್ಕೆ ಏರುವುದು ಮಿಕ್ಕಿರುತ್ತದೆ. ಅದು ಸಾವಕಾಶದ ಮತ್ತು ಕಷ್ಟ ಸಾಧ್ಯವಾದ ಮೆಟ್ಟಲು. ಹಾಗಿದ್ದರೂ ಅದೂ ಒಂದಾನೊಂದು ದಿನ ಬಂದೇ ಬರುವುದು. (ಸಭಿಕರ ಚಪ್ಪಾಳೆ). ಈಗ ಇಂಡಿಯಾ ಸರಕಾರದವರೂ ಸೆಕ್ರೆಟರಿಯವರೂ

* ಮಾರ್ಲೀಯವರು ತಮ್ಮ ಸ್ವಂತ ಪದವಿಗೆ ಅನುಬಂಧವಾಗಿ ಸೇರಿದ್ದ ಮಂತ್ರಾಲೋಚನ ಸಭೆಗೂ ಇಬ್ಬರು ಭಾರತೀಯರನ್ನು ೧೯೦೭ರಲ್ಲಿಯೇ ತೆಗೆದುಕೊಂಡಿದ್ದರು.

ಕೊಟ್ಟಿರುವ ಈ ಮೇಲಣ ವಿಶಾಲವಾದ ಮತ್ತು ಉದಾರವಾದ ಸಂಸ್ಕಾರಗಳ ವಿಷಯದಲ್ಲಿ ಅವರು ಬಯಸುತ್ತಿರುವಂತೆ ನಾವು ಅಂಗೀಕಾರ ತೋರಬೇಕಾಗಿದೆ..... .... .... ....'

ನಾವು ಎರಡು ಸಂಗತಿಗಳನ್ನು ಜ್ಞಾಪಕದಲ್ಲಿಡಬೇಕು. ನಮ್ಮ ಜೀವನಕಾರ್ಯವು ಚೊಕ್ಕಟವಾಗಿರುವ (ಸ್ಲೇಟ್) ಹಲಗೆಯಮೇಲೆ ಬರೆಯುವಂತೆ ಅಲ್ಲವೆಂಬುದು ಮೊದಲನೆಯದು. ಆ ಹಲಗೆಯಮೇಲೆ ಹಿಂದಿನವರು ಬರೆದ ಮಾತುಗಳು ಕೆಲವು ಇವೆ. ನಾವು ಅವುಗಳ ಜೊತೆಗೆ ಈಗ ಬೇರೆ ಮಾತುಗಳನ್ನು ಸೇರಿಸಿ ಉಚಿತಾರ್ಥವನ್ನು ಕೊಡುವ ಸಂಪೂರ್ಣವಾಕ್ಯಗಳನ್ನು ಮಾಡಬೇಕಾಗಿದೆ. ಇನ್ನು ಎರಡನೆಯ ಸಂಗತಿಯಾವುದೆಂದರೆ, ನಾವು ಈಗ ಯಾವ ಯಾವುದನ್ನು ಅಪೇಕ್ಷಿಸುತ್ತೇವೆಯೋ ಅದೆಲ್ಲವೂ ನಮಗೆ ಈಗಲೇ ದೊರೆಯಬಹುದಾದದ್ದೆಂದಾಗಲಿ, ಅಥವಾ ನಮ್ಮ ಯೋಗ್ಯತೆಗೆ ಸಲ್ಲತಕ್ಕದೆಂದಾಗಲಿ, ಅಥವಾ ದೊರೆತರೆ ಅದೆಲ್ಲವನ್ನೂ ಉಳಿಸಿಕೊಳ್ಳಲು ನಮ್ಮಿಂದ ಆದೀತೆಂದಾಗಲಿ ಹೇಳುವ ಹಾಗಿಲ್ಲ—ಎಂಬುದು. ಹೀಗಿರುವಲ್ಲಿ, ಸದ್ಯಕ್ಕೆ ಅಸಾಧ್ಯಗಳಾಗಿರುವ ಮನೋರಥಗಳಿಗೋಸ್ಕರ ನಾವು ಹಾರಾಡದೆ, ಈಗ ನಮಗೆ ದೊರೆತಿರುವ ಅವಕಾಶಗಳನ್ನು ಉಪೇಕ್ಷಿಸದೆ ಇರೋಣ. ಈಗ ಲಭಿಸಿರುವುದರಿಂದಲೇ ನಾವು ತೃಪ್ತರಾಗಿರಬೇಕೆಂದು ಯಾರೂ ಆಶಿಸುವುದಿಲ್ಲ. ಆದರೆ ಇನ್ನೂ ಹೆಚ್ಚಿನ ಜವಾಬ್ದಾರಿಗಳನ್ನು ಬಯಸುವುದಕ್ಕಿಂದ ಮುಂಚೆ ಈಗ ಬಂದಿರುವ ಉತ್ತರಭಾರವನ್ನು ವಹಿಸಬಲ್ಲೆವೆಂಬುದನ್ನು ನಾವು ತೋರಿಸಬೇಕಾಗಿದೆ. ನಮ್ಮ ಜನರ ಬೆಳೆವಣಿಗೆಗೆ ಯಾವ ಅಡ್ಡಿಯೂ ಇರಕೂಡದೆಂಬುದೇ ನನ್ನ ಆಶಯವೆಂಬುದನ್ನು ಎಷ್ಟೋ ಸಾರಿ ಹೇಳಿದ್ದೇನೆ. ಇತರ ದೇಶದ ಸ್ತ್ರೀ ಪುರುಷರು ಪಡೆದಿರುವ ಉನ್ನತ ದಶೆಯನ್ನೇ ನಮ್ಮ ದೇಶದವರೂ ಪಡೆಯಬೇಕೆಂಬುದೇ ನನ್ನ ಮನೋಗತ. ಆದರೆ ಈಗ ನಮಗೆ ಪ್ರಾಪ್ತವಾಗಿರುವ ಉತ್ತರಭಾರವನ್ನು ಚೆನ್ನಾಗಿ ನಿರ್ವಹಿಸುವುದೊಂದೇ ನಮ್ಮ ಮುಂದಿನ ಅಭಿವೃಧ್ಧಿಗೆ ಇರತಕ್ಕ ಮಾರ್ಗ. ಇದನ್ನು ಚೆನ್ನಾಗಿ ನಿರ್ವಹಿಸಿದಲ್ಲದೆ ಇದಕ್ಕಿಂತ ಗುರುತರವಾದ ಅಧಿಕಾರಭಾರಕ್ಕಾಗಿ ನಾವು ಆಶಿಪಡಲಾಗದು.

ಮಾರ್ಲೆಯವರ ರಾಜ್ಯಾಂಗ ಸಂಸ್ಕಾರಗಳನ್ನೊಳಗೊಂಡ ಶಾಸನವು ೧೯೦೯ನೆಯ ಮೇ ತಿಂಗಳಲ್ಲಿ ಪಾರ್ಲಿಮೆಂಟಿನಿಂದ ಅಂಗೀಕೃತವಾಗಿ, ಲಾರ್ಡ್ ಮಿಂಟೋ ಅವರ ವೈಸ್‌ರಾಯಿತನದ ಕಡೆಯ ವರ್ಷದಲ್ಲಿ ಈ ದೇಶದಲ್ಲಿ ಜಾರಿಗೆ ಬಂದಿತು. ಆ ಏರ್ಪಾಟುಗಳಿಂದ ಬ್ರಿಟಿಷ್ ಇಂಡಿಯದ ಎಲ್ಲಾ ಭಾಗಗಳಲ್ಲಿಯೂ ರಾಜ್ಯಭಾರಕ್ರಮವು ತಕ್ಕಮಟ್ಟಿಗೆ ಉತ್ತಮಗೊಂಡು, ಸರಕಾರದ ನಡೆವಳಿಕೆಗಳು ಪ್ರಜಾಭಿಪ್ರಾಯವನ್ನು ಹಿಂದಿಗಿಂತ ಹೆಚ್ಚಾಗಿ ಅನುಸರಿಸಲು ಮಾರ್ಗವಾಯಿತು. ಆ ಸುಧಾರಣೆಗಳು ಈಚೆಗೆ

೧೯೧೯ನೆಯ ಇಸವಿಯಲ್ಲಿ ನಡೆದ ಮಾಂಟೆಗು-ಚೆಮ್ಸ್‌ಫೊರ್ಡ್ ಸಂಸ್ಕಾರಗಳಲ್ಲಿ ಲೀನವಾಗಿ ಹೋಗಿವೆ. ಇನ್ನಿಷ್ಟರಲ್ಲಿಯೇ ಈ ೧೯೧೯ ರ ಸಂಸ್ಕಾರಗಳೂ ಇನ್ನೂ ಹೊಸ ಸಂಸ್ಕಾರಗಳಲ್ಲಿ ಲಯಹೊಂದಬೇಕಾದೀತೆಂದು ಈಗ (೧೯೩೩) ತೋರುತ್ತದೆ. ರಾಜಕೀಯ ವ್ಯವಸ್ಥೆಗಳ ಗತಿಯೇ ಹೀಗೆ. ಯಾವ ಒಂದು ಏರ್ಪಾಟೂ ಸಾರ್ವಕಾಲಿಕವಾಗಿ ಏಕರೂಪದಲ್ಲಿ ನಿಂತಿರುವುದಿಲ್ಲ. ಆಗಾಗ, ಒಂದು ಅಂಗದಲ್ಲಲ್ಲದಿದ್ದರೆ ಇನ್ನೊಂದರಲ್ಲಿ, ಮಾರ್ಪಾಟು ಹೊಂದುತ್ತಿರುವುದೇ ರಾಜ್ಯಸಂಸ್ಥೆಯ ಸ್ವಭಾವ. ಗೋಖಲೆಯವರು ಸಂಪಾದಿಸಿದ ಸಂಸ್ಕಾರಗಳು ಈಗ ಅಂತರ್ಧಾನವಾಗಿದ್ದರೇನು? ಅವುಗಳಿಂದಾದ ಪ್ರಯೋಜನವು ನಮ್ಮ ದೇಶದ ಜೀವನದಲ್ಲಿ ಸೇರಿಹೋಗಿಲ್ಲವೆ? ಇಂದು ನಾವು ಮೃಷ್ಟಾನ್ನವನ್ನು ಉಣ್ಣುತ್ತಿದ್ದರೂ ನಿನ್ನೆ ನಾವು ಹಸಿದಿದ್ದಾಗ ನಮಗೆ ಸಾಮಾನ್ಯವಾದ ಅಡಿಗೆಯನ್ನು ಮಾಡಿ ಬಡಿಸಿದವರನ್ನು ಅಲ್ಲಗಳೆಯಬಹುದೆ? ಇಂದು ನಾವು ಉಪ್ಪರಿಗೆಯ ಮೇಲಿರುವೆವೆಂದು ಮೊನ್ನೆ ಅದಕ್ಕೆ ಮೆಟ್ಟಲು ಕಟ್ಟಿದವರನ್ನು ಮರೆಯಬಹುದೆ? ಭಾರತೀಯರ ಸ್ವಾತಂತ್ರ್ಯ ಸೌಧಕ್ಕೆ ಈಗಿನವರು ನಿರ್ಮಿಸಬೇಕೆಂದಿರುವ ಸೋಪಾನ ಪಂಕ್ತಿಗೆ ತಳದ ಸಾಲನ್ನಿಟ್ಟು ದಾರಿ ತೋರಿದ ಶಿಲ್ಪಿವರ್ಯರಲ್ಲಿ ಗೋಖಲೆಯವರೂ ಮಾರ್ಲೀಯವರೂ ಎಂದಿಗೂ ಮರೆಯಲ್ಪಡತಕ್ಕವರಲ್ಲ.

---

## ಪ್ರಕರಣ ೬—ಯುಕ್ತಿಸಂಧಾನ

ಗೋಖಲೆಯವರ ಕಾರ್ಯಪ್ರಕಾರ—ಮೂರು ಬಗೆಯ ಪ್ರಕೃತಿಗಳು
—ಮಿತವರ್ತನೆಯ ಗುಣಗಳು

ಗೋಖಲೆಯವರ ಕಾರ್ಯಪ್ರಕಾರವನ್ನು ವರ್ಣಿಸುವುದಕ್ಕೆ ಇದು ತಕ್ಕ ಸಂದರ್ಭವಾಗಿದೆ. ಜನರಲ್ಲಿ ಸಾಮಾನ್ಯವಾಗಿ ಮೂರು ತೆರದ ಸ್ವಭಾವಗಳವರುಂಟು. ಕೆಲವರು ಲೋಕದಲ್ಲಿರುವ ಕೆಡಕು ಕುಂದಕಗಳನ್ನು ಹೋಗಲಾಡಿಸಲು ನಾವು ಏನನ್ನೂ ಮಾಡಲಿಕ್ಕಾಗುವುದಿಲ್ಲವೆನ್ನುವರು; ಇನ್ನು ಕೆಲವರು ಎಲ್ಲ ಕೆಡಕು ಕುಂದಕಗಳನ್ನೂ ನಾವು ಮನಸ್ಸು ಮಾಡಿದಾಕ್ಷಣವೇ ನಿಶ್ಶೇಷವಾಗಿ ಹೋಗಲಾಡಿಸಲಾಗುವುದೆನ್ನುವರು; ಮತ್ತೆ ಕೆಲವರು—

ಅತಿ ಸ್ವಲ್ಪ ಮಂದಿ ಮಾತ್ರ—ಕುಂದಕ ಕೆಡಕುಗಳನ್ನು ಬಹುದಿನಗಳ ಪ್ರತೀಕಾರ ಪ್ರಯತ್ನಗಳಿಂದ,—ತಾಳ್ಮೆಯೊಡನೆ ಮಾಡುವ ಉಪಾಯ ಗಳಿಂದ,—ಸ್ವಲ್ಪ ಸ್ವಲ್ಪವಾಗಿ ಕಡಮೆಮಾಡಲಾದೀತೆನ್ನುವರು. ಮೊದಲನೆಯ ಬಗೆಯವರು ಯಾವ ಪ್ರಯತ್ನವನ್ನೂ ಮಾಡದೆ ಇದ್ದ ಸ್ಥಿತಿಯಲ್ಲಿಯೇ "ಕುಳಿತಿರ"ಬೇಕೆನ್ನುವರು; ಎರಡನೆಯ ಬಗೆಯವರು ಹಿಂದು ಮುಂದು ನೋಡದೆ "ಓಡು"ತ್ತಿರಬೇಕೆನ್ನುವರು; ಮೂರನೆಯ ಬಗೆಯವರು ಮಾತ್ರ ನಾವು ಜಾಗರೂಕತೆಯಿಂದ ದೃಢವಾಗಿ ಹೆಜ್ಜೆಯೂರಿ ಕ್ರಮಕ್ರಮವಾಗಿ ಮುಂದಕ್ಕೆ "ನಡೆ"ಯ ಬೇಕೆನ್ನುವರು. ಮೊದಲನೆಯವರು ಅತಿ ಮಂದ ಚಾರಿಗಳು; ಎರಡನೆಯವರು ಅತಿ ತೀವ್ರಚಾರಿಗಳು; ಮೂರನೆಯವರು ಅತಿ ಮಂದವಾಗದೆಯೂ ಅತಿ ತೀವ್ರವಾಗದೆಯೂ ಸಮಗತಿಯಿಂದ ಹೋಗ ತಕ್ಕವರು. ಮೊದಲನೆಯವರನ್ನು ಸ್ತಿಮಿತವಾದಿ (ಕನ್ಸರ್ವೆಟಿವ್) ಗಳೆಂದೂ, ಎರಡನೆಯವರನ್ನು ಅತಿವೇಗವಾದಿ (ಎಕ್ಸ್‌ಟ್ರೀಮಿಸ್ಟ್) ಗಳೆಂದೂ, ಮೂರನೆ ಯವರನ್ನು ಮಿತವೇಗವಾದಿ (ಮಾಡರೆಟ್) ಗಳೆಂದೂ ನಾವು ಕರೆಯಬಹುದು. ಗೋಖಲೆಯವರು ಈ ಮೂರನೆಯ ಪಂಗಡಕ್ಕೆ ಸೇರತಕ್ಕವರು. ತಮ್ಮ ದೇಶವು ಸ್ವಾತಂತ್ರ್ಯ ಸೌಭಾಗ್ಯಗಳಲ್ಲಿ ಮುಂಬರಿಯಬೇಕೆಂಬ ಆಶೆಯು ಇತರರಿಗಿರುವಂತೆಯೇ ಅವರಿಗೂ ಅತಿಶಯವಾಗಿತ್ತು. ಆದರೆ ಇತರ ಕೆಲವರು ಮರೆತ ಕೆಲವು ಸಂಗತಿಗಳನ್ನು ಅವರು ಸಂತತವಾಗಿ ನೆನಪಿನಲ್ಲಿಟ್ಟು ಕೊಂಡಿದ್ದರು. ಬ್ರಿಟಿಷರು ಬಲಿಷ್ಠರು; ಭಾರತೀಯರು ಬಲಹೀನರು. ಬ್ರಿಟಿಷರು ಐಕಮತ್ಯವುಳ್ಳವರು; ಭಾರತೀಯರು ಜಾತಿ ಮತ ಭೇದಗಳನ್ನು ವಿಪರೀತಮಾಡಿಕೊಂಡು ಐಕಮತ್ಯವನ್ನು ನೀಗಿಕೊಂಡಿರುವವರು. ಬ್ರಿಟಿ ಷರು ಲೌಕಿಕಪರಿಜ್ಞಾನ ಕಾರ್ಯವಿಚಕ್ಷಣೆಗಳುಳ್ಳವರು; ಭಾರತೀಯರು ನೂರಾರು ವರ್ಷಗಳಿಂದಲೂ ಪರಾಧೀನದಲ್ಲಿರುವವರಾದ ಕಾರಣ, ಲೋಕ ವ್ಯವಹಾರದ ಸ್ವತಂತ್ರಾನುಭವವನ್ನೂ ಕಾರ್ಯಯೋಗ್ಯತೆಯನ್ನೂ ಇನ್ನೂ ಸಂಪಾದಿಸಬೇಕಾಗಿರುವವರು. ಹೀಗಿರುವಲ್ಲಿ, ನಮ್ಮ ದೇಶಕ್ಕೆ ಲಭಿಸಬೇಕೆಂದು ನಾವು ಬಯಸುವ ಅಧಿಕಾರ ಸಂಪತ್ತುಗಳೆಲ್ಲವೂ ಒಂದೇ ಬಾರಿ— ಒಂದೆರಡು ವರ್ಷಗಳಲ್ಲಿ—ಸಂಪೂರ್ಣವಾಗಿ ಬರಬೇಕೆಂದು ಆತುರಪಡು

ವುರ್ದ್ಯ, ಬ್ರಿಟಿಷರ ವಿಷಯದಲ್ಲಿ ಕಠಿನೋಕ್ತಿಗಳನ್ನಾಡಿ ಒಣ ರೋಷಾವೇಷವನ್ನು ತೋರಿಸುವುದೂ ಪ್ರಯೋಜನಸಕರವಾಗದೆಂದೂ, ಅನರ್ಥಕಾರಿಯಾಗಬಹುದೆಂದೂ ಅವರು ತಿಳಿದುಕೊಂಡಿದ್ದರು. ನಿಷ್ಠುರ ವಾಕ್ಯಗಳಿಂದ ಉಭಯ ಪಕ್ಷಗಳಲ್ಲಿಯೂ ಮನಸ್ಸಮಾಧಾನವು ತಪ್ಪಿಹೋಗುವುದು; ಕ್ರೋಧವು ಹೆಚ್ಚುವುದು; ಹಠ ಮುಷ್ಕರಗಳು ಬೆಳೆದು ಉಭಯತ್ರರಿಗೂ ಹಾನಿಯಾಗುವುದು. ಇದಕ್ಕೆ ಅವಕಾಶಕೊಡುವುದಕ್ಕಿಂತ, ಬ್ರಿಟಿಷರ ಉತ್ತಮಗುಣಗಳನ್ನೊಪ್ಪಿಕೊಂಡು, ಅವರಲ್ಲಿರುವ ಲೋಪಗಳನ್ನು ಸ್ನೇಹದ ರೀತಿಯಲ್ಲಿ ತೋರಿಸಿಕೊಟ್ಟು, ಕೂಡಿದಷ್ಟುಮಟ್ಟಿಗೆ ಅವರನ್ನು ಒಳ್ಳೆಯವರನ್ನಾಗಿ ಮಾಡಿಕೊಂಡರೆ, ಅದರಿಂದ ಆಗುವ ಲಾಭವು ಸದ್ಯಕ್ಕೆ ಸ್ವಲ್ಪವಾಗಿ ಕಂಡರೂ ಶಾಶ್ವತವಾಗಿ ಸಿಲ್ಲತಕ್ಕುದಾಗಿ, ಮತ್ತಷ್ಟು ಲಾಭಕ್ಕೆ ದಾರಿ ಬಿಡಿಸುವುದಾಗುವುದು—ಹೀಗೆಂದು ಗೋಖಲೆಯವರು ನಂಬಿದ್ದರು. ನಮ್ಮ ಮನೋರಥಗಳನ್ನು ಮಿತಿಯಿಲ್ಲದೆ ಇಟ್ಟುಕೊಂಡಿರೋಣ; ಆದರೆ ಕಾರ್ಯ ಸಮಯದಲ್ಲಿ ಮಾತ್ರ ಅವುಗಳನ್ನು ಸಂದರ್ಭಕ್ಕೆ ತಕ್ಕಂತೆ ಒಂದು ಪರಿಮಿತಿಗೆ ಇಳಿಸಿರೋಣ—ಎಂಬುದೇ ಅವರ ಮತ. ಮಿತಿಯಿಲ್ಲದೆ ಎಲ್ಲವೂ ಒಂದೇಸಲ ಬೇಕೆನ್ನುವವರಿಗೆ ಸ್ವಲ್ಪವೂ ದೊರೆಯದೆ ಹೋಗುವುದೂ, ಸ್ವಲ್ಪ ಸ್ವಲ್ಪ ಕೊಟ್ಟರೆ ಸಾಕೆನ್ನುವವರಿಗೆ ಕ್ರಮೇಣ ಎಲ್ಲವೂ ದೊರೆಯುವುದೂ ಲೋಕದಲ್ಲಿ ಸರ್ವರಿಗೂ ಅನುಭವಕ್ಕೆ ಬಂದಿರುವ ಸಂಗತಿ. ನಮಗೆ ಸಲ್ಲಬೇಕಾದುದರಲ್ಲಿ ನಾವು ಕೊಂಚ ಬಿಡುವೆವೆಂದರೆ ನಮಗೆ ಕೊಂಚವನ್ನಾದರೂ ಕೊಡುವರು; ನಾವು ಏನನ್ನೂ ಬಿಡೆವೆಂದರೆ ನಮಗೆ ಏನನ್ನೂ ಕೊಡೆವೆನ್ನುವರು. ಕೊಟ್ಟು ತೆಗೆಯುವುದರ ಈ ಲೌಕಿಕ ನೀತಿಯನ್ನು ಗೋಖಲೆಯವರು ಚೆನ್ನಾಗಿ ಅರಿತಿದ್ದ ಕಾರಣ, ಅವರು ಸದುಪಾಯಗಳಿಂದ ಸ್ವಲ್ಪವನ್ನಾದರೂ ಸಾಧಿಸಿಕೊಳ್ಳುವುದಕ್ಕೆ ಮನಸ್ಸುಕೊಟ್ಟಿದ್ದರೇ ವಿನಾ, ಬರಬೇಕಾದುದೆಲ್ಲವೂ ಕೇಳಿದ ಕೂಡಲೆ ಬಂದುಬಿಡಬೇಕೆಂಬ ಆರ್ಭಟದಿಂದ ತೃಪ್ತರಾಗುತ್ತಿರಲಿಲ್ಲ. ಅವರು ತಮ್ಮ ಮನೋವೃತ್ತಿಯನ್ನು ಸೂಚಿಸಲು ಇಂಗ್ಲಿಷ್ ಭಾಷೆಯ ಒಂದು ಭಗವತ್ಪ್ರಾರ್ಥನೆಯ* ವಾಕ್ಯವನ್ನು ಪದೇ

* ಮ|| ಗಾಂಧಿಯವರೂ ಈ ಪ್ರಾರ್ಥನೆಯಲ್ಲಿ ಅತ್ಯಂತ ವಿಶ್ವಾಸವನ್ನಿಟ್ಟುಕೊಂಡಿರುವರು.

ಪದೇ ಉದಾಹರಿಸುತ್ತಿದ್ದರು. ಪಂಡಿತನೂ ಕವಿಯೂ ಆಗಿ ಪ್ರಸಿದ್ಧನಾಗಿದ್ದ, ಕಾರ್ಡಿನಲ್ ನ್ಯೂಮನ್ ಎಂಬ ಕ್ರೈಸ್ತ ಭಕ್ತಶ್ರೇಷ್ಠನು ದೇವರನ್ನು ಕುರಿತು—"ದಯಾಮಯನಾದ ಪರಂಜ್ಯೋತಿಯೆ, ನನ್ನನ್ನು ನಿನ್ನ ಕಡೆಗೆ ನಡೆಯಿಸಿಕೋ. ನನಗೆ ಬಹು ದೂರದಲ್ಲಿರುವಂತಹ ನಿನ್ನ ದಿವ್ಯ ಸಾನ್ನಿಧ್ಯದ ದರ್ಶನವು ಇಂದೇ ಪೂರ್ಣವಾಗಿ ಬೇಕೆಂದು ನಾನು ಕೇಳುವವನಲ್ಲ; ನನ್ನನ್ನು ಒಂದು ಹೆಜ್ಜೆ ಮಾತ್ರ ನಿನ್ನ ಕಡೆಗೆ ಕರೆದುಕೊಂಡರೂ ನಾನು ಧನ್ಯನೇ"—ಎಂದು ಮೊರೆಯಿಟ್ಟಿರುವನು. ತಮ್ಮ ಕೋರಿಕೆಯೂ ಅಷ್ಟು ಮಟ್ಟಿನದೇ ಎಂದು ಗೋಖಲೆಯವರು ತಿಳಿಸಿ,

"ಹೇಳಿ ನನ್ನಡಿಯಿಡಿಸು ; ಬಲುದೂರ ನೋಟವನು
ಕೇಳಿನೊಡನೆಯೆ ;—ಸಾಕು ನನಗೊಂದು ಹೆಜ್ಜೆ."*

ಎಂಬ ವಚನವನ್ನು ಪದೇ ಪದೇ ಸ್ಮರಿಸುತ್ತಿದ್ದರು.

ಅವರ ಕಾರ್ಯವಿಧಾನಕ್ಕೆ ದೃಷ್ಟಾಂತವಾಗಿ ಒಂದು ಸಂಗತಿಯನ್ನು † ಇಲ್ಲಿ ತಿಳಿಸುವೆವು. ೧೯೧೦ನೆಯ ಇಸವಿಯಲ್ಲಿ, ಲಾರ್ಡ್ ಮಿಂಟೋ ಅವರು ವೈಸ್‌ರಾಯಾಗಿದ್ದಾಗ, ವೃತ್ತಪತ್ರಿಕೆಗಳ ಸ್ವಾತಂತ್ರ್ಯವನ್ನು ಕಡಿಮೆ ಮಾಡುವ ಬಗೆಗೆ ಒಂದು ಕಾನೂನನ್ನು ರಚಿಸುವ ಪ್ರಯತ್ನ ನಡೆಯುತ್ತಿತ್ತು. ಆ ಕಾನೂನಿನ ಮೊದಲನೆಯ (ಅಸಲ್=ಕರಡು) ಮಸೂದೆಯು ಶಾಸನ ಸಭೆಗೆ ಬಂದಾಗ ಅದರಲ್ಲಿದ್ದ ಷರತ್ತು ಶಿಕ್ಷೆಗಳು ಪ್ರಜಾಭಿಮಾನಿಗಳಾದವರಿಗೆ ಭಯೋತ್ಪಾದಕಗಳಾಗಿದ್ದುವು. ಆಗಿನ ಸರಕಾರವಾದರೋ ಅಂತಹ ಕಾನೂನನ್ನು ಮಾಡಿಯೇ ತೀರಬೇಕೆಂದು ಹಟ ಹಿಡಿದಿತ್ತು. ಆಗ ಶಾಸನ ಸಭೆಯಲ್ಲಿ ಪ್ರಜಾಪಕ್ಷದ ಸದಸ್ಯರುಗಳ ಸಂಖ್ಯೆ ಕಡಿಮೆಯಾಗಿ, ಸರಕಾರದ ಸದಸ್ಯರುಗಳೇ ಹೆಚ್ಚು ಮಂದಿ ಇದ್ದುದರಿಂದ, ಆ ಕಾನೂನು ಹೇಗಾದರೂ ಅಂಗೀಕೃತವೇ ಆಗುತ್ತಿತ್ತು. ಆ ಸಂದರ್ಭದಲ್ಲಿ ಪ್ರಜಾಪಕ್ಷೀಯರಿಗೆ ಏನುಮಾಡಬೇಕೆಂಬುದೂ ತೋರಲಿಲ್ಲ. ಆಗ ವೈಸ್‌ರಾಯವರ (ಎಕ್ಸಿಕ್ಯುಟಿವ್ ಕೌನ್ಸಿಲ್) ಮಂತ್ರಿ ಮಂಡಲ ಅಥವಾ ಕಾರ್ಯನಿರ್ವಾಹಕ ಮಂಡಲ

---

* ಇದು "ಶ್ರೀ" ಎಂಬವರು ಮಾಡಿರುವ ಭಾಷಾನುವಾದ.

† ಈ ಸಂಗತಿಯು ಇದುವರೆಗೂ ಯಾವ ಪುಸ್ತಕದಲ್ಲಿಯೂ ಪ್ರಸಿದ್ಧಿಗೊಂಡಂತೆ ಕಾಣುವುದಿಲ್ಲ.

ದಲ್ಲಿ, ಲಾರ್ಡ್ ಸಿಂಹರೆಂದು ಆ ಬಳಿಕ ಪ್ರಸಿದ್ಧರಾದ ಸರ್ ಸತ್ಯೇಂದ್ರ ಪ್ರಸನ್ನ ಸಿಂಹರವರು ಶಾಸನ ವಿಧಾಪನದ ("ಲಾ" ಅಥವಾ ಕಾನೂನು ಗಳಿಗೆ ಸಂಬಂಧಪಟ್ಟ) ಇಲಾಖೆಯ ಮಂತ್ರಿಯಾಗಿದ್ದರು. ಸಿಂಹರವರು ದೇಶಾಭಿಮಾನಿಗಳೆಂಬುದು ದಿಟವಾದರೆ ಅವರು ಆ ತಮ್ಮ ಪದವಿಗೆ ರಾಜೀನಾಮೆ ಕೊಟ್ಟು, ಸರಕಾರವು ಸಂಕಲ್ಪಿಸಿದ್ದ ಶಾಸನ ವಿಷಯದಲ್ಲಿ ತಮ್ಮ ಪ್ರತಿಷೇಧವನ್ನು ಆ ಮೂಲಕ ಪ್ರಕಾಶಗೊಳಿಸಲಿ—ಎಂದು ಕೆಲವರು ಸೂಚಿಸುತ್ತಿದ್ದರು. ಗೋಖಲೆಯವರು ಅದನ್ನೊಪ್ಪಲಿಲ್ಲ. ಸಿಂಹರವರು ಮಂತ್ರಿಮಂಡಲವನ್ನು ಬಿಡುವುದರಿಂದ ಸರಕಾರದ ಹಟವು ಮತ್ತಷ್ಟು ಹೆಚ್ಚುವುದೇ ಹೊರತು ತಮಗೆ ಯಾವ ಪ್ರಯೋಜನವೂ ಆಗದೆಂದೂ, ತಮ್ಮ ಪರವಾಗಿ ಸರಕಾರದಲ್ಲಿ ಮಾತನಾಡುವುದಕ್ಕಿದ್ದ ಆ ಒಬ್ಬರನ್ನೂ ಅಲ್ಲಿಂದ ಈಚೆಗೆ ಸೆಳೆದುಬಿಟ್ಟರೆ ತಮ್ಮ ಕೈ ಮತ್ತಷ್ಟು ದುರ್ಬಲವಾಗುವು ದೆಂದೂ ಅವರು ತಿಳಿದುಕೊಂಡಿದ್ದರು. ಅವರು ಬೇರೊಂದು ಉಪಾಯ ವನ್ನು ಯೋಚಿಸಿದರು. ಆ ಕಾಲದಲ್ಲಿ ವೈಸ್‌ರಾಯರವರ ರಾಜಧಾನಿಯೂ ಇಂಡಿಯಾ ಸರಕಾರದ ಆಸ್ಥಾನವೂ ಕಲ್ಕತ್ತಾ ಪಟ್ಟಣದಲ್ಲಿದ್ದುವಷ್ಟೆ? ಕಲ್ಕತ್ತೆಯ ಹೈಕೋರ್ಟಿಗೆ (ಮುಖ್ಯ ನ್ಯಾಯಸ್ಥಾನಕ್ಕೆ) ಸರ್ ಲಾರೆನ್ಸ್ ಜೆನ್ಕಿನ್ಸ್ ಎಂಬವರು ಆಗ ಅಧ್ಯಕ್ಷರಾಗಿದ್ದರು. ಅವರು ಭಾರತೀಯರ ವಿಷಯದಲ್ಲಿ ಅಭಿಮಾನಿಗಳೆಂದೂ ನ್ಯಾಯ ಪಕ್ಷಪಾತಿಗಳೆಂದೂ ಪ್ರಸಿದ್ಧ ರಾಗಿದ್ದರು. ಆಗ ಇಂಗ್ಲೆಂಡಿನಲ್ಲಿ ಇಂಡಿಯಾ ಸರಕಾರವನ್ನು ನಡಿಸತಕ್ಕ (ಸೆಕ್ರೆಟರಿ) ಮಂತ್ರಿಯಾಗಿದ್ದ ಲಾರ್ಡ್ ಮಾರ್ಲೇಯರವರಿಗೆ ಸರ್ ಲಾರೆನ್ಸ್ ರವರಲ್ಲಿ ಅತಿಶಯವಾದ ವಿಶ್ವಾಸವಿತ್ತು; ಅಲ್ಲದೆ ಸರ್ ಲಾರೆನ್ಸ್‌ರವರ ಮಾತಿನಲ್ಲಿ ವೈಸ್‌ರಾಯ್ ಲಾರ್ಡ್ ಮಿಂಟೋ ಅವರಿಗೂ ಇಂಡಿಯಾ ಸರಕಾರದ ಇತರ ಮುಖ್ಯಸ್ಥರಿಗೂ ಹೆಚ್ಚಾಗಿ ಗೌರವವಿತ್ತು. ಇಂತಹ ಸರ್ ಲಾರೆನ್ಸ್ ಜೆನ್ಕಿನ್ಸ್‌ರವರ ಸಹಾಯವನ್ನು ಸಂಪಾದಿಸಿದರೆ ಅವರ ಮಧ್ಯಸ್ತಿಕೆಯ ಪ್ರಭಾವದಿಂದ ವೃತ್ತಪತ್ರಿಕೆಗಳ ಕಾನೂನಿನ ವಿಷಯದಲ್ಲಿ ತಮಗೆ ತಕ್ಕಮಟ್ಟಿಗೆ ಅನುಕೂಲವಾಗಬಹುದೆಂದು ಗೋಖಲೆಯವರಿಗೆ ತೋರಿತು. ಅದರಂತೆ ಅವರೂ, ಸಾರ್ವದೇಶೀಯ ಶಾಸನ ಸಭೆಯಲ್ಲಿ

ಆಗ ಅವರ ಸಹೋದ್ಯೋಗಿಗಳಾಗಿದ್ದ ಪಂಡಿತ ಮದನಮೋಹನ ಮಾಳವೀಯರೂ, ಇತರ ಪ್ರಜಾಪಕ್ಷೀಯ ಸದಸ್ಯರು ಕೆಲಮಂದಿಯೂ ಸರ್ ಲಾರೆನ್ಸ್ ಜನ್ಕಿನ್ಸ್‌ರವರ ಬಳಿಗೆ ಹೋಗಿ, ಅವರು ತಮಗೂ ಸರಕಾರದವರಿಗೂ ಮಧ್ಯಸ್ಥರಾಗಿದ್ದು ವಾಕ್ಸಹಾಯವನ್ನು ಮಾಡಬೇಕೆಂದು ಬೇಡಿದರು. ಆ ಮಹಾಶಯರು ಅದಕ್ಕೊಪ್ಪಿ, ಇಂಡಿಯಾ ಸರಕಾರದ ಮುಖ್ಯಸ್ಥರೂ, ಪ್ರಜಾಪಕ್ಷದ ಮುಖ್ಯಸ್ಥರೂ ತಮ್ಮ ಬಳಿ ಆಗಾಗ ರಹಸ್ಯವಾಗಿ ಸ್ನೇಹಭಾವದಿಂದ ಕಲೆತು, ಕಾನೂನಿನ ಅಂಶಗಳನ್ನು ಚರ್ಚಿಸುವಂತೆ ಏರ್ಪಡಿಸಿದರು. ಅದರಂತೆ ಆ ಗುಪ್ತ ಸಮ್ಮೇಳನಗಳು ಅನೇಕ ದಿನ ನಡೆದುವು. ಅಧಿಕಾರಿಗಳು ತಮ್ಮ ಪಕ್ಷವನ್ನು ಹಿಡಿದು ನಿರ್ದಾಕ್ಷಿಣ್ಯವಾಗಿ ಮಾತನಾಡಿದರು ; ಗೋಖಲೆಯವರೂ ಇತರರೂ ಅವರಿಗೆ ಪ್ರತಿಹೇಳಬೇಕಾಗಿದ್ದುದನ್ನೆಲ್ಲ ಮುಚ್ಚುಮರೆಯಿಲ್ಲದೆ ಹೇಳಿದರು. ಸರ್ ಲಾರೆನ್ಸ್ ಜೆನ್ಕಿನ್ಸ್‌ರವರು ಮಧ್ಯೆ ಮಧ್ಯೆ ಉಭಯತ್ರರಿಗೂ ಸಮಾಧಾನ ಹೇಳುತ್ತಾ, ಉಭಯರ ವಾಗ್ವಾದವೇಗವನ್ನೂ ತಡೆಯುತ್ತಾ, ಉಭಯ ಪಕ್ಷಗಳವರೂ ಒಂದು ಒಡಂಬಡಿಕೆಗೆ ಬರುವಂತೆ ಪ್ರೋತ್ಸಾಹಿಸಿ ಪ್ರೇರಿಸಿದರು. ಕಡೆಗೆ ಅವರ ಹಿತವಾದದ ಮೇರೆಗೆ ಅಧಿಕಾರಿಗಳು ಕೆಲವು ಅಂಶಗಳನ್ನು ಬಿಟ್ಟುಕೊಡಬೇಕಾಯಿತು ; ಪ್ರಜಾಪಕ್ಷೀಯರು ಕೆಲವು ಅಂಶಗಳನ್ನು ಒಪ್ಪಿಕೊಳ್ಳಬೇಕಾಯಿತು ; ಪಂಚಾಯತಿಯಿಂದ ವ್ಯಾಜ್ಯವನ್ನು ತೀರ್ಮಾನಮಾಡಿಸುವ ರೀತಿ ಹೀಗೆಯೇ ತಾನೆ? ಸರ್ ಲಾರೆನ್ಸ್‌ರವರು ಮಾಡಿಸಿದ 'ರಾಜಿ' ಯಿಂದ, ಸರಕಾರದವರು ಮಾಡಬೇಕೆಂದಿದ್ದ ವೃತ್ತಪತ್ರ ಶಾಸನವು ಮೊದಲಿನ ತೀಕ್ಷ್ಣತೆಯನ್ನು ತಕ್ಕಮಟ್ಟಿಗೆ ನೀಗಿ ಸೌಮ್ಯವಾಯಿತು. ಅದನ್ನು ಆ ಸುಮುಖರೂಪದಲ್ಲಿ ಅಂಗೀಕರಿಸುವುದು ಪ್ರಜಾಪಕ್ಷೀಯರ ಕರ್ತವ್ಯವಾಯಿತು. ಏಕೆಂದರೆ, ಸರ್ ಲಾರೆನ್ಸ್ ಜನ್ಕಿನ್ಸರು ಮಾಡುವ ತೀರ್ಮಾನಕ್ಕೆ ತಾವೂ ಬದ್ಧರಾಗಿರುವಂತೆ ಅವರು ಮೊದಲೇ ಒಡಂಬಟ್ಟಿದ್ದರಲ್ಲವೆ? ಕ್ರಮ ನಿಯಮಗಳ ನಿರ್ಬಂಧವಿಲ್ಲದ ಗುಪ್ತ ಸಭೆಗಳಲ್ಲಿ ಮೊದಲು ಪಂಚಾಯತಿ ಮಾಡಿಸಿ ಸಾಧ್ಯವಾದ ಆನುಕೂಲ್ಯ ಸೌಕರ್ಯಗಳನ್ನೆಲ್ಲಾ ಪ್ರತಿಕಕ್ಷಿಯಿಂದ ಸಂಪಾದಿಸಿಕೊಳ್ಳುವುದು ; ಆಮೇಲೆ ಕ್ರಮವಾಗಿ ಬಹಿರಂಗದಲ್ಲಿ ನಡೆಯುವ ಸಭೆಯಲ್ಲಿ

ಆ ಪಂಚಾಯತಿಯು ಷುದ್ಧಿಯನ್ನೆಲ್ಲ ಮರೆತು, ಪ್ರತಿಕಕ್ಷಿಯಮೇಲೆ ಪುನಃ ಕಲಹವನ್ನು ಆರಂಭಿಸಿ, ಆ ಕಕ್ಷಿಯ ಮಾತು ಒಂದೂ ನಡೆಯಕೂಡದೆನ್ನುವುದು—ಈ ಬಗೆಯ ನಡತೆಯು ಸರ್ವಥಾ ನ್ಯಾಯವೆನಿಸದು. ಒಂದು ಸಲ ಮಧ್ಯಸ್ಥರ ಮಾತನ್ನೊಪ್ಪಿಕೊಳ್ಳುವೆವೆಂದು ಒಪ್ಪಿ, ಅವರು ಹೇಳಿದಂತೆ ನಮ್ಮ ಪ್ರತಿಪಕ್ಷದವರು ತಮ್ಮ ಉದ್ದೇಶದ ಕೆಲವು ಭಾಗಗಳನ್ನು ತ್ಯಜಿಸಿಬಿಟ್ಟ ಬಳಿಕ, ಉಳಿದ ಭಾಗವನ್ನು ಆ ಮಧ್ಯಸ್ಥರು ಹೇಳಿದ ಮೇರೆಗೆ ನಾವು ಅಂಗೀಕರಿಸುವುದೇ ನಮಗೆ ನ್ಯಾಯ. ಈ ನ್ಯಾಯಕ್ಕೆ ಗೋಖಲೆಯವರು ಕಟ್ಟುಬಿದ್ದು, ಸರ್ ಲಾರೆನ್ಸ್ ಜನ್ಕಿನ್ಸ್‌ರವರ ಮೂಲಕ ರಹಸ್ಯ ಸಭೆಗಳಲ್ಲಿ ತಿದ್ದಲ್ಪಟ್ಟ ವೃತ್ತಪತ್ರಗಳ ಕಾನೂನನ್ನು ಪ್ರಕಾಶವಾಗಿ ಶಾಸನ ಸಭೆಯಲ್ಲಿ ಒಪ್ಪಿಕೊಳ್ಳಬೇಕಾಯಿತು. ಅವರು ಹಾಗೆ ಮಾಡದೆ ಇದ್ದಿದ್ದರೆ, ಯಾವ ಅಧಿಕಾರಿ ವರ್ಗದ ವಿಶ್ವಾಸ ಸಹಾಯಗಳು ತಮ್ಮ ದೇಶಕಾರ್ಯಗಳಿಗೆ ಅತ್ಯಂತಾವಶ್ಯಕವಾಗಿದ್ದುವೋ, ಆ ಪ್ರಬಲವರ್ಗದ ನಂಬಿಕೆಯು ಗೋಖಲೆಯವರಿಗೆ ತಪ್ಪಿಹೋಗಿ, ಸವ್ಯವಹಾರ ಯೋಗ್ಯರಲ್ಲವೆಂಬ ಅಪವಾದವು ಅವರಮೇಲೆ ಬೀಳುತ್ತಿತ್ತು. ಇದನ್ನೆಲ್ಲ ಯೋಚಿಸಿ, ಗೋಖಲೆಯವರು ಆ ಕಾನೂನಿಗೆ ತಾವು ಬಹಿರಂಗದಲ್ಲಿ ವಿಶೇಷವಾಗಿ ಪ್ರತಿಹೇಳದೆ, ಸರ್ ಸತ್ಯೇಂದ್ರಸಿಂಹರವರನ್ನು ಅಧಿಕಾರದಿಂದ ಬಿಡಿಸದೆ, ಅವರು ವೈಸ್‌ರಾಯವರ ಮಂತ್ರಿಮಂಡಲದಲ್ಲಿಯೇ ಇರುವಂತೆ ಪ್ರೇರಿಸಿದರು. ಇದರ ಮರ್ಮವನ್ನರಿಯದ ಜನರು ಗೋಖಲೆಯವರು ಸರಕಾರದ ಕಡೆ ಸೇರಿಕೊಂಡರೆಂದೂ, ದೇಶವನ್ನು ಮಾರಿಬಿಟ್ಟರೆಂದೂ ಅವರನ್ನು ದೂರಿದರು. ಸರಕಾರದವರೇನೋ ಹೇಗಿದ್ದರೂ ಆ ಕಾನೂನನ್ನು ಮಾಡಿಯೇ ಮಾಡುತಲಿದ್ದರು. ಅದು ಬಾಂಬ್ ಗುಂಡುಗಳ ಹೆದರಿಕೆಯ ಕಾಲ. ಆ ರಾಜ್ಯ ವಿಪ್ಲವ ಪ್ರಯತ್ನದ ಪ್ರಾಚುರ್ಯಕ್ಕೆ ವರ್ತಮಾನ ಪತ್ರಿಕೆಗಳೇ ಕಾರಣವೆಂದು ಸರಕಾರದವರು ನಂಬಿದ್ದರು. ಆದಕಾರಣ, ಸಿಂಹರವರು ಅಧಿಕಾರವನ್ನು ಬಿಟ್ಟುಬಿಟ್ಟಿದ್ದರೂ, ಮತ್ತು ಗೋಖಲೆ ಮೊದಲಾದ ಪ್ರಜಾಪ್ರತಿನಿಧಿಗಳು ಶಾಸನ ಸಭೆಯನ್ನು ಬಿಟ್ಟಿದ್ದರೂ, ಸರಕಾರದ ಬಲ ಮುಂಷ್ಕರಗಳೇನೂ ತಗ್ಗುತ್ತಿರಲಿಲ್ಲ. ಆದುದರಿಂದ,

ಸರ್ವನಾಶೇ ಸಮುತ್ಪನ್ನೇಽಹ್ಯರ್ಥಂ ತ್ಯಜತಿ ಪಂಡಿತಃ |
ಅರ್ಧೇನ ಕುರುತೇ ಕಾರ್ಯಂ ಸರ್ವನಾಶೋ ಹಿ ದುಸ್ಸಹಃ ||

(ಎಲ್ಲವೂ ಹಾಳಾಗುವ ಸ್ಥಿತಿಯು ಬಂದಿರುವಲ್ಲಿ, ಬುದ್ಧಿಶಾಲಿಯಾದವನು ಅದರಲ್ಲರ್ಧವನ್ನು ಬಿಟ್ಟು ಮಿಕ್ಕರ್ಧವನ್ನಾದರೂ ಉಳಿಸಿಕೊಳ್ಳುವನು. ಆ ಅರ್ಧವಾದರೂ ಉಳಿದರೆ ಕೆಲಸಗಳು ನಡೆಯುವುವು; ಎಲ್ಲವೂ ಹೋದರೆ ಸಹಿಸಲಾಗುವುದಿಲ್ಲ.)

—ಎಂಬ ಪ್ರಾಚೀನ ನ್ಯಾಯವನ್ನನುಸರಿಸಿ ಗೋಖಲೆಯವರು ವರ್ತಿಸಿದರು. ಸಾಧ್ಯವಿದ್ದವರೆಗೂ ವೃತ್ತಪತ್ರಗಳ ಪಕ್ಷವನ್ನು ವಹಿಸಿ, ಪ್ರಜಾ ಸ್ವಾತಂತ್ರ್ಯಕ್ಕೆ ವಿರೋಧವಾದ ಆ ಕಾನೂನು ಆಗಲೇ ಕೂಡದೆಂದು ಬಹು ವಿಧವಾಗಿ ಶಾಸನ ಸಭೆಯಲ್ಲಿ ವಾದಿಸಿದರು. ಆದರೆ ತಮ್ಮ ಮಾತು ಸಾಗದೆಂದು ಕಂಡುಬಂದ ಬಳಿಕ, ಪತ್ರಿಕೆಗಳ ಸ್ವಾತಂತ್ರ್ಯವೆಲ್ಲವನ್ನೂ ಕಳೆದುಕೊಳ್ಳುವುದಕ್ಕಿಂತ ಸ್ವಲ್ಪವನ್ನಾದರೂ ಉಳಿಸಿಕೊಳ್ಳೋಣವೆಂದು ಅವರು ಬೇರೊಂದು ಸದುಪಾಯವನ್ನು ಹುಡುಕಿದರು. ರಾಜ್ಯ ಪರಿಷ್ಕಾರ ಕಾರ್ಯದಲ್ಲಿ ಹೀಗೆ ಕೊಟ್ಟು ತೆಗೆದುಕೊಳ್ಳುವ, ಅಥವಾ ಬಿಟ್ಟು ಉಳಿಸಿಕೊಳ್ಳುವ, ಉಪಾಯವೇ ನಿಜವಾಗಿ ಕಾರ್ಯಸಾಧಕವಾದುದು. ಜನರ ಸಾಮಾನ್ಯ ವ್ಯವಹಾರಗಳಲ್ಲಿಯೂ ಸಹ "ರಾಜಿ"ಯಿಂದ—ಅಥವಾ "ಒಪ್ಪಂದ"ದಿಂದ—ವ್ಯಾಜ್ಯಗಳನ್ನು ಹರಿಸಿಕೊಳ್ಳುವುದೇ ಉತ್ತಮ ಮಾರ್ಗವೆಂಬುದನ್ನು ಅನುಭವಸ್ಥರೆಲ್ಲರೂ ಬಲ್ಲರು. ನಮ್ಮ ಉದ್ದೇಶ ಆಶಯಗಳೆಲ್ಲವೂ ಇಂದೇ ಪೂರ್ತಿಯಾಗಿ ನಡೆಯಬೇಕೆಂದರೆ ನಮ್ಮ ವಿರೋಧಿಗಳು ಅದನ್ನು ಆಗಗೊಳಿಸುವುದಿಲ್ಲ. ಅವು ನಾಳೆಯೋ ನಾಳಿದ್ದೋ ಪೂರ್ತಿಯಾಗಿ ನೆರವೇರಲಿ; ಇಂದು ಅವು ಸ್ವಲ್ಪ ದೂರ ನೆರವೇರಿದರೆ ಸಾಕು—ಎಂದು ನಾವು ಹೇಳಿದರೆ ನಮ್ಮ ವಿರೋಧಿಗಳು ಹಾಕುವ ತಡೆಯು ಅಷ್ಟು ಬಲವಾಗಿರದು. ಇದರಿಂದಲೇ ಗೋಖಲೆಯವರು ಮಿತವೇಗವಾದಿಗಳಾಗಿದ್ದರು.

ಅವರ ಮಿತವಾದಿತ್ವಕ್ಕೆ ಇನ್ನೂ ಕೆಲವು ಕಾರಣಗಳಿದ್ದುವು: (೧) ನಮ್ಮ ದೇಶದ ಜನಸಾಮಾನ್ಯದಲ್ಲಿ ರಾಜಕೀಯ ವಿಚಾರಾಸಕ್ತಿಯು ಈಗಿರುವಷ್ಟು ಮಟ್ಟಿಗೆ ಗೋಖಲೆಯವರ ಕಾಲದಲ್ಲಿ ಇರಲಿಲ್ಲ. ಜನಪದ

ಮಹಾಸಭೆಯ (ಕಾಂಗ್ರೆಸ್) ಅಂಗಗಳಾಗಿ ಪ್ರಾಂತೀಯ ಸಭೆಗಳೂ ಗ್ರಾಮಸಭೆಗಳೂ ಈಗಿರುವಂತೆ ಆಗ ಇರಲಿಲ್ಲ. ಆಗ ಆ ಸಭೆಯ ಸಮಾರಂಭಗಳಲ್ಲಿ ಸೇರುತ್ತಿದ್ದವರು ಮುಖ್ಯವಾಗಿ ದೊಡ್ಡ ದೊಡ್ಡ ಪಟ್ಟಣಗಳ ದೊಡ್ಡ ವಿದ್ಯಾವಂತರು—ಲಾಯರುಗಳು ಮೊದಲಾದವರು. ಇಂಗ್ಲಿಷನ್ನರಿಯದ ಹಳ್ಳಿಯ ಪ್ರಾಂತದ ಸಾಮಾನ್ಯ ಜನರಿಗೆ ರಾಜಕೀಯ ಜಾಗೃತಿಯು ಆಗ ಇನ್ನೂ ಹರಡಿರಲಿಲ್ಲ. ಇಂತಹ ಅಪ್ರಬುದ್ಧ ಜನರೇ ದೇಶದ ಪ್ರಜೆಯಲ್ಲಿ ಬಹು ಹೆಚ್ಚಿನ ಸಂಖ್ಯೆಯವರಾಗಿದ್ದ ಕಾರಣ, ಅವರ ರಾಜಕೀಯ ಯೋಗ್ಯತೆಗೆ ತಕ್ಕಷ್ಟು ಅಧಿಕಾರವನ್ನು ಮಾತ್ರ ಬಯಸುವುದೇ ಆ ಕಾಲಕ್ಕೆ ಉಚಿತವಾಗಿತ್ತು. ಅದಕ್ಕೆ ಮೀರಿದ ರಾಜ್ಯಾಧಿಕಾರವನ್ನು ಪ್ರಜಾಪಕ್ಷದವರಿಗೆ ಕೊಡಬೇಕೆಂದು ಕೇಳಿದ್ದಿದ್ದರೆ ಅದು ಸಾರ್ಥಕವಾಗುತ್ತಿರಲಿಲ್ಲ. ಪ್ರಕೃತೋಪಯುಕ್ತವಾದಷ್ಟನ್ನು ಮಾತ್ರ ಸಂಪಾದಿಸಿಕೊಳ್ಳುವುದು ರಾಜ್ಯ ಪರಿಷ್ಕಾರಕರ್ತರ ಉದ್ದೇಶವಾಗಿರಬೇಕೇ ಹೊರತು, ಮುಂದೆ ಯಾವ ಕಾಲಕ್ಕೋ ಬೇಕಾಗಬಹುದಾದ ವಿಶೇಷಾಧಿಕಾರವು ತಮ್ಮ ಕೈಗೇ ದೊರೆಯಬೇಕೆಂದು ಹೊಡೆದಾಡುವುದು ಅವರ ಕರ್ತವ್ಯವಲ್ಲ. ಪ್ರಜೆಗಳಿಗೋಸ್ಕರವೇ ತಾವು ವಾದಿಸುತ್ತಿರುವಂತೆ ಹೇಳಿಕೊಳ್ಳುವ ದೇಶಾಭಿಮಾನಿಗಳ ಮಾತನ್ನು ಜನವಾಕ್ಯವೂ ಪ್ರಬಲವಾಗಿ ಪುಷ್ಟೀಕರಿಸುತ್ತಿದ್ದರೆ, ಆಗ ಅವರ ಮಾತಿಗೆ ಬೆಲೆ ಬರುವುದು. ಹಾಗಿಲ್ಲದೆ ಪ್ರಜಾಭಿಮಾನಿಯ ಕೋರಿಕೆಯು ಪ್ರಜಾ ತಾತ್ಪರ್ಯಕ್ಕಿಂತ ಹೆಚ್ಚಿನದಾಗಿದ್ದರೆ, ಸರಕಾರದವರು ಆ ಕೋರಿಕೆಯನ್ನು ನಿರಾಕರಿಸಿ, ಆ ಪ್ರಜಾಭಿಮಾನಿಯನ್ನು ಅಧಿಕಾರಕಾಮಿಯೆಂದು ಹೀಯಾಳಿಸುವರು. ಈ ಕಾರಣದಿಂದ ಗೋಖಲೆಯವರು ತಮ್ಮ ಕಾಲದ ಜನಜಾಗೃತಿಗೆ ತಕ್ಕಷ್ಟು ಮಟ್ಟಿನ ರಾಜ್ಯ ಸಂಸ್ಕಾರಗಳನ್ನು ಮಾತ್ರವೇ ಸಾಧಿಸುವುದಕ್ಕೆ ಹೆಚ್ಚಾಗಿ ಗಮನ ಕೊಟ್ಟಿದ್ದರು.

(೨) ರಾಜ್ಯಭಾರ ನಿರ್ವಹಣ ಕಾರ್ಯವು ಸುಲಭವಾದುದೇನೂ ಅಲ್ಲ. ಅದಕ್ಕೆ ವಿವಿಧವಾದ ಅನುಭವವೂ ಸಾಮರ್ಥ್ಯವೂ ವಿಚಕ್ಷಣೆಯೂ ಇರಬೇಕು. ತತ್ರಾಪಿ, ಪ್ರಜಾಪ್ರತಿನಿಧಿ ಸಂಸ್ಥೆಗಳ ಮೂಲಕ ನಡೆಯಬೇಕಾಗಿರುವ ರಾಜ್ಯಯಂತ್ರದ ಚಾಲನೆಗೆ - ದೇಶದಲ್ಲಿ ಪ್ರಜಾಧರ್ಮವು ಚೆನ್ನಾಗಿ

ನೆಲೆಗೊಂಡು, ಸಾರ್ವಜನಿಕ ಹಿತಚಿಂತನೆಯ ಅಭ್ಯಾಸವು ಎಲ್ಲರಲ್ಲಿಯೂ ಬೇರೂರಿರಬೇಕು. ಗೋಖಲೆಯವರ ದಿವಸದಲ್ಲಿ ಈ ಸ್ಥಿತಿಯು ಇಂಡಿಯಾ ದೇಶದಲ್ಲಿ ಬೇಕಾದಷ್ಟು ಮಟ್ಟಿಗೆ ಇತ್ತೆಂದು ಹೇಳಲಾಗುವದಿಲ್ಲ. ಪ್ರಜಾಧರ್ಮಗಳು ಬೆಳೆದು ಜನರಲ್ಲಿ ಸಾರ್ವಜನಿಕ ಕಾರ್ಯ ಶ್ರದ್ಧೆಯು ಹೆಚ್ಚಬೇಕಾದರೆ ಯಾವ ವಿಧವಾದ ರಾಜಕೀಯ ಸೌಕರ್ಯಗಳಿರಬೇಕೋ ಅವು ಈ ದೇಶದಲ್ಲಿ ಉಂಟಾಗುತ್ತಿರುವುದು ಈಚೀಚೆಗೆ. ಸಾವಧಾನವಾದ ಪರಿಶ್ರಮದಿಂದಲೂ ಅನುಭವದಿಂದಲೂ ನಮ್ಮ ಜನರು ತಮಗಿರಬೇಕಾದ ರಾಜಕೀಯ ಕಾರ್ಯ ಯೋಗ್ಯತೆಯನ್ನು ಇನ್ನೂ ಸಂಪಾದಿಸಿಕೊಳ್ಳಬೇಕಾಗಿದೆ. ಅದಕ್ಕೆ ಕಾಲವು ಆವಶ್ಯಕ. ನಾವು ಬಿತ್ತುವ ಬೀಜವು ಎಷ್ಟೇ ಒಳ್ಳೆಯದಾದರೂ, ನಮ್ಮ ನೆಲವು ಎಷ್ಟೇ ಸಾರವುಳ್ಳದಾದರೂ, ನಮ್ಮ ವ್ಯವಸಾಯ ರೀತಿಯು ಎಷ್ಟೇ ಉತ್ತಮವಾದುದಾದರೂ, ಆ ಬೀಜವು ಮೊಳೆತು ಪೈರಾಗಿ ಫಲಕೊಡಲು ಕೆಲವು ವಾರಗಳಾದರೂ ಆಗಬೇಕಲ್ಲವೆ ? ಅದರ ವಿಷಯದಲ್ಲಿ ಆತುರಪಟ್ಟರೆ ಫಲವು ಕೈಗೂಡದು. ಅದೇ ರೀತಿಯಾಗಿ ಜನರ ಯೋಗ್ಯತೆಯು ಬೆಳೆಯುವುದಕ್ಕೆ ಸ್ವಲ್ಪ ಕಾಲ ಹಿಡಿಯುವುದು. ಅದನ್ನು ಮರೆತು, ಅವರು ಸರಿಯಾಗಿ ಉಪಯೋಗಿಸಿಕೊಳ್ಳಲಾಗದಷ್ಟು ದೊಡ್ಡ ಅಧಿಕಾರವನ್ನು ಅವರ ಕೈಗೆ ಕೊಟ್ಟರೆ, ಅದು ಅನರ್ಥಗಳಿಗೇ ಕಾರಣವಾಗಬಹುದು. ರಾಜಕೀಯಾಧಿಕಾರವು ಒಂದು ಹರಿತವಾದ ಕತ್ತಿಯಂತೆ. ತಕ್ಕ ಶಕ್ತಿ ಅನುಭವಗಳುಳ್ಳವರು ಅದನ್ನು ಹಿಡಿದು, ತಮ್ಮ ಕ್ಷೇಮವನ್ನೂ ಅಭ್ಯುದಯವನ್ನೂ ಸಾಧಿಸಿಕೊಳ್ಳಬಹುದು. ಅನನುಭವಸ್ಥರೂ ಅಶಕ್ತರೂ ಆ ಕತ್ತಿಯನ್ನು ತಿರುಗಿಸುವುದರಲ್ಲಿ ಕೈತಪ್ಪಿ, ತಮಗೇ ಹಾನಿಮಾಡಿಕೊಳ್ಳಬಹುದು. ಆದುದರಿಂದ ಪ್ರಜಾಯೋಗ್ಯತೆಗೆ ತಕ್ಕಷ್ಟು ರಾಜ್ಯಾಧಿಕಾರವನ್ನು ಮಾತ್ರವೇ ಸದ್ಯಕ್ಕೆ ಅವರ ಪರವಾಗಿ ಬಯಸಿ, ಅವರ ಯೋಗ್ಯತೆಯು ಬೆಳೆದಂತೆಲ್ಲ ಅವರು ಸ್ವಶಕ್ತಿಯಿಂದಲೇ ಇನ್ನೂ ಹೆಚ್ಚು ಅಧಿಕಾರವನ್ನು ಸಂಪಾದಿಸಿಕೊಳ್ಳಲಾಗುವಂತೆ ಮಾಡುವುದೇ ಒಟ್ಟಿನಮೇಲೆ ಶ್ರೇಯಸ್ಕರವಾದ ಮಾರ್ಗ. ಈ ತತ್ತ್ವವನ್ನು ಗೋಖಲೆಯವರು ಮನಸ್ಸಿನಲ್ಲಿಟ್ಟು—ಸದ್ಯಕ್ಕೆ ಒಂದು ಹೆಜ್ಜೆಯನ್ನು ಮುಂದಕ್ಕಿಡೋಣ; ಅದು ನಮಗೆ ಆಯಾಸವನ್ನುಂಟುಮಾಡದೆ, ಆ ಹೆಜ್ಜೆ ತಪ್ಪು

ಹೆಜ್ಜೆಯಾಗದೆ ಇದ್ದರೆ-ಇನ್ನೊಂದಡಿಯಿಡೋಣ ; ಅದೂ ಗಟ್ಟಿ ನೆಲದಲ್ಲಿ 'ಸರಿಯಾದ ದಿಕ್ಕಿಗೆ ಬಿದ್ದರೆ ಮತ್ತೊಂದಡಿ ಮುಂದೆ ಹೋಗೋಣ; ಈ ರೀತಿ ನಡೆದರೆ ದಿನೇ ದಿನೇ ಮುಂದು ಮುಂದಕ್ಕೆ ಸಾಗಿ, ಅಪಾಯವಿಲ್ಲದೆ ಉದ್ದಿಷ್ಟ ಸ್ಥಾನವನ್ನು ಸೇರುವೆವು—ಎಂದು ಹೇಳುವವರಾಗಿ, ಮಿತಪದ ಚಾರಿಗಳಾಗಿದ್ದರು.

(೩) ಗೋಖಲೆಯವರ ಮಿತವರ್ತನೆಯಲ್ಲಿ ಇನ್ನೂ ಒಂದು ಮರ್ಮ ವುಂಟು. ನಾವು ನಮ್ಮ ಸಾಮಾಜಿಕವಾದ ಮತ್ತು ರಾಜಕೀಯವಾದ ಸಂಸ್ಥೆಗಳಲ್ಲಿಯೂ ಸಂಪ್ರದಾಯಗಳಲ್ಲಿಯೂ ಯಾವ ವ್ಯತ್ಯಾಸಗಳನ್ನು ನಡಿಸಬೇಕಾಗಿದ್ದರೂ, ಆ ವ್ಯತ್ಯಾಸಗಳು ಕೂಡಿದಮಟ್ಟಿಗೂ ನಮ್ಮ ಸದ್ಯಃ ಸ್ಥಿತಿಗೆ ಅನುಸ್ಯೂತವಾದವುಗಳಾಗಿರುವುದೇ ಶ್ರೇಯಸ್ಕರ. ಹಾಗಿಲ್ಲದೆ ನಾವು ಮಾಡುವ ವ್ಯತ್ಯಾಸಗಳು ನಮ್ಮ ವರ್ತಮಾನ ಸ್ಥಿತಿಗೆ ಸಂಬಂಧ ಪಡದವುಗಳಾಗಿಯೂ, ನಮಗೆ ಹಿಂದಿನಿಂದ ಬಂದಿರುವ ಸಂಸ್ಥೆ ಸಂಪ್ರದಾಯಗಳನ್ನು ಸಂಪೂರ್ಣವಾಗಿ ನಿರ್ಮೂಲಮಾಡತಕ್ಕವುಗಳಾಗಿಯೂ ಇದ್ದರೆ, ಅಂತಹ ಮಾರ್ಪಾಟುಗಳು ಪರಿಣಾಮದಲ್ಲಿ ಹಿತಕರಗಳೆನಿಸಲಾರವು. ಎಳೆಯ ಮಗುವು ಬೆಳೆದು ದೊಡ್ಡವನಾಗಿ ಮುಪ್ಪಿಗೆ ಬರುವವರೆಗೂ—ಆಮೇಲೂ ಕೂಡ—ಅವನ ಅಂಗಾಂಗಗಳಲ್ಲಿ ವಿಧವಿಧವಾದ ವ್ಯತ್ಯಾಸಗಳು ನಡೆಯುತ್ತಲೇ ಇರುವುವಲ್ಲವೆ? ಅವುಗಳಲ್ಲಿ ಒಂದು ಮತ್ತೊಂದರಿಂದ ಸ್ವಾಭಾವಿಕವಾಗಿಯೇ ಉಂಟಾಗಬೇಕಾಗುವುದು. ಹಲ್ಲಿಲ್ಲದ ಬಾಯಲ್ಲಿ ಹಲ್ಲು ಹುಟ್ಟಿ, ಬಿದ್ದು, ಮತ್ತೆ ಹುಟ್ಟಿ, ಮತ್ತೆ ಬೀಳುವುದು. ಕೂದಲು ಕಾಣದ ಕಡೆ ಕೂದಲು ಹುಟ್ಟುವುದು ; ಇದ್ದ ಕಡೆ ಉದುರಿಹೋಗುವುದು. ಇನ್ನೂ ಎಷ್ಟೋ ಹೆಚ್ಚು ಕಡಿಮೆಗಳು ತಾವಾಗಿಯೇ ಆಗುತ್ತಿರುವುವು. ಅವುಗಳಲ್ಲಿ ಒಂದು ಅವತರಣಾನುಕ್ರಮವು, ಅಥವಾ ರೂಪ ವ್ಯತ್ಯಯ ಕ್ರಮವು, ಕಾಣಬರುತ್ತದೆ. ನಮ್ಮ ಅವಯವಗಳ ಯೌವನದ ಸ್ಥಿತಿಯು ಬಾಲ್ಯದ ಸ್ಥಿತಿಯಿಂದ ಹುಟ್ಟಿದುದು ; ಮುಪ್ಪಿನ ಸ್ಥಿತಿಯು ಯೌವನದ ಸ್ಥಿತಿಯಿಂದ ಹುಟ್ಟತಕ್ಕದ್ದು. ಈ ಲಕ್ಷಣ ವ್ಯತ್ಯಾಸದ ಪರಂಪರಾ ಕ್ರಮವನ್ನು, ಅಥವಾ ಕ್ರಮಿಕ ಪರಿಣಾಮವನ್ನು, ಇಂಗ್ಲೀಷಿನಲ್ಲಿ

"ಎವ್ರೊಲ್ಯೂಷನ್" ಎಂದು ಕರೆಯುತ್ತಾರೆ. ಅದೇ ಬಗೆಯ ಕ್ರಮಿಕತೆಯೇ ನಮ್ಮ ಸಾಮಾಜಿಕ ಸಂಸ್ಕಾರ ರಾಜಕೀಯ ಸಂಸ್ಕಾರಗಳಲ್ಲಿಯೂ ಕಾಣಬಂದರೆ, ಆ ಸಂಸ್ಕಾರಗಳು ಸ್ವಾಭಾವಿಕಗಳೆನಿಸಿ ಹಿತಕಾರಿಗಳಾಗುತ್ತವೆ. ಆದರೆ ಇದರಲ್ಲೊಂದು ವಿಶೇಷವುಂಟು. ದೇಹದಲ್ಲಿ ನಡೆಯುವ ವ್ಯತ್ಯಾಸಗಳೆಲ್ಲವೂ ಪ್ರಕೃತಿಸಿದ್ಧಗಳಾಗಿ—ಎಂದರೆ ಹೊರಗಿನವರ ಪ್ರಯತ್ನವಿಲ್ಲದೆ—ನಡೆಯತಕ್ಕುವೆಂದು ನಾವು ಹೇಳಿದರೂ, ಅವುಗಳಿಗೆ ಹೊರಗಿನವರ ಸಂಬಂಧವು ಯಾವ ಸಂದರ್ಭದಲ್ಲಿಯೂ ಉಂಟಾಗಲಾರದೆಂದು ಹೇಳಿದಂತಾಗಲಿಲ್ಲ. ಮಗುವನ್ನು ತಾಯಿ ದಾದಿಯರು ಎತ್ತಿ ಹಿಡಿದು, ನಿಲ್ಲಿಸಿ, ನಡೆಯಿಸಿ, ಆ ಮೂಲಕ ಅದರ ಕಾಲಿಗೆ ಬಲ ಬರುವಂತೆ ಮಾಡುತ್ತಾರೆ. ದೊಡ್ಡವರಿಗೆ ಆಹಾರದೋಷದಿಂದಲೋ, ಕೆಟ್ಟ ಗಾಳಿಯಿಂದಲೋ ಮತ್ತಾವ ಬಾಹ್ಯಕಾರಣದಿಂದಲೋ ಬೇನೆ ಬಂದು, ಯಾವ ಅಂಗವಾದರೂ ದುರ್ಬಲವಾಗಿ ತನ್ನ ಕೆಲಸವನ್ನು ಮಾಡದಿದ್ದರೆ, ವೈದ್ಯರು ಅದಕ್ಕೆ ಚಿಕಿತ್ಸೆಮಾಡಿ ಆ ಅಂಗವನ್ನು ಸರಿಪಡಿಸುತ್ತಾರೆ. ಹೀಗೆ ಮಕ್ಕಳ ಬೆಳೆವಳಿಗೆಗೂ ರೋಗಿಷ್ಟರ ಆರೋಗ್ಯ ಸಂಪಾದನೆಗೂ ಇತರರು ಕೊಡುವ ಕೃತಕ ಸಹಾಯವೂ ಅತ್ಯಾವಶ್ಯಕವಾಗಿದೆ. ಆದರೆ ಈ ಹೊರಗಿನಿಂದ ಬರತಕ್ಕ ಸಹಾಯವು ಮಗುವಿನ ಅಥವಾ ರೋಗಿಯ ವಯಸ್ಸಿಗೂ, ಪ್ರಕೃತಿಗೂ, ಶಕ್ತಿಗೂ ಅನುಗುಣವಾಗಿರಬೇಕು. ಈ ತತ್ತ್ವವನ್ನು ರಾಜ್ಯಸಂಸ್ಕಾರಕರೂ ಸಮಾಜ ಸಂಸ್ಕಾರಕರೂ ನೆನಪಿನಲ್ಲಿಟ್ಟುಕೊಳ್ಳುವುದು ಒಳ್ಳೆಯದು. ಏಕೆಂದರೆ ಮಗುವಿಗೆ ದಾದಿಯೂ, ರೋಗಿಗೆ ವೈದ್ಯನೂ ಹೇಗೋ ಸಮಾಜಕ್ಕೆ, ಅಥವಾ ರಾಜ್ಯಕ್ಕೆ, ಸಂಸ್ಕಾರಕರ್ತನು ಹಾಗೆ. ಅವರು ಮಾಡುವಂತೆ ಅವನೂ ನಿನ್ನಿನ ಸ್ಥಿತಿಯನ್ನರಿತು ಈ ದಿನದ ಚಿಕಿತ್ಸೆಯನ್ನು ನಿಶ್ಚಯಿಸಬೇಕು. ಈ ಹೊತ್ತಿನ ಸ್ಥಿತಿಯನ್ನು ನೋಡಿ ನಾಳಿನ ಕೆಲಸವನ್ನು ಗೊತ್ತುಮಾಡಬೇಕು. ನಾಳಿನ ಸ್ಥಿತಿಯಿಂದ ನಾಳಿದ್ದಿನ ಕರ್ತವ್ಯವನ್ನು ನಿಷ್ಕರ್ಷೆಮಾಡಬೇಕು. ಹಾಗೆ ಮಾಡದೆ ಒಂದೇ ದಿನದಲ್ಲಿ ಸರ್ವ ಸಲ್ಲಕ್ಷಣಗಳನ್ನೂ ಸಮಾಜಕ್ಕೆ ಉಂಟಾಗಿಸಬೇಕೆಂದರೆ, ಅದರಿಂದ ವಿಪರೀತ ಪರಿಣಾಮಗಳುಂಟಾದಾವು. ನಿಲ್ಲುವುದಕ್ಕೇ ಬಾರದ ಮಗು

ವನ್ನು ಓಡಿಸುವೆನೆಂದಾಗಲಿ, ಐದಾರು ಹೆಜ್ಜೆಯಿಡಬಲ್ಲ ಮಗುವನ್ನು ಒಂದೆರಡು ಮೈಲಿ ನಡಿಸುವೆನೆಂದಾಗಲಿ ಪ್ರಯತ್ನಿಸುವ ದಾದಿಯ ಕೆಲಸವು ಕೀರ್ತಿಗೆ ಕಾರಣವಾಗದು. ಹಾಲನ್ನು ಅರಗಿಸಿಕೊಳ್ಳುವುದಕ್ಕೇ ಕಷ್ಟ ಪಡುತ್ತಿರುವ ರೋಗಿಗೆ ಹಿಟ್ಟನ್ನು ತಿನ್ನಿಸುವೆನೆಂದು ಹೊರಡುವ ವೈದ್ಯನ ಕೆಲಸವೂ ಹಾಗೆಯೇ ಸರಿ. ರಾಜಕೀಯ ವಿಚಾರಗಳಲ್ಲಿ ಆತುರಪಡುವವರ ಬಾಳೂ ಅಷ್ಟೇ. ನಮ್ಮ ಉಡಿಗೆ ತೊಡಿಗೆಗಳ ವಿಷಯದಲ್ಲಿಯೂ, ನಮ್ಮ ಭಾಷೆಯ ವಿಷಯದಲ್ಲಿಯೂ, ನಮ್ಮ ಆಹಾರದ ವಿಷಯದಲ್ಲಿಯೂ, ನಮ್ಮ ವ್ಯವಹಾರ ಪದ್ಧತಿಗಳ ವಿಷಯದಲ್ಲಿಯೂ ನಾವು ಆಗಾಗ ಮಾಡಿಕೊಳ್ಳುವ ಬದಲಾವಣೆಗಳನ್ನು ಕಾಲಾನುಸಾರವಾಗಿ ಎಷ್ಟುಮಟ್ಟಿಗೆ ಆವಶ್ಯಕವೋ ಅಷ್ಟು ಮಾತ್ರ ಮಾಡಿಕೊಳ್ಳುವೆವೇ ಹೊರತು, ಪೂರ್ವದಿಂದ ಬಂದುದನ್ನೆಲ್ಲ ಸಂಪೂರ್ಣವಾಗಿ ಬಿಟ್ಟುಬಿಟ್ಟು, ಎಲ್ಲ ಬೇರೆಯಾದ ಉಡಿಗೆ ತೊಡಿಗೆ, ಎಲ್ಲ ಬೇರೆಯಾದ ಆಹಾರ, ಎಲ್ಲ ಬೇರೆ ಭಾಷೆ, ಎಲ್ಲ ಬೇರೆ ನ್ಯಾಯ ಪದ್ಧತಿಗಳನ್ನು ನಾವು ಹೊಸದಾಗಿ ಸೃಷ್ಟಿಮಾಡಿಕೊಳ್ಳುವುದಿಲ್ಲ. ಪೂರ್ವಿಕರು ಮಾಡಿಟ್ಟುದನ್ನು ನಮ್ಮ ಪ್ರಕೃತಕ್ಕೆ ತಳಹದಿಯಾಗಿಟ್ಟುಕೊಳ್ಳುತ್ತೇವೆ. ನಾವು ಮಾಡುವುದು ನಮ್ಮ ಮುಂದಿನವರಿಗೆ ತಳಹದಿಯಾಗಬೇಕೆನ್ನುತ್ತೇವೆ. ಹೊಸ ಸೃಷ್ಟಿಯು ನಮಗೆ ಸಾಧ್ಯವಲ್ಲ; ಅಲ್ಪಸ್ವಲ್ಪ ವ್ಯತ್ಯಾಸಗಳು ಮಾತ್ರವೇ ಸಾಧ್ಯ. ಆದಕಾರಣ ಹಿಂದಿನ ಸಂಸ್ಥೆ ಸಂಪ್ರದಾಯಗಳನ್ನು ಇಂದಿನ ವ್ಯವಸ್ಥೆಗೆ ಆಧಾರವಾಗಿಟ್ಟುಕೊಂಡು, ಇಂದಿನ ಪರಿಷ್ಕಾರಗಳನ್ನು ಮುಂದಿನ ವ್ಯವಸ್ಥೆಗೆ ಆಧಾರವಾಗುವಂತೆ ಮಾಡುವುದೇ ಉಚಿತ. ಇಂತಹ ಬದಲಾವಣೆಗಳಲ್ಲಿ ಅಪಾಯ ಕಡಿಮೆ, ಅನುಕೂಲ ಹೆಚ್ಚು; ಏಕೆಂದರೆ ಅವು ಅನುಭವದಿಂದ ಹುಟ್ಟತಕ್ಕವು. ಇಂದು ನಾವು ನಡಿಸುವ ಕೊಂಚದ ಬದಲಾವಣೆಯು ನಾಳೆ ನಡೆಯಿಸಬೇಕೆಂದಿರುವ ಹೆಚ್ಚಿನ ಬದಲಾವಣೆಗೆ ನಮ್ಮನ್ನು ತಯಾರುಮಾಡುವುದು; ನಾಳೆ ನಾವು ಮಾಡುವ ಬದಲಾವಣೆಯು ನಾಳಿದ್ದು ಬರಬೇಕಾದ ಬದಲಾವಣೆಗೆ ನಮ್ಮನ್ನು ಸಿದ್ಧಪಡಿಸುವುದು. ಹೀಗಲ್ಲದೆ, ಸದ್ಯಃ ಇರತಕ್ಕುದನೆಲ್ಲವನ್ನೂ ಒಂದೇ ಸಲ ಸಂಪೂರ್ಣವಾಗಿ ತೊಡೆದುಹಾಕಿಬಿಟ್ಟರೆ, ಮುಂದೆ ಅದರ ಸ್ಥಾನದಲ್ಲಿ ಯಾವುದನ್ನು ಪರ್ಯ

ಡಿಸಬೇಕೆಂದಿರುವೆವೋ ಅದರ ಅನುಭವವು ನಮಗಿಲ್ಲದಿರುವಕಾರಣ, ಅದರಿಂದ ಅವ್ಯವಸ್ಥೆ ಹುಟ್ಟಿ ನಮ್ಮ ಜೀವನವೆಲ್ಲವೂ ಅನನ್ವಯಕ್ಕೆ ಬರಬಹುದು. ಈ ಕಾರಣದಿಂದ, ಅನುಭವಾನುಸಾರವಾಗಿ ಕ್ರಮಶಃ ನಡೆಯುವ ವ್ಯತ್ಯಾಸ ಅಥವಾ ಪರಿಷ್ಕಾರಗಳೇ ಒಟ್ಟಿನಮೇಲೆ ಕ್ಷೇಮ ಪ್ರದಗಳೆಂದು ಗೋಖಲೆಯವರು ದೃಢವಾಗಿ ನಂಬಿದ್ದರು. ಕಾಂಗ್ರೆಸ್ಸಿನ ಉದ್ದೇಶ ನಿರೂಪಣೆಯಲ್ಲಿ (ಪುಟ ೩೭)—"ಈಗಿರುವ ರಾಜ್ಯಪದ್ಧತಿಯನ್ನು ಕ್ರಮಕ್ರಮವಾಗಿ ಮಾರ್ಪಡಿಸಿಕೊಂಡು ಬರುವುದರಿಂದ" ಸ್ವರಾಜ್ಯವನ್ನು ಸಾಧಿಸತಕ್ಕದ್ದು—ಎಂದು ನಿರ್ಣಯಿಸಿರುವುದಕ್ಕೆ ಗೋಖಲೆಯವರು ನಂಬಿದ್ದ ಕ್ರಮಿಕ ಸಂಸ್ಕಾರ ತತ್ತ್ವವೇ ಕಾರಣ. ಆ ತತ್ತ್ವವನ್ನೇ ಅವರು ಮಾರ್ಲೇಯವರ ಸುಧಾರಣೆಗಳನ್ನು ಕುರಿತು ಮಾಡಿದ ಉಪನ್ಯಾಸದಲ್ಲಿಯೂ ಸೂಚಿಸಿರುವರು.

---

## ಪ್ರಕರಣ ೭—ಅಪ್ಪಿಷ್ಟು ಸಮಾಧಾನ

ದೇಶ ಸೇವಕ ಸಂಘ—ಸ್ಟರ್ಜ್ ಮಿತ್ರರು—ಗುರುಪೂಜೆ—ಬಾಲ್ಯವಿದ್ಯಾ ಶಾಸನ—ಚಕ್ರವರ್ತಿಗಳ ಆಗಮನ—ರಾಜ್ಯಭೃತ್ಯ ವಿಚಾರ—ದಕ್ಷಿಣ ಆಫ್ರಿಕ.

ಗೋಖಲೆಯವರು ೧೯೦೮ರಲ್ಲಿ ಸ್ವದೇಶಕ್ಕೆ ಹಿಂದಿರುಗುವ ವೇಳೆಗೆ ಅವರಿಗೆ ಇಲ್ಲಿ ಲಭ್ಯವಾಗಿದ್ದ ಗೃಹಸುಖವು ತೀರ ಕಡಮೆಯದಾಗಿತ್ತು. ಬಾಲ್ಯದಿಂದಲೂ ಅವರನ್ನು ತಂದೆಯಂತೆ ಪೋಷಿಸುತ್ತಿದ್ದ ಅವರ ಅಣ್ಣಂದಿರು ಕಾಲಾಧೀನರಾಗಿದ್ದರು. ತಮ್ಮ ಇಬ್ಬರು ತಾಯಿಯಿಲ್ಲದ ಹೆಣ್ಣು ಮಕ್ಕಳ ಜೊತೆಗೆ, ಆ ಅಣ್ಣಂದಿರ ಕುಟುಂಬವನ್ನೂ ಕಾಪಾಡುವ ಭಾರವು ಗೋಖಲೆಯವರ ಪಾಲಿಗೆ ಬಂದಿತ್ತು. ಆದರೂ ಅವರು ಎದೆಗುಂದದೆ, ತಮ್ಮ ಆಜೀವವ್ರತವನ್ನು ಎಂದಿನಂತೆಯೇ ಆಚರಿಸುವವರಾಗಿದ್ದರು. ಆ ವ್ರತವು ಸಾಂಗವಾಗಿ ನೆರವೇರಿ ಲೋಕದಲ್ಲಿ ಬಹುಮಂದಿಯ ಅನುಷ್ಠಾನಕ್ಕೆ ಬರುವಂತೆ ಮಾಡಲು ಎರಡು ವರ್ಷಗಳ ಹಿಂದೆಯೇ ಅವರು ಒಂದು ದೊಡ್ಡ ಸಂಸ್ಥೆಯ ಸಮಾರಂಭವನ್ನು ನಡಿಸಿದ್ದರು. ನಿರಂತರವೂ ದೇಶ ಚಿಂತೆಯಲ್ಲಿ ಮನಸ್ಸುಳ್ಳವರಾಗಿ, ಮಾನವಕುಲ ಸೇವೆಯನ್ನೇ ಪರಮ ಧರ್ಮವೆಂದು

ಭಾವಿಸಿ ಪಾಟುಪಡತಕ್ಕ ವಿದ್ಯಾವಂತರು ಕೆಲವು ಮಂದಿಯಾದರೂ ಸಿದ್ಧರಾಗಿ ನಿಂತ ಹೊರತು ನಮ್ಮ ದೇಶವು ಏಳಿಗೆ ಹೊಂದಲಾರದೆಂಬ ಭಾವನೆಯು ಗೋಖಲೆಯವರಲ್ಲಿ ೧೦-೧೨ ವರ್ಷಗಳಿಂದಲೂ ಇತ್ತು. ಅದಕ್ಕಾಗಿ ಅವರು ಉದ್ದೇಶಿಸಿದ್ದ ಸಂಸ್ಥೆಯನ್ನು "ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿ"—ಭಾರತ ದೇಶ ಸೇವಕ ಸಂಘ—ಎಂಬ ಹೆಸರಿನಿಂದ ೧೯೦೫ರ ಜೂನ್ ೧೨ನೆಯ ತಾರೀಖಿನ ದಿವಸ ಪೂನಾ ಪಟ್ಟಣದಲ್ಲಿ ಸ್ಥಾಪಿಸುವವರಾದರು. ಅಂದು ಪ್ರಾತಃಕಾಲ ಗೋಖಲೆಯವರೂ ಅವರ ಮೂವರು ಅನುಯಾಯಿಗಳೂ ಈಗ ಆ ಸಂಘದ ವಸತಿಯಿರುವ ಪ್ರದೇಶದಲ್ಲಿ ಕಾಣುವ ಸಣ್ಣ ಗುಡ್ಡದ ಮೇಲೆ ಮಂಡಲಾಕಾರವಾಗಿ ಕುಳಿತು, ಸಂಘ ಸ್ಥಾಪನೆಗೆ-ಕೃತಸಂಕಲ್ಪರಾಗಲು, ಆಗ ಗೋಖಲೆಯವರು ಸಂಘಕ್ಕಾಗಿ ತಾವು ಗೊತ್ತು ಮಾಡಿದ್ದ ಪ್ರತಿಜ್ಞೆಗಳನ್ನು ತಾವು ಸ್ವೀಕಾರ ಮಾಡಿ, ಉಳಿದವರಿಗೂ ಅವುಗಳನ್ನು ಉಪದೇಶಕೊಟ್ಟು, ಒಂದು ಪುಸ್ತಕದಲ್ಲಿ ಆ ಸಂಗತಿಯನ್ನು ಲ್ಲೇಖಿಸಿದರು. ಬಳಿಕ ಅವರೆಲ್ಲರೂ ಅದರ ಕೆಳಗೆ ತಮ್ಮ ಹೆಸರುಗಳನ್ನು ಬರೆದರು. ಆ ಅನುಯಾಯಿಗಳು ಯಾರು ಯಾರೆಂದರೆ:—(೧) ಎನ್. ಎ. ದ್ರವಿಡ್, (೨) ಎ. ವಿ. ಪಟವರ್ಧನ್, (೩) ಜಿ. ಕೆ. ದೇವಧರ್. ಹೀಗೆ ಸಂಘವು ಪ್ರತಿಷ್ಠಿತವಾಗಿ ಕೆಲವು ತಿಂಗಳುಗಳಾದ ತರುವಾಯ, ಗೋಖಲೆಯವರು ಸಂಘಕ್ಕೆ ಸೇರಿದ್ದ ಮತ್ತು ಸೇರಲು ಸಿದ್ಧರಾಗಿ ಬಂದಿದ್ದ ತರುಣರನ್ನು ಭಾರತೀಯಕುಲ ಪಿತಾಮಹರೆನಿಸಿದ್ದ ದಾದಾಭಾಯಿ ನವರೋಜಿಯವರ ಬಳಿಗೆ ಕರೆದುಕೊಂಡುಹೋಗಿ, ತಮ್ಮ ಸಂಕಲ್ಪಗಳನ್ನು ಶ್ರುತಪಡಿಸಿ, ಅವರ ಆಶೀರ್ವಚನವನ್ನು ಸಂಪಾದಿಸಿಕೊಂಡು ಬಂದರು. ಆಗ ದಾದಾಭಾಯಿಯವರು ತಾವೇ ಅಂತಹ ಸಂಸ್ಥೆಯ ಯೋಚನೆಯನ್ನಿಟ್ಟುಕೊಂಡಿದ್ದಂತೆಯೂ ಗೋಖಲೆಯವರು ಅದನ್ನು ನೆರವೇರಿಸಿದ್ದರಿಂದ ತಮಗೆ ಪರಮಾನಂದವಾದಂತೆಯೂ ಅಪ್ಪಣೆ ಕೊಡಿಸಿದರು.

ಆ ಸಂಘಕ್ಕೆ ಸೇರಿದವರು ವಿದ್ಯಾವಂತರೂ ಒಳ್ಳೆಯ ನಡತೆಯುಳ್ಳವರೂ ಆಗಿ, ಸ್ವಪ್ರಯೋಜನಕ್ಕೆ ಸ್ವಲ್ಪವಾದರೂ ಆಶೆಪಡದೆ, ಸಂಘವು ಕೊಡಬಹುದಾದ ಅಲ್ಪ ದ್ರವ್ಯದಿಂದಲೇ ಸಂತುಷ್ಟರಾಗಿ, ಜಾತಿ ಮತ ಭೇದ

ಗಳನ್ನು ಮರೆತು, ಎಲ್ಲ ಭಾರತೀಯರೂ ಸಹೋದರರೆಂಬ ಒಂದೇ ಭಾವನೆ ಯಿಂದ ದೇಶಹಿತ ಕಾರ್ಯಗಳಲ್ಲಿ ನಿರತರಾಗಿರಬೇಕೆಂಬುದು ಅದರ ನಿಯಮ. ಈ ನಿಯಮವನ್ನು ಕೈಗೊಂಡಿರುವ ಸದಸ್ಯರು ಈಗ ಪೂನಾ, ಬೊಂಬಾಯಿ, ಮದ್ರಾಸು, ಅಲಹಾಬಾದು ಮುಂತಾದ ಸ್ಥಳಗಳಲ್ಲಿ ಸಂಘದ ಶಾಖೆಗಳ ನ್ನೇರ್ಪಡಿಸಿಕೊಂಡು ಕೆಲಸಮಾಡುತ್ತಿರುವರು. ಸಂಘವು 'ಜ್ಞಾನಪ್ರಕಾಶ' ವೆಂಬ ಮರಾಟೀ ದೈನಿಕ ವೃತ್ತ ಪತ್ರವನ್ನೂ, 'ಸರ್ವೆಂಟ್ ಆಫ್ ಇಂಡಿಯಾ' (ಭಾರತ ದೇಶ ಸೇವಕ) 'ಹಿತವಾದ' ಎಂಬ ಇಂಗ್ಲಿಷ್ ವೃತ್ತ ಪತ್ರಗಳನ್ನೂ ಇತರ ಪುಸ್ತಕ ಪತ್ರಿಕೆಗಳನ್ನೂ ಪ್ರಚಾರಗೊಳಿಸಿ, ಜನರಲ್ಲಿ ವಿವಿಧವಾದ ಉಪಯುಕ್ತ ಜ್ಞಾನವನ್ನೂ ರಾಜಕೀಯ ವಿವೇಚನೆಯನ್ನೂ ಹರಡುತ್ತಿದೆ. ಸಂಘದ ಸದಸ್ಯರು ಕೆಲವರು ಶಾಸನ ಸಭೆಗಳಲ್ಲಿಯೂ ಇತರ ಸಂಸ್ಥೆಗಳಲ್ಲಿಯೂ ಸೇರಿಯೂ, ವಿದೇಶಗಳಲ್ಲಿ ಸಂಚಾರಮಾಡಿಯೂ ಇಂಡಿಯಾ ದೇಶದ ಸ್ಥಿತಿಗತಿಗಳನ್ನು ಲೋಕಕ್ಕೆ ಪ್ರಕಟಪಡಿಸಿ, ಪ್ರಜಾಸು ಕೂಲ್ಯಗಳಿಗಾಗಿಯೂ ಸ್ವರಾಜ್ಯ ಸಂಪಾದನೆಗಾಗಿಯೂ ಹೋರಾಡುತ್ತಿರು ವರು. ಸ್ತ್ರೀವಿದ್ಯಾಪ್ರಚಾರ, ಪರಸ್ಪರ ಸಹಾಯ ಪ್ರಯತ್ನ, ಕೂಲಿಯು ಜನರ ಕ್ಷೇಮ, ಅಂತ್ಯಜರೇ ಮೊದಲಾದ ನಿಮ್ನ ಜನರ ಉದ್ಧಾರ— ಮುಂತಾದ ಉದ್ದೇಶಗಳಿಗಾಗಿಯೂ ಈ ಸಂಘದವರು ಕೆಲಸಮಾಡುತ್ತಿರು ವರು. ಅಲ್ಲದೆ ಕ್ಷಾಮ ಪ್ರಾಪ್ತವಾದ ಪ್ರದೇಶಗಳಲ್ಲಿಯೂ, ಜಲಪ್ರವಾಹ ಮೊದಲಾದ ಉಪದ್ರವಗಳು ಉಂಟಾದ ಕಡೆಗಳಲ್ಲಿಯೂ, ವ್ಯಾಧಿಪೀಡೆ ಗಳು ತಲೆದೋರಿದೆಡೆಗಳಲ್ಲಿಯೂ ಈ ಸಂಘದ ಸದಸ್ಯರುಗಳು ಹೋಗಿ ಜನರ ಕಷ್ಟನಿವಾರಣೆಗಾಗಿ ಶ್ರಮಪಟ್ಟಿರುವರು. ಮಲಬಾರಿನಲ್ಲಿಯೂ ಮದ ರಾಸು ಆಧಿಪತ್ಯದ ಇತರ ಭಾಗಗಳಲ್ಲಿಯೂ ಆಪತ್ಕಾಲಗಳಲ್ಲಿ ಜನರಿಗೆ ಅವರು ಒದಗಿಸಿದ ಸಹಾಯವನ್ನು ಎಲ್ಲರೂ ಮೆಚ್ಚಿಕೊಂಡಿರುವರು ಸಂಘದ ಸದಸ್ಯರುಗಳು ಸಂಘವು ಕೊಡುವ ಸ್ವಲ್ಪ ಮಾಸಾಶನದಿಂದಲೇ ಸಂತುಷ್ಟರಾಗಿ, ಯಾವ ದ್ರವ್ಯರೂಪವಾದ ಅಥವಾ ಕೀರ್ತಿರೂಪವಾದ ಪ್ರಯೋಜನವನ್ನೂ ಆಶಿಸದೆ, ನಯ ವಿನಯಗಳಿಂದ ಕೂಡಿದವರಾಗಿ, ತಮ್ಮ ಎಲ್ಲ ಶಕ್ತಿಗಳನ್ನೂ ಮತ್ತು ಎಲ್ಲ ಕಾಲವನ್ನೂ ಸಂಘದ ಧ್ಯೇಯ

ಗಳಿಗಾಗಿ ಧಾರೆಯೆರೆದಿರುವರು. ರಾಜಕೀಯ ವಿಚಾರಗಳಲ್ಲಿ ಈ ಸಂಘವು ಗೋಖಲೆಯವರ ಮತವನ್ನನುಸರಿಸಿ, ರಾಜ್ಯಸಂಸ್ಥೆಗೆ ಉತ್ಪಾತ ವನ್ನುಂಟುಮಾಡಿದ ರೀತಿಯಲ್ಲಿ, ಪ್ರಕೃತ ವ್ಯವಸ್ಥೆಯ ಕರಣ ಉಪಕರಣ ಗಳನ್ನೇ ಕೂಡಿದ ಮಟ್ಟಿಗೂ ಉಪಯೋಗಪಡಿಸಿಕೊಂಡು, ಪ್ರಜಾಧಿ ಕಾರವನ್ನು ಹೆಚ್ಚಿಸುವುದಕ್ಕೂ, ದೇಶೀಯೋನ್ನತಿಯನ್ನು ಸ್ಥಾಪಿಸುವು ದಕ್ಕೂ ದೇಶಸ್ವಾತಂತ್ರ್ಯವನ್ನು ಸಂಪಾದಿಸುವುದಕ್ಕೂ,—ಎಂದರೆ ಎಲ್ಲ ಬಗೆಯಲ್ಲಿಯೂ ಸ್ವರಾಜ್ಯವನ್ನು ಸಾಧಿಸುವುದಕ್ಕೋಸ್ಕರ ಪರಿಶ್ರಮಿಸುತ್ತಿದೆ. ಸಂಘದ ಪುಸ್ತಕ ಭಾಂಡಾಗಾರಗಳಲ್ಲಿ ಅರ್ಥಶಾಸ್ತ್ರ ರಾಜ್ಯಶಾಸ್ತ್ರಗಳಿಗೆ ಸಂಬಂಧಪಟ್ಟ ಗ್ರಂಥಗಳೂ ಲೆಕ್ಕಪತ್ರಗಳೂ ಹೇರಳವಾಗಿರುವುವು. ದೇಶ ಸೇವಾ ಯೋಗ್ಯತೆಯನ್ನು ಸಂಪಾದಿಸಬೇಕೆನ್ನುವವರಿಗೆ ಈ ಸಂಘಕ್ಕಿಂತ ಉತ್ತಮವಾದ ಪಾಠಶಾಲೆಯು ಯಾವುದೂ ಇರದು.

ಈ ದೇಶಸೇವಾವ್ರತ ಪ್ರವರ್ತನೆಯೇ ಗೋಖಲೆಯವರು ತಮ್ಮ ದೇಶೀಯರಿಗೆ ಮಾಡಿರುವ ಉಪಕಾರಗಳಲ್ಲಿ ಸರ್ವೋತ್ಕೃಷ್ಟವಾದುದೆಂಬುದ ರಲ್ಲಿ ಸಂಶಯವಿಲ್ಲ. ಸಂಘದ ನಿಬಂಧನೆಗಳ ಪುಸ್ತಕದಲ್ಲಿ ಅವರು "ದೇಶ ಸೇವೆಯೇ ದೇವರಸೇವೆ" ಎಂಬ ತತ್ತ್ವವು ಸರ್ವತ್ರ ಆಚರಣೆಗೆ ಬರುವಂತೆ ಮಾಡಬೇಕೆಂಬುದೇ ತಮ್ಮ ಪರಮುಧ್ಯೇಯವೆಂಬುದನ್ನು ಸೂಚಿಸಿರುವರು. ಗೋಖಲೆಯವರು ಆಡಿದ ಪ್ರತಿಯೊಂದು ಮಾತಿಗೂ, ಮಾಡಿದ ಪ್ರತಿಯೊಂದು ಕೆಲಸಕ್ಕೂ ಅವರ ಭಗವದ್ಭಕ್ತಿಯೇ ಮೂಲಾ ಧಾರವಾಗಿತ್ತು. ಅವರು "ಕಾಂಗ್ರೆಸ್" ಸಭಾಧ್ಯಕ್ಷರಾಗಿ ಕೊಟ್ಟ ಉಪನ್ಯಾಸದ ಉಪಸಂಹಾರದಲ್ಲಿ ತಮಗೆ ದೇವರಲ್ಲಿದ್ದ ನಂಬಿಕೆಯನ್ನೂ, ಶರಣಾಗತಭಾವವನ್ನೂ ವ್ಯಕ್ತಗೊಳಿಸಿರುವುದನ್ನು ಹಿಂದೆ ನೋಡಿರುವೆವು. ಅವರ ದೈವಭಕ್ತಿಯೇ ಅನುಷ್ಠಾನದಲ್ಲಿ ದೇಶಭಕ್ತಿಯ ಸ್ವರೂಪವನ್ನು ಪಡೆದಿದ್ದಿತು. ರಾಜಕೀಯ ಸಭೆಗಳಲ್ಲಿ ಕೂಡುವುದೂ, ಉಪನ್ಯಾಸಗಳನ್ನು ಹೇಳುವುದೂ, ಪತ್ರಿಕೆಗಳಲ್ಲಿ ಬರೆಯುವುದೂ ಸ್ವಪ್ರತಿಷ್ಠೆಗಾಗಿ ಅಲ್ಲವೆಂದೂ, ಅದು ಭಗವತ್ಪ್ರೀತ್ಯರ್ಥವಾದ ಲೋಕಸೇವೆಯೆಂದೂ, ದೇಶದ ರಾಜಕೀಯ ಪ್ರಸಂಗಗಳಿಗೆ ಕೈಹಾಕುವವನು ಅದು ಒಂದು ಬಗೆಯ ವಿನೋದ ಅಥವಾ

ಜೀವನೋಪಾಯ ಎಂದು ತಿಳಿಯದೆ, ಅದೂ ಒಂದು ಮಹಾ ದೀಕ್ಷೆ ಯೆಂದು ಭಾವಿಸಿ ಪರಿಶುದ್ಧ ಚಿತ್ತನಾಗಿಯೂ, ಶ್ರದ್ಧಾಳುವಾಗಿಯೂ ಇರ ಬೇಕೆಂದೂ ಅವರು ನಂಬಿದ್ದರು. ಇದನ್ನೇ ಅವರು ದೇಶಸೇವಕ ಸಂಘದ ನಿಬಂಧನೆಗಳಲ್ಲಿ ವಿವರಿಸಿ, ಆ ಸಂಘದ ಸದಸ್ಯರು ಕೈಗೊಳ್ಳಬೇಕಾದ ಪ್ರತಿಜ್ಞೆ ಗಳಲ್ಲಿ ಸೇರಿಸಿರುವರು. ಆ ಪ್ರತಿಜ್ಞೆಗಳು ಆ ಸಂಘದವರಿಗೆ ಮಾತ್ರವೇ ಅಲ್ಲದೆ ಸಕಲ ಭಾರತೀಯರಿಗೂ ಎಲ್ಲ ಕಾಲ ಎಲ್ಲ ಸ್ಥಿತಿಗಳಲ್ಲಿಯೂ ನೆನಪಿ ನಲ್ಲಿರಲು ಅರ್ಹವಾದವುಗಳಾದ ಕಾರಣ, ಅವುಗಳ ಸಾರವನ್ನು ಈ ಕೆಳಗೆ ಪದ್ಯ ರೂಪದಲ್ಲಿ ಕೊಟ್ಟಿದೆ :—

(ಕಂದ) ಎನ್ನಯ ಮಾನಸ ಭವನದೊ |
ಳುನ್ನತ ಪದವಿಯಲಿ ದೇಶ ಮಾತೆಯನಿರಿಸು ||
ತ್ತೆನ್ನಯ ಸರ್ವಸ್ವಮನಾ |
ಸನ್ನುತ ದೇವತೆಯ ಪಾದಕರ್ಪಿಸಿ ಮಣಿವೆಂ || ೧ ||

ರಾಜಕಟಾಕ್ಷಮುಮಂ ಮೇ |
ಣೀ ಜಗದ ಪೊಗಳ್ಕೆಯಂ ತೃಣೀಕರಿಸುತ್ತುಂ ||
ಭೂ ಜನನಿಯನತಿಮುದದಿಂ |
ಪೂಜಿಸುವೆಂ ಸ್ವಾರ್ಥಚಿಂತೆಯಂ ತೊರೆದನಿಶಂ || ೨ ||

ಭಾರತ ಭೂಸುತರೆಲ್ಲರು |
ಮಾರಯೆ ಸೋದರರೆ ಎಂದು ಭಾವಿಸುತೆಂದುಂ ||
ವೈರವನೊಗೆಯಿಪ ಭೇದವ |
ದೂರದಿ ಬಿಡುತವರ ಹಿತವ ಸಾಧಿಸುತಿರುವೆಂ || ೩ ||

ತನುಸೌಖ್ಯಮೆ ಪಿರಿದೆನ್ನದೆ |
ಧನದಾಸೆಯ ನೀಗಿ ಶುದ್ಧಕರಣ ತ್ರಯದಿಂ ||
ಘನಪಥದಿ ನಡೆದ ಸಂತರ |
ನನುವರ್ತಿಸಿ ತೃಪ್ತಿವಡೆದು ಧರ್ಮದಿ ನಲಿವೆಂ || ೪ ||

ಲೋಕಹಿತ ಕರಣವೊಂದೇ |
ಲೋಕಪಿತೃ ಪ್ರಿಯಮೆನಿಪ್ಪ ಪರತರ ಧರ್ಮಂ ||
ಆ ಕತದಿಂ ಭೂ ಜನನಿಯ |
ನಾಕೆಯ ಸುತ ಸುತೆಯರಂ ಚಿರಂ ಸೇವಿಸುವೆಂ || ೫ ||

ನಮ್ಮ ಭಗವದ್ಗೀತೆ ಮೊದಲಾದ ಶಾಸ್ತ್ರಗಳಲ್ಲಿ ದಾನ, ಯಜ್ಞ, ತಪಸ್ಸುಗಳ ಸ್ವರೂಪಗಳನ್ನೂ ಮಹಿಮೆಯನ್ನೂ ಬಗೆಬಗೆಯಾಗಿ ವರ್ಣಿಸಿರುವರು. ಅವುಗಳ ಮರ್ಮವನ್ನರಿತವರು ಗೋಖಲೆಯವರಲ್ಲಿ ಮೂರ್ತೀಭವಿಸಿದ್ದ, ಮತ್ತು ಅವರ ದೇಶಸೇವಕ ಸಂಘದ ಪ್ರತಿಜ್ಞೆಗಳಲ್ಲಿ ಅಡಕವಾಗಿರುವ, ಜೀವನ ದೀಕ್ಷೆಯನ್ನು ಅತ್ಯುತ್ತಮವಾದ ದಾನವೆಂದೂ, ಯಜ್ಞವೆಂದೂ, ತಪಶ್ಚರ್ಯೆಯೆಂದೂ, ಸಂನ್ಯಾಸವೆಂದೂ ಒಪ್ಪಿಕೊಳ್ಳಲು ತಡಮಾಡರು. ಪ್ರತಿಫಲಾಪೇಕ್ಷೆಯಿಲ್ಲದೆ, ಕೇವಲ ಈಶ್ವರಾರ್ಪಣ ಬುದ್ಧಿಯಿಂದ, ಲೋಕಹಿತವನ್ನೇ ಬಯಸಿ, ತಮ್ಮ ಜನ್ಮಭೂಮಿಯಲ್ಲಿರುವಷ್ಟುಮಟ್ಟಿನ ಮಾನವ ಕುಲಭಾಗವನ್ನಾದರೂ ಉತ್ತಮದಶೆಗೆ ತರಬೇಕೆಂದು ನಿರಂತರವೂ ಚಿಂತಿಸಿ, ಪಠಿಸಿ, ಚರ್ಚಿಸಿ, ಸಂಚರಿಸಿ, ವಾದಿಸಿ, ಬೋಧಿಸಿ, ಶ್ರಮಿಸಿ, ಉಪಕರಿಸುತ್ತಿರುವವರಿಗೆ ಸಂನ್ಯಾಸಿಯೆಂಬ ಹೆಸರು ಸಲ್ಲದಿದ್ದರೆ, ಆ ಗೌರವಾರ್ಹವಾದ ಬಿರುದನ್ನು ನಾವು ಮತ್ತಾರಿಗೆ ಕೊಡಬಹುದು?

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ |
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ ||

—ಭಗವದ್ಗೀತೆ, ೬-೧

ಈ ದೇಶದ ಜನರಿಗೆ ರಾಜಕೀಯ ವಿಚಾರಗಳಲ್ಲಿ ಆದರವನ್ನು ಹೇಗೆ ಕಲಿಸಬಹುದು, ಅವರನ್ನು ರಾಜಕೀಯದ ನಿದ್ರೆಯಿಂದ ಹೇಗೆ ಎಬ್ಬಿಸಲಾಗುವುದು, ಎಂಬುದೇ ಒಂದಾನೊಂದು ಕಾಲದಲ್ಲಿ ನಮ್ಮ ದೇಶಭಕ್ತರಿಗಿದ್ದ ದೊಡ್ಡ ಯೋಚನೆ. ಈಗ ಜನರು ಪ್ರಬುದ್ಧರಾಗಿರುವರು. ಇನ್ನು ಮುಂದೆ—ಅವರು ವಿವೇಚನಾ ಪೂರ್ವಕವಾಗಿ ನಡೆದುಕೊಳ್ಳುವಂತೆ ಮಾಡುವುದು ಹೇಗೆ, ಅವರ ಕಾರ್ಯ ರೀತಿಯು ದೊಂಬಿಯ ಗದ್ದಲದಂತೆ ಆಗದೆ ಇರುವುದಕ್ಕೆ ಏನು ಮಾಡಬೇಕು,—ಎಂಬುದೇ ದೊಡ್ಡ ಯೋಚನೆಯಾಗುವುದು. ಏಕೆಂದರೆ ಯಾವಾಗ ಬಗೆಬಗೆಯ ಗುಣ ಬುದ್ಧಿಗಳುಳ್ಳ ಜನರೂ, ಬಗೆಬಗೆಯ ಅಭಿಪ್ರಾಯ ಅನುಭವಗಳುಳ್ಳವರೂ, ಬಗೆಬಗೆಯ ವಿದ್ಯೆ ಸಂಪತ್ತುಗಳುಳ್ಳವರೂ ರಾಜ್ಯಕಾರ್ಯದಲ್ಲಿ ಸೇರುವರೋ, ಆವಾಗ ಅಲ್ಲಿ ಏಕಮುಖತೆಯು ಅಪರೂಪವಾಗಿ, ಬರಿಯ ಕೂಗಾಟವೂ ಹಾರಾ

ಟವೂ ಹೆಚ್ಚುವುದು ಸ್ವಾಭಾವಿಕವಾಗಿಯೇ ಇದೆ. ಅದರಲ್ಲಿಯೂ ರಾಜಕೀಯಾನುಭವವಿಲ್ಲದ ಸಾಮಾನ್ಯ ಜನರು ವಾಗ್ಮಿಗಳ, ಮಾತಿನ ಮಾಯೆಗೆ ಸುಲಭವಾಗಿ ಒಳಗಾಗುವರು. ಆವೇಶಪೂರಿತವಾದ ಭಾಷಣ ಗಳನ್ನು ಯಾರು ಮಾಡುವರೋ ಅವರೇ ಜನರ ಮುಖಂಡರೆಂದೆನ್ನಿಸಿ ಕೊಳ್ಳುವರು. ಇಂತಹ ಸಮಯದಲ್ಲಿ ವಿಧವಿಧವಾದ ಆಶೆಗಳನ್ನಿಟ್ಟು ಕೊಂಡಿರುವವರು ತಾವೇ ದೇಶೋದ್ಧಾರ ಮಾಡತಕ್ಕವರೆಂದು ಹೇಳಿ ಕೊಂಡು ಮುಂದೆ ಬರುವುದೂ, ಅವರ ಉಪನ್ಯಾಸ ಧೋರಣೆಗೆ ಜನರು ಮರುಳಾಗಿ ಅವರೇ ಪ್ರಜಾಪ್ರಮುಖರೆಂದು ಅವರನ್ನು ಅಂಗೀ ಕರಿಸುವುದೂ ಎಲ್ಲ ದೇಶಗಳಲ್ಲಿಯೂ ನಡೆಯತಕ್ಕ ಸಂಗತಿ. ಪ್ರಜಾಭಿಮಾನದ ವೇಷವನ್ನು ತಾಳಿರುವ ಮಾತಿನ ಮಾಟಗಾರರೇ ನಿಜವಾದ ಪ್ರಜಾಪ್ರಭು ತ್ವಕ್ಕಿರುವ ಮುಖ್ಯ ಶತ್ರುಗಳು. ಕೃತ್ರಿಮದ ಪ್ರಜಾಭಿಮಾನಿಗಳ ದಾಂಧಲೆ ಯನ್ನು ತಪ್ಪಿಸುವುದೇ ಪ್ರಜಾರಾಜ್ಯಕ್ಕೆ ಆಗಬೇಕಾಗಿರುವ ಮಹೋಪಕಾರ. ವರ್ತಮಾನ ಪತ್ರಿಕೆಗಳವರಿಗೆ ತಮ್ಮ ಬರೆವಣಿಗೆಯಲ್ಲಿ ಖಾರ ಹೆಚ್ಚಿದಷ್ಟೂ ತಮಗೆ ಚಂದಾದಾರರು ಹೆಚ್ಚುವರೆಂಬ ಆಶೆಯಿರುವುದೂ, ವಕೀಲರಿಗೆ ಸಾರ್ವಜನಿಕ ಸಂಸ್ಥೆಗಳಲ್ಲಿ ತಮ್ಮ ಗಂಟಲು ದಪ್ಪವಾದಷ್ಟೂ ತಮಗೆ ಕಕ್ಷಿಗಾರರ ವಿಶ್ವಾಸವೂ ಜಡ್ಜಿಗಳ ಆದರಣೆಯೂ ಹೆಚ್ಚಾಗಿ ದೊರೆಯು ವುದೆಂಬ ನಿರೀಕ್ಷಣೆಯಿರುವುದೂ ಅಸಂಭವವಲ್ಲ. ವರ್ತಕರಾದವರೂ ಸಹ ರಾಜಕೀಯ ವ್ಯವಹಾರಗಳಿಗೆ ಕೈಹಾಕುವುದರಲ್ಲಿ ಯಾವುದಾದರೊಂದು ಬಗೆಯ ಲಾಭದಮೇಲೆ ದೃಷ್ಟಿಯಿಟ್ಟಿರಬಹುದು. ಯಾವ ಕಸಬನ್ನೂ ಅವಲಂಬಿಸದೆ ಇರುವ ಜನರಲ್ಲಿಯೂ ಕೂಡ ಸರಕಾರದ ದೋಷಗಳ ಉದ್ಘಾಟನೆಯನ್ನೇ ಕಸಬಾಗಿಟ್ಟುಕೊಂಡಿರತಕ್ಕವರೂ ಇರುವುದುಂಟು. ಅಂಥವರಿಗೆ ಸ್ವಪ್ರತಿಷ್ಠೆಯ ಮೇಲೆಯೂ, ಅಧಿಕಾರಿಗಳನ್ನು ಭಯಪಡಿಸಿ ವಿಧೇಯರನ್ನಾಗಿ ಮಾಡಿಕೊಳ್ಳುವುದರ ಮೇಲೆಯೂ, ಜನರಿಂದ ಬಹುಮಾನ ಗಳನ್ನು ಪಡೆಯುವುದರಮೇಲೆಯೂ ಮನಸ್ಸಿರಬಹುದು. ಇದು ನಮ್ಮ ದೇಶದ ಪತ್ರಕರ್ತರು ವಕೀಲರು ವರ್ತಕರು ಮೊದಲಾದವರ ಕಸಬು ಗುಂಪುಗಳ ಮೇಲೆ ಒಟ್ಟಿಗೆ ನಾವು ಹೊರಿಸುವ ನಿಂದೆಯೆಂದು ಭಾವಿಸ

ಲಾಗದು. ಉತ್ತಮ ರೀತಿಯಲ್ಲಿ ದೇಶಸೇವೆ ಮಾಡಿ, ನ್ಯಾಯವಾಗಿ ಪ್ರಜಾಪ್ರಮುಖರೆಂದೆನ್ನಿಸಿಕೊಂಡಿರತಕ್ಕವರು ಎಷ್ಟೋ ಮಂದಿ ಆ ಗುಂಪುಗಳಲ್ಲಿ ಇದ್ದೇ ಇರುವರು. ಆದರೆ ಮೇಲೆ ಸೂಚಿಸಿರುವಂಥಾ ಆಶೆಗಳನ್ನು ಮನಸ್ಸಿನಲ್ಲಿಟ್ಟುಕೊಂಡಿರುವ ಜನರೂ ಬಗೆಬಗೆಯ ಕಸಬುಗಳಲ್ಲಿ, ಅಥವಾ ಪಂಗಡಗಳಲ್ಲಿ, ಇರುವುದು ಅಸಾಧ್ಯವಲ್ಲ. "ಉದರ ನಿಮಿತ್ತಂ ಬಹುಕೃತವೇಷಃ" ಎಂದು ವರ್ಣನೆಮಾಡಿದವರೂ, "ಯೇನಕೇನಾಪ್ಯುಪಾಯೇನ ಪ್ರಸಿದ್ಧಪುರುಷೋ ಭವ" ಎಂದು ಹಾಸ್ಯದ ಉಪದೇಶವನ್ನು ಕೊಟ್ಟವರೂ ಲೋಕದ ರೀತಿಯನ್ನರಿಯದವರಲ್ಲ. ಪ್ರಜಾಪ್ರಮುಖರೆಂದು ಹೆಸರಿಟ್ಟುಕೊಂಡವರು ಬಗೆಬಗೆಯ ಆಶೆ ಲೋಭಗಳಿಗೆ ವಶರಾಗಿ ರಾಜ್ಯಕಾರ್ಯಗಳನ್ನು ಕೆಡಿಸುತ್ತಿರುವರೆಂಬ ದೂರು ಈಚೀಚೆಗೆ ಪಾಶ್ಚಾತ್ಯ ರಾಜ್ಯಗಳಲ್ಲಿ—ತತ್ರಾಪಿ, ಪ್ರಜಾಪ್ರಭುತ್ವದ ನೆಲೆಮನೆಯೆನಿಸಿರುವ ಅಮೆರಿಕದಲ್ಲಿ—ಪ್ರಬಲವಾಗಿದೆ.

ಆದರಿಂದ ನಾವು ಗ್ರಹಿಸಬೇಕಾದ ತತ್ತ್ವವೇನೆಂದರೆ—ರಾಜ್ಯವಿಚಾರವು ನಾನಾತೆರದ ಜನಗಳ ಕೈಗೆ ಸಿಕ್ಕತಕ್ಕುದಾಗಿರುವುದರಿಂದಲೂ, ಆ ಜನರಲ್ಲಿ ಕಾಮಕ್ರೋಧಾದಿಗಳಿಗೆ ವಶರಾದವರು ಹೇರಳವಾಗಿರುವುದು ಸ್ವಾಭಾವಿಕವೇ ಆದುದರಿಂದಲೂ, ಅಂಥವರಿಂದ ರಾಜ್ಯತಂತ್ರವು ಕಳಂಕ ಹೊಂದದಂತೆ ನೋಡಿಕೊಳ್ಳುವುದಕ್ಕಾಗಿ ಪ್ರಜಾಸೇವೆಯೊಂದನ್ನೇ ತಮ್ಮ ಜೀವಿತ ಧರ್ಮವೆಂದು ಭಾವಿಸಿರತಕ್ಕವರು ದೇಶದಲ್ಲಿ ಕೊಂಚಮಂದಿಯಾದರೂ ಇರುವುದು ಅತ್ಯಂತ ಆವಶ್ಯಕ—ಎಂಬುದು. ರಾಜಕೀಯ ಕ್ಷೇತ್ರವು ಆಶೆ ಮಾತ್ಸರ್ಯಗಳಿಗೆ ಆಶ್ರಯಸ್ಥಾನ. ಅದರಲ್ಲಿ ದುರಾಕ್ಷೇಪಣೆಗಳೂ ದುರಾಗ್ರಹಗಳೂ ಮಿತಿಮೀರಿದಷ್ಟು ಇರುವುವು. ಶಾಂತಿ ಸಮಾಧಾನಗಳನ್ನು ಸೂರೆಗೊಳ್ಳುವುದೇ ಅದರ ಸ್ವಭಾವ. ಆದರೆ ಸಾತ್ತ್ವಿಕರೂ ಸಾಧುಚರಿತರೂ ಅದನ್ನು ಪಾಪಭೂಮಿಯೆಂದು ತೊರೆದುಬಿಟ್ಟರೆ, ಅವರು ದುಷ್ಟರಿಗೇ ಅಲ್ಲಿ ಮತ್ತಷ್ಟು ಅವಕಾಶವೊದಗಿಸಿದಂತಾಗುವುದು. ಎಲ್ಲಿ ಒಳ್ಳೆಯ ಗಾಳಿ ಪ್ರವೇಶಿಸುವುದಿಲ್ಲವೋ ಅಲ್ಲಿ ಕೆಟ್ಟ ಗಾಳಿ ತಾನಾಗಿ ತುಂಬುವುದು ನಮ್ಮೆಲ್ಲರ ಅನುಭವದ ಸಂಗತಿ. ರಾಜಕೀಯವು ಎಂತಾದರೂ

ದೇಶದಲ್ಲಿ ಯಾವಾಗಲೂ ಇದ್ದೇ ಇರುವುದರಿಂದ, ಸಜ್ಜನರು ಅಲ್ಲಿ ಪ್ರವೇಶಮಾಡವೆಂದರೆ ದುಷ್ಟರು ಅಲ್ಲಿ ನೆಲಸಲು ಸಿದ್ಧರಾಗಿಯೇ ಇರುವರು. ಹೀಗಿರುವಾಗ, ರಾಜಕೀಯದಲ್ಲಿ ದೇಶದ ಸಜ್ಜನರೂ ಮಾನಿಷ್ಠರೂ ಹೆಚ್ಚು ಹೆಚ್ಚಾಗಿ ಸೇರಬೇಕೆಂಬುದು ದೇಶಕ್ಷೇಮಕ್ಕೆ ಆವಶ್ಯವಾದ ಮೊದಲನೆಯ ಸಂಗತಿ. ಇಂತಹ ಸಿಜವಾದ ಪ್ರಜೋಪಕಾರಕರನ್ನು ತಯಾರುಮಾಡಿ ಒದಗಿಸಬೇಕೆಂಬುದೇ ಗೋಖಲೆಯವರ ಸಂಘದ ಉದ್ದೇಶ. ಇತರರು ಪ್ರಜೆಗಳಲ್ಲಿ ಪ್ರತಿಷ್ಠೆ ಸಂಪಾದಿಸಬೇಕೆಂಬ ಆಶೆಯಿಂದ ಅಧಿಕಾರಿಗಳನ್ನು ನಿಂದಿಸಬಹುದು; ಗೋಖಲೆಯವರ ಶಿಷ್ಯರು ಕಾರಣವಿಲ್ಲದೆ ಯಾರನ್ನೂ ನಿಂದಿಸಕೂಡದು. ಇತರರು ತಾವು ದೃಢವ್ರತರೆಂದು ತೋರಿಸಿಕೊಳ್ಳುವುದ ಕ್ಕೋಸ್ಕರ ತಮ್ಮ ದಾರಿಯೇ ಸರಿಯಾದುದೆಂದು ಹಠ ಹಿಡಿಯಬಹುದು; ಗೋಖಲೆಯವರ ಶಿಷ್ಯರು ಯಾವ ದಾರಿಯಲ್ಲಿ ದೇಶಹಿತವು ಸಂಪಾದನೆ ಯಾದೀತೋ,—ಆ ದಾರಿಯು ಯಾರದೇ ಆಗಿದ್ದರೂ,—ಅದನ್ನು ಹೊಗಲು ಹಿಂದೆಗೆಯಬಾರದು. ಇತರರು ಸರಕಾರವನ್ನು ಕೆಣಕುವುದಕ್ಕೂ ಜನರನ್ನು ರೇಗಿಸುವುದಕ್ಕೂ ಆತುರಪಡಬಹುದು; ಗೋಖಲೆಯವರ ಶಿಷ್ಯರು ಕಠಿಣ ವಚನಗಳನ್ನು ಆವಶ್ಯಕವಾದಾಗ ಮಾತ್ರ ಉಪಯೋಗಿಸಬಹುದೇ ವಿನಾ, ಸಾಧ್ಯವಾದಮಟ್ಟಿಗೂ ಎಲ್ಲರನ್ನೂ ಒಡಂಬಡಿಸಿಯೇ ಕಾರ್ಯಸಾಧನೆ ಮಾಡಿಕೊಳ್ಳಲು ಯತ್ನಿಸಬೇಕು. ಒಂದು ಮಾತಿನಲ್ಲಿ—ಇತರರಿಗೆ ಕಾಮ ಕ್ರೋಧ ಅಸೂಯೆಗಳು ಇರುವುದುಂಟು; ಗೋಖಲೆಯವರ ಶಿಷ್ಯರಿಗೆ ಅವು ಒಂದೂ ಇಲ್ಲದೆ ನ್ಯಾಯವೊಂದೇ ಬೇಕಾಗಿರುವುದು. ಅಲ್ಲದೆ, ನ್ಯಾಯವಾವುದೆಂಬುದನ್ನು ನಿರ್ಧರಿಸಲು ಇತರರು ಬೇಕಾದಷ್ಟು ಶ್ರಮ ಪಡದೆ ಇರಬಹುದು; ಗೋಖಲೆಯವರ ಶಿಷ್ಯರು ಹಾಗಿರಲಾಗದು. ಅವರು ನ್ಯಾಯವಾವುದೆಂಬುದನ್ನು ತಿಳಿಯಲು ಪ್ರಸಕ್ತ ವಿಷಯಗಳನ್ನೆಲ್ಲ ಕೂಲಂ ಕಷವಾಗಿ ವಿಚಾರಮಾಡಿ, ಬಹು ಮುಖವಾಗಿ ಆಲೋಚಿಸಿ, ಬಾಯಿಂದಲೂ ದೇಹದಿಂದಲೂ ಮಾತ್ರವಲ್ಲದೆ ಬುದ್ಧಿಯಿಂದಲೂ ದೇಶಕ್ಕಾಗಿ ದುಡಿಯಬೇಕು.

ನಮ್ಮ ದೇಶದಲ್ಲಿ ಪ್ರಜಾ ಧರ್ಮವೆಂಬುದು ಲುಪ್ತವಾಗಿ ಹೋಗಿ ಎಷ್ಟೋ ಕಾಲವಾಯಿತು. ದೇಶಕ್ಕಾಗಿ ದುಡಿಯುವವರ ವಿಷಯದಲ್ಲಿ

ಈಗ ಸರ್ವಸಾಧಾರಣವಾಗಿರುವ ಭಾವನೆಯನ್ನು "ಊರ ಚಿಂತೆ ಕಟ್ಟಿ ಕೊಂಡು ವೀರಶೆಟ್ಟಿ ಬಡವಾದ"—ಎಂಬ ಗಾದೆಯು ತಿಳಿಸುತ್ತದೆ. ನಾಲ್ಕಾರು ಜನರಿಗೆ ಸಂಬಂಧಪಟ್ಟ ಕೆಲಸಕ್ಕೆ ಯಾರನ್ನು ಕರೆದರೂ, "ನಮಗೇಕೆ ಆ ತಂಟೆ ?" ಎಂದು ಅವರು ಹೇಳುವುದು ನಮ್ಮಲ್ಲಿ ವಾಡಿಕೆಯಾಗಿದೆ. ಆ ಕೆಲ ಸವು ಆವಶ್ಯಕವೆಂದು ಒಪ್ಪಿಕೊಂಡವರೂ, "ಅದನ್ನು ಯಾರಾದರೂ ಮಾಡ ಬೇಕು" ಎಂದು ಹೇಳುವರೇ ಹೊರತು "ಅದಕ್ಕೆ ನಾನೂ ಬರುವೆನು" ಎಂದು ಸಾಮಾನ್ಯವಾಗಿ ಹೇಳರು. ಊರಿನ ಚಿಂತೆಯನ್ನು ಕಟ್ಟಿಕೊಂಡ ವನು ಬಡವಾಗುವುದೇನೋ ದಿಟವೇ. ಆದರೆ, ದೇಶದಲ್ಲಿ ವಿದ್ಯಾಬುದ್ಧಿ ಸಂಪನ್ನರಾದವರು ಹಾಗೆ ಊರ ಚಿಂತೆಯಿಂದ ನವೆದು ಬಡವಾಗಲು ಹಿಂದೆ ಗೆಯದವರಾಗಿ, ಉತ್ಸಾಹದಿಂದ ಮುಂಡೆ ಬಂದು ದುಡಿದು,—ಮೇಲಿನ ಹಾಸ್ಯದ ಗಾದೆಗೆ ಪ್ರತಿಯಾಗಿ—"ವೀರಶೆಟ್ಟಿಯ ದಯೆಯಿಂದ ಊರಪಾಡು ಮೇಲಾಯಿತು" ಎಂಬ ಕೃತಜ್ಞತೆಯ ಗಾದೆಯು ಜನರಲ್ಲಿ ರೂಢಿಗೆ ಬರುವಂತೆ ಕೆಲಸಮಾಡುವವರೆಗೂ, ನಮ್ಮ ದೇಶದ ದುಃಸ್ಥಿತಿಯ ನಿವಾರ ಣೆಗೆ ನಿಜವಾದ ಮಾರ್ಗವಿರದು. ದೇಶದ ಸಂಪತ್ತಿಗೂ ಯಶಸ್ಸಿಗೂ ಮೂಲಭೂತವಾದುದು ಪ್ರಜಾ ಧರ್ಮ. ಆ ಧರ್ಮವನ್ನು ಬೋಧಿಸಿ ಪ್ರಚುರಪಡಿಸಲು ಹುಟ್ಟಿರುವ ಮಠವೇ ಗೋಖಲೆಯವರ ಸಂಘವೆಂದು ಹೇಳಬಹುದು. ದೇಶ ಸೇವಕ ಸಂಘವೇ ತಮ್ಮ ಮಗನೆಂದು ಗೋಖಲೆ ಯವರು ತಿಳಿದಿದ್ದರು. ಆ ಮಗನು ಚಿರಕಾಲ ಯಶಸ್ವಿಯಾಗಿ ಬಾಳಲಿ ಎಂದು ಎಲ್ಲಾ ದೇಶಾಭಿಮಾನಿಗಳೂ ಏಕಮನಸ್ಕರಾಗಿ ಹರಸುವರು.

ಮಾರ್ಲೇ ಮಿಂಟೋ ಅವರುಗಳಿಂದಾದ ರಾಜ್ಯಾಂಗ ಸಂಸ್ಕರಣದ ಕಥೆಯನ್ನು ಹಿಂದೊಂದು ಪ್ರಕರಣದಲ್ಲಿ ಬರೆದುದಾಗಿದೆ. ಆದರೆ ಆ ಸಂಸ್ಕ ರಣವು ಕಾರ್ಯರೂಪಕ್ಕೆ ಬರುವುದಕ್ಕೆ ಮುಂಚೆ ಗೋಖಲೆಯವರು ಎಷ್ಟು ಚಿಂತೆ ಕಳವಳಗಳನ್ನನುಭವಿಸಬೇಕಾಗಿತ್ತೆಂಬುದನ್ನು ತಿಳಿಸಲು ಗ್ರಂಥ ಲೇಖಕನ ಬರೆವಣಿಗೆ ಮಾತ್ರವೇ ಸಾಲದು ; ವಾಚಕರ ಊಹಾ ಶಕ್ತಿಯೂ ಅವನ ಲೇಖಣಿಗೆ ನೆರವಾಗಿ ಬರಬೇಕು. ಗೋಖಲೆಯವರ ಮನಸ್ಸು ಅತಿ ನಯವಾದುದು, ಅತಿ ಸೂಕ್ಷ್ಮವಾದುದು. ಬಲು ಹಗುರವಾದ ಸ್ಪರ್ಶನ

ದಿಂದಲೂ ಬಲು ಸಣ್ಣದಾದ ವಾಯು ಚಲನೆಯಿಂದಲೂ ಸಹ ವೀಣೆ ವೇಣು ಗಳಲ್ಲಿ ಸ್ವರಗಳು ಹುಟ್ಟುವಂತೆ, ರಾಜಕೀಯ ಸನ್ನಿವೇಶಗಳ ಅತಿ ಸೂಕ್ಷ್ಮ ವ್ಯತ್ಯಾಸಗಳಿಂದಲೂ ಅವರ ಮನಸ್ಸಿನಲ್ಲಿ ದೊಡ್ಡ ಭಾವ ವಿಭಾವಗಳು ಉತ್ಪನ್ನ ವಾಗುತ್ತಿದ್ದುವು. ಅಷ್ಟು ಸವುರಾದ ಸ್ವಭಾವದವರಿಗೆ, ದೇಶೀಯರ ಅತಿ ವಾದಗಳೂ ವಿದೇಶೀಯರ ಪ್ರತಿವಾದಗಳೂ ಪರಸ್ಪರೋದ್ರೇಕವನ್ನುಂಟು ಮಾಡಿಕೊಂಡು ಬೆಳೆಯುತ್ತಿದ್ದ ಕಾರಣದಿಂದ ಎಷ್ಟರಮಟ್ಟಿನ ಆಯಾಸವಾಗಿರ ಬೇಕೆಂಬುದನ್ನು ವಾಚಕರು ಊಹಿಸಬಹುದು. ಸ್ವದೇಶೀಯರಿಂದ ಆದುದು ಅತಿವಾದವು ಮಾತ್ರವೇ ಅಲ್ಲ; ಅತ್ಯಾಚಾರಗಳೂ ಕೆಲವು ನಡೆದುವು :— ಇಂಡಿಯದಲ್ಲಿ ಮಾತ್ರವೇ ಅಲ್ಲದೆ ಇಂಗ್ಲಂಡಿನಲ್ಲಿಯೂ ಆಂಗ್ಲೇಯ ಅಧಿ ಕಾರಿಗಳ ಮೇಲೆ "ಬಾಂಬ್" ಗುಂಡುಗಳ ಪ್ರಹಾರವಾಯಿತು. ಬಾಂಬು ಗಳನ್ನು ತಯಾರು ಮಾಡುವುದಕ್ಕೆ ಒಂದು ಕಾರ್ಖಾನೆಯೂ ಅವುಗಳನ್ನು ಅಲ್ಲಲ್ಲಿ ಪ್ರಚುರಪಡಿಸುವುದಕ್ಕೂ ಪ್ರಯೋಗಿಸುವುದಕ್ಕೂ ಒಂದು ಸಂಘವೂ ಹುಟ್ಟಿಕೊಂಡಿದ್ದುವು. ಹೀಗೆ ದೇಶೀಯರ ಅತಿವಾದದಿಂದ ವಿದೇಶೀಯ ರಲ್ಲಿ ಪ್ರತಿವಾದ; ಅವರ ಪ್ರತಿವಾದದಿಂದ ದೇಶೀಯರಲ್ಲಿ ಅತ್ಯಾಚಾರ; ಆ ಅತ್ಯಾಚಾರಗಳಿಂದ ವಿದೇಶೀಯರಲ್ಲಿ ಮತ್ತಷ್ಟು ಕ್ರೋಧಾವೇಶ; ಆ ಕ್ರೋಧಾವೇಶದಿಂದ ದೇಶೀಯರಿಗೆ ಇನ್ನಷ್ಟು ಚಿತ್ತಕ್ಷೋಭೆ; ಆ ಚಿತ್ತ ಕ್ಷೋಭೆಯಿಂದ ವಿದೇಶೀಯರಲ್ಲಿ ಮತ್ತಷ್ಟು ಧಾರ್ಷ್ಟ್ಯ—ಈ ರೀತಿಯಾಗಿ ಕಾರ್ಯಕಾರಣ ಸರಣಿಯು ಬೆಳೆದು ಮಾರ್ಲೇಯರವರ ಕೆಲಸವು ಮುಂದೆ ಸಾಗದಂತೆ ಅಡಿಗಡಿಗೂ ಅಡ್ಡಬರುತ್ತಿತ್ತು. ಆಗ ಗೋಖಲೆಯವರ ಮನಸ್ಸು ಭರವಸೆಗೂ ನಿರಾಶೆಗೂ ಮಧ್ಯೆ ಡೋಲಾಯಮಾನವಾಗಿತ್ತು. ಒಂದುಕಡೆ ಮಾರ್ಲೇಯರವರ ಸ್ನೇಹದಲ್ಲಿ ನಂಬಿಕೆ; ಇನ್ನೊಂದುಕಡೆ ಸ್ವದೇಶೀಯ ವಿದೇಶೀಯರುಗಳ ವಾದ ವೈಪರೀತ್ಯಗಳ ದೆಸೆಯಿಂದ ಭಯ; —ಇವೆರಡಕ್ಕೂ ನಡುವೆ ಅವರು ಅಶಾಂತರಾಗಿ ತಲ್ಲಣಿಸುತ್ತಿದ್ದರು. ಆ ಕಾಲದಲ್ಲಿ ಅವರ ಅಂತರಂಗದ ಸ್ಥಿತಿ ಹೇಗಿತ್ತೆಂಬುದನ್ನು ಮಿಸ್ ಸ್ಟರ್ಜ಼ ಎಂಬ ಆಂಗ್ಲೇಯ ಸಾಧ್ವಿಗೆ ಅವರು ಬರೆದ ಕಾಗದದಿಂದ ತಿಳಿಯಬಹುದು.

ಸ್ಟರ್ಜ್* ಎಂಬವರು ಬರ್ಮಿಂಗ್‌ಹ್ಯಾಂ ಪಟ್ಟಣದ ಬಳಿ ವಾಸವಾಗಿದ್ದರು. ಅವರು "ಕ್ವೇಕರ್" ಎಂಬ ವೀರ ಕ್ರೈಸ್ತ ಪಂಗಡಕ್ಕೆ ಸೇರಿದವರು. ಗೋಖಲೆಯವರು ಇಂಗ್ಲೆಂಡಿನಲ್ಲಿದ್ದ ಕಾಲದಲ್ಲಿ ಆ ಪ್ರಾಂತ ಹೋದಾಗ ಅವರ ಮನೆಯಲ್ಲಿ ಇಳಿದುಕೊಂಡಿದ್ದರು. ಆ ಕುಟುಂಬದಲ್ಲಿದ್ದವರು ಸ್ಟರ್ಜ್ ಎಂಬ ಹೆಸರಿನ ಮುದುಕನೊಬ್ಬನು, ಆತನ ಸಹೋದರಿ ಅದೇ ಹೆಸರಿನ ಮುದುಕಿಯೊಬ್ಬಳು—ಇವರಿಬ್ಬರೇ. ಅವರು ಅವಿವಾಹಿತರಾಗಿದ್ದು, ತಮ್ಮ ಆಯುಷ್ಯವೆಲ್ಲವನ್ನೂ ಧರ್ಮಕಾರ್ಯಗಳಿಗೆ ವಿನಿಯೋಗಿಸಿದ್ದರು. ಗೋಖಲೆಯವರು ಆ ವೃದ್ಧ ಸಾಧುಗಳಲ್ಲಿ ವಿಶ್ವಾಸ ಬೆಳಸಿ ಅವರಿಗೆ ಆಗಾಗ ಕಾಗದಗಳನ್ನು ಬರೆಯುತ್ತಿದ್ದರು. ಅವುಗಳಲ್ಲಿ ಪ್ರಕೃತ ನಮಗೆ ಬೇಕಾದ ಪತ್ರವು ಹೀಗಿರುವುದು :—

ಪೂನಾ, ಸೆಪ್ಟಂಬರ್ ೧೦ನೆಯ ತಾ|| ೧೯೦೯—ನಾನು ಮಲೇರಿಯಾ ಜ್ವರದಿಂದ ಮಲಗಿದ್ದೆ. ಈ ಜ್ವರವು ಆಗಸ್ಟಿನ ಕಡೆಯವರೆಗೂ ನನ್ನನ್ನು ಹಟದಿಂದ ಹಿಡಿದಿತ್ತು. ನನಗೆ ಕೆಲಸಮಾಡುವುದಕ್ಕೂ ಕಾಗದ ಬರೆಯುವುದಕ್ಕೂ ಪುನಃ ಶಕ್ತಿ ಬಂದಿರುವುದು ಕಳೆದ ಹತ್ತು ದಿನಗಳಿಂದ ಈಚೆಗೆ. ಕರ್ಜನ್-ವಿಲ್ಲಿಯ † ಕೊಲೆಯು ನಮ್ಮ ಕಾರ್ಯಕ್ಕೆ ಬಹುಮಟ್ಟಿಗೆ ವಿಘ್ನಮಾಡಿದೆ ಎಂಬುದಕ್ಕೆ ಸಂಶಯವಿಲ್ಲ ; ಆದರೆ ಅದು ನಮ್ಮಲ್ಲಿ ಅತಿವೇಗ ಪಕ್ಷಕ್ಕೆ ಸೇರಿದ್ದವರನೇಕರನ್ನು ಯುಕ್ತಾಯುಕ್ತ ವಿವೇಚನೆಗೆ ಹಿಂದಿರುಗಿಸಿದೆಯೆಂದು ನನಗೆ ಕಾಣುತ್ತದೆ. ನಮ್ಮ ವಿಚಾರವೇನೋ ಅತ್ಯಂತ ದುಷ್ಕರವಾದುದೇ ಸರಿ. ಪ್ರಪಂಚದಲ್ಲಿ ಮತ್ತಾವ ದೇಶವೂ ಎಂದೂ ಈಗ ನಮಗಿರುವಂಥಾ ಕಷ್ಟವಿಚಾರಕ್ಕೆ ಎದೆಕೊಡಬೇಕಾಗಿರಲಿಲ್ಲವೆಂದು ನಾನು ಆಗಾಗ ಅಂದುಕೊಳ್ಳುತ್ತೇನೆ. ಈ ದೇಶದಲ್ಲಿ ಕೊನೆಯಿಲ್ಲದಷ್ಟು ಕಕ್ಷಿ ವಿಕಕ್ಷಿಗಳು ; ಪ್ರಜೆಯಲ್ಲಿ ಬಹುಮಂದಿ ವಿದ್ಯಾವಿಹೀನರು ; ಅವರಿಗಾದರೋ ಲೋಕ

---

* ಸ್ಟರ್ಜ್ ಸೋದರ ಸೋದರಿಯರ ಸಮಾಚಾರವನ್ನೂ, ಗೋಖಲೆಯವರು ಅವರಿಗೆ ಬರೆದ ಕಾಗದಗಳನ್ನೂ ಮ|| ಸಿ. ಎಫ್. ಆಂಡ್ರೂಸ್ ಅವರು "ಸರ್ವೆಂಟ್ ಆಫ್ ಇಂಡಿಯಾ" ಪತ್ರಿಕೆಯಲ್ಲಿ ಪ್ರಕಟಗೊಳಿಸಿರುವರು. ಆಂಡ್ರೂಸ್ ಅವರು ಭಾರತೀಯರಿಗೆ ಮಾಡಿರತಕ್ಕ ಅನೇಕ ಅಮೋಘವಾದ ಉಪಕಾರಗಳಲ್ಲಿ ಇದೂ ಒಂದು.

† ಕರ್ಜನ್-ವಿಲ್ಲೀ ಎಂಬ ಆಂಗ್ಲೇಯ ಮಹಾಶಯನು ಇಂಗ್ಲೆಂಡಿನಲ್ಲಿ ಮಾರ್ಲೀ ಮಂತ್ರಿಗಳ ಕೈಕೆಳಗಿನ ಒಬ್ಬ ಅಧಿಕಾರಿ. ಆತನನ್ನು ಲಂಡನ್ನಿನಲ್ಲಿ ವಾಸವಾಗಿದ್ದ ಡಿಂಗ್ರ ಎಂಬ ಭಾರತೀಯ ಯುವಕನು ೧೯೦೯ನೆಯ ಜುಲೈ ೧ನೆಯ ತಾರೀಖಿನಲ್ಲಿ ಗುಂಡು ಹೊಡೆದು ಕೊಂದುಹಾಕಿದನು.

ಪರಿಸ್ಥಿತಿಯಲ್ಲಿ ಉಂಟಾಗಿರುವ ವ್ಯತ್ಯಾಸಗಳೇನೆಂಬುದು ತಿಳಿಯದು. ಎಲ್ಲ ಬಗೆಯ ಸಂಸ್ಕಾರ (ಸುಧಾರಣೆ="ರಿಫಾರಂ") ಗಳಿಗೂ ಅಡ್ಡ ನಿಲ್ಲುವ ಹಳೆಯ ತೆರದ ಆಲೋಚನೆ ಮೂಢ ಭಾವನೆಗಳಲ್ಲಿ ಈ ಜನರಿಗೆ ಇತರರು ನಂಬಲಾರದಷ್ಟು ದೃಢವಾದ ವಿಶ್ವಾಸ; ಏಳು ಕೋಟಿ ಮಂದಿ ಮಹಮ್ಮದೀಯರು ಜನಪದ ಸಮಾರಂಭಗಳಿಗೆ ಸ್ವಲ್ಪ ಹೆಚ್ಚು ಕಡಿಮೆ ವಿರೋಧವಾಗಿರತಕ್ಕವರು; ಅಧಿಕಾರವೆಲ್ಲವೂ ಎರಡು ದಿನ ಇಲ್ಲಿದ್ದು ಹೋಗುವ ವಿದೇಶೀಯರಾದ ಅಧಿಕಾರಿಗಳ ಕೈಯಲ್ಲಿ ನಿಂತಿರುವಿಕೆ; ಅವರಲ್ಲಿಯೂ ಬಹುಮಂದಿ ಸಾಮಾನ್ಯವಾಗಿ ನಿಮ್ಮ "ಟೋರೀ" (ಸ್ತಿಮಿತತಾ ವಾದಿ) ಪಕ್ಷದ ತತ್ತ್ವಗಳಲ್ಲಿ ಅತ್ಯಂತ ದುಷ್ಟವಾದುವುಗಳನ್ನೇ ಅನುಸರಿಸತಕ್ಕವರು—ಹೀಗಿರುವುದು ಇಂದಿನ ಸ್ಥಿತಿ.

ಈ ಅವ್ಯವಸ್ಥೆಯಿಂದ, ಬಲಿಷ್ಠವೂ ಸ್ವತಂತ್ರವೂ ಒಗ್ಗಟ್ಟುಳ್ಳುದೂ ಸ್ವಪ್ರಜಾಧೀನವಾದುದೂ ಜಗತ್ತಿನ ಜನಾಂಗಗಳ ಮಧ್ಯೆ ತನಗೆ ತಕ್ಕ ಸ್ಥಾನವನ್ನು ಪಡೆಯಬಲ್ಲ ಶಕ್ತಿಯುಳ್ಳುದೂ ಆದ ಇಂಡಿಯಾ ದೇಶವನ್ನು ಅವತಾರಗೊಳಿಸಬೇಕಾಗಿದೆ. ಇದು ಹೆದರಿಕೆಯನ್ನು ಹುಟ್ಟಿಸುವಷ್ಟು ಮಹತ್ತರವಾದ ಕಾರ್ಯ; ಅದು ಯಾವ ಕಾಲಕ್ಕಾದರೂ ನೆರವೇರೀತೋ ಇಲ್ಲವೋ ನನಗೆ ತಿಳಿಯದು; ಆದರೆ ಆ ಉದ್ದೇಶಕ್ಕಾಗಿ ಕೆಲಸಮಾಡುವುದು ಮಾತ್ರ ನಮಗೆಲ್ಲರಿಗೂ ಸಾಧ್ಯ. ಇಷ್ಟರಮೇಲೆ, ನಿಮ್ಮ ಜನರ ಅತಿ ಮನೋಹರವಾದ ಭಗವತ್ಪ್ರಾರ್ಥನೆಯೊಂದರ ಈ ಕೆಳಗಿನ ಮಾತುಗಳಲ್ಲಿ ನನಗೆ ಬಹಳ ಅರ್ಥ ಕಾಣುತ್ತದೆ:—

"ಮುಂದಡಿಯದೊಂದೆ ಸಾಕೆಂದೆನಗೆ ದೇವ".

೧೯೧೧ನೆಯ ಇಸವಿಯು ಗೋಖಲೆಯವರಿಗೆ ಸ್ವಲ್ಪ ಮಾತ್ರವಾದರೂ ಸಮಾಧಾನವನ್ನು ತಂದಿತೆಂದು ಹೇಳಬಹುದು. ಮಾರ್ಲೇ ಮಿಂಟೋ ಸುಧಾರಣೆಗಳು ಜಾರಿಗೆ ಬಂದು, ತಮ್ಮ ಶ್ರಮವು ಸಾರ್ಥಕವಾಗುವ ಸೂಚನೆಯು ಕಂಡುದು ಆ ವರ್ಷದಲ್ಲಿ. ತಮ್ಮ ಗುರುಗಳವರ ಜ್ಞಾಪಕ ಚಿಹ್ನೆಯು ಪ್ರತಿಷ್ಠೆಯಾದುದೂ ಆ ವರ್ಷದಲ್ಲಿ. ಮಹಾದೇವ ಗೋವಿಂದ ರಾನಡೆಯವರ ಪವಿತ್ರಸ್ಮರಣೆಯನ್ನು ಲೋಕದಲ್ಲಿ ಶಾಶ್ವತಗೊಳಿಸುವುದಕ್ಕಾಗಿ ಗೋಖಲೆಯವರು ಸುಮಾರು ಒಂದು ಲಕ್ಷ ರೂಪಾಯಷ್ಟು ಹಣವನ್ನು ಚಂದಾ ಮೂಲಕ ಸಂಗ್ರಹಿಸಿ, ಅದರಿಂದ "ರಾನಡೆ ಎಕನಾಮಿಕ್ ಇನ್‌ಸ್ಟಿಟ್ಯೂಟ್" ಎಂಬ ಆರ್ಥಿಕ ವಿಷಯ ಪರಿಶ್ರಮಾಲಯವನ್ನು ಪೂನಾ ನಗರದಲ್ಲಿ ಸ್ಥಾಪನೆಮಾಡಿಸಿದರು. ಅಲ್ಲಿ ದೇಶದ ಸಂಪದಭಿವೃದ್ಧಿಗೆ ಸಂಬಂಧಪಟ್ಟ ವಿಚಾರಗಳ ಪರಿಶೋಧನೆಯೂ ಯಂತ್ರಕರ್ಮ ಕೈಗಾರಿಕೆ ಕುಶಲ

ಕಲೆಗಳಿಗೆ ಸಂಬಂಧಪಟ್ಟ ಪ್ರಯೋಗಪರೀಕ್ಷೆಗಳೂ ಅರ್ಹರಾದ ವಿದ್ವಾಂಸ ರಿಂದ ನಡೆಯಬೇಕೆಂಬುದು ಗೋಖಲೆಯವರ ತಾತ್ಪರ್ಯವಾಗಿತ್ತು. ರಾನಡೆಯವರ ಜೀವನ ಚರಿತ್ರೆಯನ್ನು ಪ್ರೌಢರೀತಿಯಲ್ಲಿ ವಿಸ್ತಾರವಾಗಿ ಬರೆದು ಪ್ರಕಟಗೊಳಿಸಬೇಕೆಂದೂ ಅವರು ಸಂಕಲ್ಪಿಸಿದ್ದರಂತೆ. ಆದರೆ ಅದಕ್ಕೆ ಬೇಕಾದ ವ್ಯವಧಾನ ಅನುಕೂಲ್ಯಗಳು ಅವರಿಗೆ ದೊರೆಯದೆ ಹೋಗಿ, ಅಂತಹ ಸತ್ಕಾವ್ಯವನ್ನೋದುವ ಭಾಗ್ಯವು ನಮಗೆ ಇಲ್ಲವಾಯಿತು.

೧೯೧೦ರಲ್ಲಿ ಅವರ ಮನೋಭಾವವು ಹೇಗಿತ್ತೆಂಬುದನ್ನು ಅವರು ಸ್ಟರ್ಜ್ ಮಿತ್ರರಿಗೆ ಬರೆದ ಈ ಕಾಗದವು ತಿಳಿಸುತ್ತದೆ:—

ಭಾರತ ದೇಶ ಸೇವಕ ಸಂಘ, ಪೂನಾ ಪಟ್ಟಣ.
ಡಿಸೆಂಬರ್ ೯, ೧೯೧೦.

ಈ ದೇಶದಲ್ಲಿ ನಮ್ಮ ಪೈಕಿ ಕೆಲವರಿಗೆ ಈ ವರ್ಷವು ಅತ್ಯಂತ ಕಾರ್ಯಾವಸರದ್ದು. ನನ್ನ ದೇಹಸ್ಥಿತಿಯು ಇಷ್ಟು ದಿನವೂ ಅತ್ಯುತ್ತಮ ತೆರದ್ದಾಗಿರಲಿಲ್ಲ. ಹೊಸ ಶಾಸನ ಸಭೆಗಳೂ ಅವುಗಳ ವಿಸ್ತೃತಗಳಾದ ಕರ್ತವ್ಯಗಳೂ ಪ್ರಜಾವರ್ಗೀಯ ಸದಸ್ಯರ ಕೆಲಸ ಜವಾಬ್ದಾರಿಗಳನ್ನು ಬಹಳವಾಗಿ ಹೆಚ್ಚಿಸಿವೆ. ಈ ಹೊಸ ಸಂಸ್ಥೆಗಳು ಸರಿಯಾದ ಸ್ಥಿತಿಗೆ ಬರುವವರೆಗೂ ನಮ್ಮಲ್ಲಿ ಕೆಲವರು, ತಮಗೆ ಸಾಮಾನ್ಯವಾಗಿ ಸಲ್ಲತಕ್ಕ ಪಾಲಿಗಿಂತ ಹೆಚ್ಚಾಗಿ, ಅವುಗಳ ಭಾರದಲ್ಲಿ ಭಾಗ ವಹಿಸಲು ಸಿದ್ಧರಾಗಿರಬೇಕು. ಅದಲ್ಲದೆ ಈ ವರ್ಷ ನಮ್ಮ ಸಂಘಕ್ಕೆ ನನ್ನ ಕಾಲವು ಅತಿಶಯವಾಗಿ ಬೇಕಾಯಿತು; ಅಷ್ಟನ್ನು ಮಾತ್ರ ಅದಕ್ಕೆ ಕೊಡುವುದು ನನಗೆ ಸಾಧ್ಯವಾಯಿತು. ದೇಶದಲ್ಲೆಲ್ಲಾ ಹೊಸ ಶಾಸನ ಸಭೆಗಳು ಈಗ ಚೆನ್ನಾಗಿಯೇ ಕೆಲಸಮಾಡಲಾರಂಭಿಸಿವೆ. ಅವುಗಳಲ್ಲಿ ಲೋಪಗಳು ಪ್ರತ್ಯಕ್ಷವಾಗಿಯೂ ಅನೇಕವಾಗಿಯೂ ಇದ್ದಾಗ್ಗೂ, ರಾಜ್ಯಾಧಿಕಾರಿ ವರ್ಗದವರನ್ನು ಪದೇ ಪದೇ ಜವಾಬು ಕೊಡಬೇಕಾದವರ ಸ್ಥಾನದಲ್ಲಿ ನಿಲ್ಲಿಸುವುದಕ್ಕೂ, ಇದುವರೆಗೂ ಕತ್ತಲೆ ತುಂಬಿದ್ದ ಕಡೆಗಳಲ್ಲಿ ಜನವಾಕ್ಯದ ಬೆಳಕನ್ನು ಹೊಗಿಸುವುದಕ್ಕೂ ಆ ಸಭೆಗಳು ನಮಗೆ ಅವಕಾಶವನ್ನುಂಟು ಮಾಡಿಯಾವೆಂದು ನನಗೆ ತೋರುತ್ತದೆ.

ನಮ್ಮ ಈಗಿನ ಸ್ಥಿತಿಯಲ್ಲಿ ಇದೊಂದು ಮುಖ್ಯವಾದ ಮುಂದಡಿಯೆಂದೂ, ಇದಕ್ಕಿಂತ ಮುಖ್ಯವಾದುವಕ್ಕೆ ಶೀಘ್ರದಲ್ಲಿಯೇ ಇದರಿಂದ ದಾರಿಯಾಗುವುದೆಂದೂ ನಾನು ಭಾವಿಸಿದ್ದೇನೆ. ಹೇಗಾದರಾಗಲಿ, ಈ ಸಭೆಗಳಿಂದ ಆಗಬಹುದಾದ ಅತ್ಯಂತೋತ್ತಮ ಪ್ರಯೋಜನವೇನಿರುವುದೋ ಅದನ್ನು ಸಾಧಿಸಿಕೊಂಡು, ಆಮೇಲೆ ಇನ್ನೂ ಬರಬೇಕಾಗಿರುವುದಕ್ಕೆ ಮಾರ್ಗವನ್ನು ಸರಿಪಡಿಸುವುದರಿಂದ ನಾನು ತೃಪ್ತನಾಗುವೆನು.

ಈ ವರ್ಷ ಇಂಡಿಯದ ವಿಷಯವಾಗಿ ಮೂರು ಗ್ರಂಥಗಳು ಪ್ರಕಟವಾಗಿವೆ. . . . ಅವುಗಳ ಪೈಕಿ ಮ|| ರ್‍ಯಾಮ್ಸೇ ಮ್ಯಾಕ್‌ಡೊನಾಲ್ಡ್*ರವರ ಪುಸ್ತಕವು ಇಂಡಿಯಾ ವಿಚಾರದ ಜ್ಞಾನವನ್ನು ಬಲು ಹೆಚ್ಚಾಗಿ ತೋರಿಸುತ್ತದೆ. . . . . ನಮ್ಮ ಸಂಘವು ದಿಟವಾಗಿಯೂ ಬಲು ಚೆನ್ನಾಗಿ ನಡೆಯುತ್ತಿದೆ. ಮದರಾಸು ಪ್ರಾಂತದಲ್ಲಿ ಕೆಲಸ ಮಾಡುವುದಕ್ಕೋಸ್ಕರ ಆರುಮಂದಿ ಸದಸ್ಯರುಳ್ಳ ಶಾಖೆಯೊಂದು ಎರಡು ತಿಂಗಳ ಕೆಳಗೆ ಮದರಾಸು ನಗರದಲ್ಲಿ ಪ್ರಾರಂಭವಾಯಿತು. ಬೊಂಬಾಯಿ ಮಧ್ಯಪ್ರಾಂತಗಳಲ್ಲಿ ಕೆಲಸ ನಡಿಸಲು ಏಳುಮಂದಿ ಸದಸ್ಯರೂ ನಾಲ್ವರು ಕಾಯಂ ಸಹಾಯಕರೂ ಉಳ್ಳ ಶಾಖೆಯಿನ್ನೊಂದು ಈ ವಾರ ಉಪಕ್ರಮಿಸಿದೆ. ಈಗ ನಮ್ಮ ಸಂಘಕ್ಕೆ ಬಹು ಉಪಯೋಗಕರವಾದ ಜೀವನಗತಿಯುಂಟೆಂಬ ಭರವಸೆಯು ನನಗೆ ಸಂಪೂರ್ಣವಾಗಿ ತೋರುತ್ತಿದೆ.

ಗೋಖಲೆಯವರು ಒಹು ಕಾಲದಿಂದ ತಮ್ಮ ಮನಸ್ಸಿನಲ್ಲಿದ್ದ ಮತ್ತೊಂದು ಮಹಾಕಾರ್ಯಕ್ಕೆ ೧೯೧೧ ರಲ್ಲಿ ಪ್ರಯತ್ನಮಾಡಿದರು. ಅವರ ವಿದ್ಯೋತ್ಸಾಹವು ಎಷ್ಟರದೆಂಬುದನ್ನು ವಾಚಕರು ಆಗಲೇ ಊಹಿಸಿರಬಹುದು. ಅವರು ಇಂಗ್ಲೆಂಡಿಗೆ ಹೋದಾಗಲೆಲ್ಲಾ ಅಲ್ಲಿಯ ಮತ್ತು ಇತರ ಐರೋಪ್ಯ ರಾಜ್ಯಗಳ ವಿದ್ಯಾಪ್ರಚಾರ ಕ್ರಮಗಳನ್ನು ಸ್ವತಃ ಪರೀಕ್ಷಿಸಿ ನೋಡುತ್ತಿದ್ದರು. ಇಂಗ್ಲೆಂಡಿನ ಪ್ರಸಿದ್ಧ ವಿದ್ಯಾಪೀಠಗಳಾದ ಈಟನ್, ಕೇಂಬ್ರಿಡ್ಜ್, ಆಕ್ಸ್‌ಫರ್ಡ್ ಮುಂತಾದ ಸ್ಥಳಗಳಿಗೆ ಅವರು ಹೋಗಿ, ಅಲ್ಲಿಯ ಕಲಾಶಾಲೆಗಳ ಅಧ್ಯಕ್ಷರೊಡನೆಯೂ ವಿದ್ವಾಂಸರುಗಳೊಡನೆಯೂ ಕಲೆತು, ಪಾಠ ಪಟ್ಟಿಕೆಗಳನ್ನೂ ಶಿಕ್ಷಣ ಕ್ರಮಗಳನ್ನೂ ವಿದ್ಯಾರ್ಥಿ ವಿದ್ಯಾರ್ಥಿನಿಯರ ಜೀವನ ಪದ್ಧತಿಗಳನ್ನೂ ಕುರಿತು ಮಾತನಾಡಿದ್ದರು. ಅಲ್ಲದೆ, ಇಂಡಿಯದಲ್ಲಿ ದೊಡ್ಡ ಅಧಿಕಾರ ಮಾಡಿ, ಈ ದೇಶದ ಇತಿಹಾಸ ವಿಷಯದಲ್ಲಿ ಅತಿಶಯವಾಗಿ ಪರಿಶ್ರಮಿಸಿ, ಅನೇಕ ಉತ್ತಮ ಪ್ರಬಂಧಗಳನ್ನು ತಾವು ಬರೆದು, ಇತರರಿಂದಲೂ ಬರೆಯಿಸಿ ಪ್ರಸಿದ್ಧರಾಗಿದ್ದ ಸರ್ ವಿಲಿಯಂ ವಿಲ್ಸನ್ ಹಂಟರ್ ಎಂಬ ಮಹಾಶಯರನ್ನೂ ಗೋಖಲೆಯವರು ಸಂದರ್ಶಿಸಿ, ಈ ದೇಶದಲ್ಲಿ ವಿದ್ಯಾಪ್ರಚಾರ ಮಾಡಿ

* ಮ|| ಮ್ಯಾಕ್‌ಡೊನಾಲ್ಡ್‌ರವರೇ ಬ್ರಿಟಿಷ್ ಸಾರ್ವಭೌಮ ಸರಕಾರದ ಈಗಿನ (೧೯೨೩) ಮುಖ್ಯ ಮಂತ್ರಿಗಳು. ಅವರು (ಲೇಬರ್) ಕಾರ್ಮಿಕ ಜನಪಕ್ಷದ ಪ್ರಮುಖರಾಗಿದ್ದರು ; ಇಂಡಿಯದ ವಿಷಯದಲ್ಲಿ ಅಭಿಮಾನಶಾಲಿಗಳೆನಿಸಿದ್ದರು.

ಸುವ, ಮತ್ತು ವಿದ್ಯಾಭ್ಯಾಸ ರೀತಿಯನ್ನು ಉತ್ತಮಗೊಳಿಸುವ, ಮಾರ್ಗಗಳನ್ನು ಕುರಿತು ಅವರೊಡನೆ ಚರ್ಚಿಸಿದ್ದರು.

ಈ ದೇಶದಲ್ಲಿ ಜನರ ಸುಖ ಸಂಪತ್ತುಗಳಿಗಾಗಿ ಯಾವ ಪ್ರಯತ್ನವನ್ನು ಮಾಡಬೇಕೆಂದರೂ ಅದಕ್ಕೆ ಅವರ ಅಜ್ಞಾನವು ದೊಡ್ಡ ವಿಘ್ನವಾಗಿ ಬರುತ್ತದಲ್ಲವೆ? ಜನರು ಅಕ್ಷರಜ್ಞರಲ್ಲವಾದ ಕಾರಣ ಅವರು ಪುಸ್ತಕ ಪತ್ರಿಕೆಗಳನ್ನೋದಲಾರರು ; ಯಾವ ವಿಷಯವನ್ನೂ ತಿಳಿದುಕೊಳ್ಳಲಾರರು. ತಿಳಿದುಕೊಳ್ಳಬೇಕೆಂಬ ಆಶೆ ಕೂಡ ಅವರಿಗೆ ಹುಟ್ಟದು. "ವಿದ್ಯಾವಿಹೀನಃ ಪಶುಃ" ಎಂಬ ಪುರಾತನೋಕ್ತಿಯಂತೆ, ಅವರು ಲೋಕ ಪರಿಸ್ಥಿತಿಯನ್ನರಿಯದವರಾಗಿ, ತಮ್ಮ ಮೇಲ್ಮೆಯನ್ನೇ ಚಿಂತಿಸದವರಾಗಿ, ದೇಶಾಭ್ಯುದಯಕ್ಕೆ ಸಾಧಕರಾಗುವ ಯೋಗ್ಯತೆಯಿಲ್ಲದವರಾಗಿ ಇರುವರು. ಅವರು ಹಾಗೆ ಇರುವಷ್ಟು ಕಾಲವೂ ಯಾವ ನಿಜವಾದ ರಾಜಕೀಯ ಪರಿಷ್ಕಾರವಾಗಲಿ, ಸಾಮಾಜಿಕ ಸಂಸ್ಕಾರವಾಗಲಿ, ಕಡೆಗೆ ವ್ಯವಸಾಯಾಭಿವೃದ್ಧಿ ಆರೋಗ್ಯಾಭಿವೃದ್ಧಿಗಳಾಗಲಿ ಈ ದೇಶದಲ್ಲಿ ತಕ್ಕಮಟ್ಟಿಗೆ ನಡೆಯುವ ಆಶೆಯಿರದು. ಆದಕಾರಣ ಈ ದೇಶದಲ್ಲಿ ಸರ್ವಪ್ರಯತ್ನದಿಂದಲೂ ವಿದ್ಯೆಯನ್ನು ಹರಡಬೇಕು. ಈಗ ಅಜ್ಞಾನದಿಂದಲೂ ದಾರಿದ್ರ್ಯದಿಂದಲೂ ಸಾಮಾನ್ಯ ಜನರು ತಮ್ಮ ಮಕ್ಕಳಿಗೆ ವಿದ್ಯೆ ಹೇಳಿಸದೆ, ಇರುವರು. ರೋಗಿಗೆ ವೈದ್ಯನು ನಿರ್ಬಂಧದಿಂದ ಔಷಧ ಕುಡಿಸುವಂತೆ, ಈ ಜನರಿಗೆ ಸರಕಾರವು ಅವರು ಮಕ್ಕಳನ್ನು ಪಾಠಶಾಲೆಗೆ ಕಳುಹುವಂತೆ ಬಲಾತ್ಕಾರದಿಂದ ಕಟ್ಟುಮಾಡಬೇಕು. ಆ ಮಕ್ಕಳಿಗಾದರೂ ಓದುಬರಹಗಳನ್ನು ಕಲಿಸಿ, ಅವರ ಮೌಢ್ಯವನ್ನು ತೊಲಗಿಸುವುದು ಸರಕಾರದ ಕರ್ತವ್ಯ. ಅದಕ್ಕಾಗಿ ಸರಕಾರವು ದೇಶದಲ್ಲೆಲ್ಲಾ ಅವಶ್ಯವಿರುವಷ್ಟು ಪಾಠಶಾಲೆಗಳನ್ನಿರಿಸಬೇಕು; ಅವುಗಳಿಗಾಗಿ ವಿದ್ಯಾರ್ಥಿಗಳಿಂದ ಯಾವ (ಫೀಜು) ರುಸುಮನ್ನೂ ತೆಗೆದುಕೊಳ್ಳಕೂಡದು ; ಅವುಗಳಲ್ಲಿ ವಿದ್ಯಾಭ್ಯಾಸವನ್ನು ಸಾಧ್ಯವಾದಷ್ಟು ಮಾಡಿಕೊಳ್ಳಲು ೭ ರಿಂದ ೧೧ ವರ್ಷದ ವರೆಗಿನ ಹುಡುಗ ಹುಡುಗಿಯರೆಲ್ಲರೂ ಬರಬೇಕು ; ಹಾಗೆ ಯಾರಾದರೂ ಬಾರದೆ ಹೋಗಿ, ಅಂಥವರ ತಂದೆ ಅಥವಾ ಪೋಷಕರು ಅದಕ್ಕೆ ತೃಪ್ತಿಕರವಾದ ಸಮಾ

ಧಾನವನ್ನು ಹೇಳಲಾರದಿದ್ದರೆ, ಆ ತಂದೆ ಅಥವಾ ಪೋಷಕರಿಗೆ ಶಾಸನಾನುಸಾರ ಶಿಕ್ಷೆ ವಿಧಿಸಬೇಕು—ಹೀಗೆಂದು ಗೋಖಲೆಯವರು ವಾದಿಸಿ, ಈ ಏರ್ಪಾಟುಗಳನ್ನೊಳಗೊಂಡ ಒಂದು ಶಾಸನದ ಮಸೂದೆಯನ್ನು ಸಾರ್ವದೇಶೀಯ ಸಭೆಯ ಮುಂದೆ ಇರಿಸಿದರು. ದೇಶೀಯರಲ್ಲಿ ಎಲ್ಲ ಪಕ್ಷಗಳವರೂ ಅದನ್ನು ಉತ್ಸಾಹದಿಂದ ಅನುಮೋದಿಸಿದರು. ಎಲ್ಲ ಪ್ರಾಂತಗಳಲ್ಲಿಯೂ ಅನೇಕ ಸಭೆ ಸಂಘಗಳವರೂ ಪತ್ರಿಕೆಗಳವರೂ ಆ ಕಾನೂನು ಆಗಲೇಬೇಕೆಂದು ಒಮ್ಮುಖವಾಗಿ ಹೇಳಿ ಗೋಖಲೆಯವರಿಗೆ ಒತ್ತಾಸೆಕೊಟ್ಟರು. ಆದರೆ ನಾನಾ ಪ್ರಾಂತಗಳ ಸರಕಾರಗಳವರು ಆ ಕಾನೂನಿಗೆ ಸಮ್ಮತಿಸಲಿಲ್ಲವೆಂಬ ನಿಮಿತ್ತದಿಂದ, ಅದಕ್ಕೆ ಸಾರ್ವದೇಶೀಯ ಸಭೆಯಲ್ಲಿ ಅಧಿಕಪಕ್ಷವಾದ ಅಧಿಕಾರವರ್ಗದ ಬೆಂಬಲವು ದೊರೆಯದೆ ಹೋಗಿ, ಅದು ತಿರಸ್ಕೃತವಾಯಿತು. ಆದರೆ ಗೋಖಲೆಯವರ ಪ್ರಯತ್ನವು ಸಂಪೂರ್ಣವಾಗಿ ವ್ಯರ್ಥವಾಗಲಿಲ್ಲ. ಅದರಿಂದ ಸಮಸ್ತ ಭಾರತೀಯರೂ ಆ ಕಾನೂನಿನ ಉದ್ದೇಶದ ವಿಷಯದಲ್ಲಿ ಸಂಪೂರ್ಣವಾಗಿ ಎಚ್ಚರಗೊಂಡು, ಗೋಖಲೆಯವರ ಪ್ರಯತ್ನವನ್ನು ಸಫಲಗೊಳಿಸುವುದರಲ್ಲಿ ಬದ್ಧಾದರರಾಗಿರುವರು. ಪ್ರಜಾಭಿಮಾನಿಗಳಾದ ಮೈಸೂರಿನ ಶ್ರೀಮನ್ಮಹಾರಾಜರವರ ಸರಕಾರದವರು ನಿರ್ಬಂಧದ ಬಾಲ್ಯವಿದ್ಯಾಪ್ರಚಾರಕ್ಕೆ ಒಂದು ಕಾನೂನನ್ನು ರಚಿಸಿ ಪ್ರಚಾರಕ್ಕೆ ತಂದಿರುವರು. ಇದು ಮೈಸೂರಿನವರಿಗೆಲ್ಲ ಅತ್ಯಂತ ಸಂತೋಷಪ್ರದವಾದ ವಿಷಯವೇ ಸರಿ. ಈಚೆಗೆ ಬ್ರಿಟಿಷ್ ಇಂಡಿಯದ ಕೆಲವು ಪ್ರಾಂತಗಳ ಸರಕಾರಗಳೂ ಬೊಂಬಾಯಿ ಮೊದಲಾದ ದೊಡ್ಡ ಪಟ್ಟಣಗಳ ಮ್ಯುನಿಸಿಪಾಲಿಟಿಗಳೂ ಗೋಖಲೆಯವರ ಕಾನೂನಿನ ಸೂಚನೆಗಳನ್ನು ಅಂಗೀಕರಿಸಿ ಆ ಏರ್ಪಾಟುಗಳನ್ನು ತಮ್ಮ ತಮ್ಮ ಪ್ರದೇಶಗಳಲ್ಲಿ ಪ್ರಯೋಗಕ್ಕೆ ತರುತ್ತಿವೆ. ಎಲ್ಲ ಸರಕಾರಗಳೂ ವಿದ್ಯಾ ಪ್ರಚಾರಕ್ಕೆ ಈಗ ಹೆಚ್ಚು ಗಮನಕೊಡುತ್ತಿವೆ.

ಈಗಿನ ಬ್ರಿಟಿಷ್ ಚಕ್ರವರ್ತಿಗಳಾದ ಐದನೆ ಜಾರ್ಜ್ ಪ್ರಭುಗಳವರಿಗೆ ೧೯೧೧ನೆಯ ಜೂನ್ ೨೨ರಲ್ಲಿ ಇಂಗ್ಲೆಂಡಿನಲ್ಲಿ ಯಥಾವಿಧಿಯಾಗಿ ಪಟ್ಟಾಭಿಷೇಕ ಬೆಳೆಯಿತಷ್ಟೆ? ಆ ಮಹೋತ್ಸವ ಸಂತೋಷವನ್ನು ಇಂಡಿಯಾ

ದೇಶೀಯರಿಗೂ ಉಂಟುಮಾಡಿಕೊಡಬೇಕೆಂಬ ಉದ್ದೇಶದಿಂದ, ಚಕ್ರವರ್ತಿಗಳವರು ಈ ದೇಶಕ್ಕೂ ದಯೆಮಾಡಿ ಬಂದು, ಇಲ್ಲಿಯೂ ದರ್ಬಾರು ನಡಿಸಬೇಕೆಂದು ಏರ್ಪಾಟಾಗಿತ್ತು. ಆಗ ಇಲ್ಲಿ ಲಾರ್ಡ್ ಹಾರ್ಡಿಂಜರವರು ವೈಸ್‌ರಾಯ್ ಆಗಿದ್ದರು. ಇಂಗ್ಲೆಂಡಿನಲ್ಲಿ ಲಾರ್ಡ್ ಕ್ರೂ ಎಂಬುವರು (ಮಾರ್ಲೇಯವರ ಸ್ಥಾನದಲ್ಲಿ) ಇಂಡಿಯಾ ವಿಚಾರದ ಮಂತ್ರಿಯಾಗಿದ್ದರು. ಅವರಿಬ್ಬರೂ, ಇಂಗ್ಲೆಂಡಿನ ರಾಜ್ಯವಿಚಾರಕರ್ತರ ಪಕ್ಷಗಳ ಪೈಕಿ 'ಲಿಬರಲ್' ಎಂಬ ಸ್ವಾತಂತ್ರ್ಯ ಪರ ಪಕ್ಷಕ್ಕೆ ಸೇರಿದ್ದ ಉದಾರ ಮನಸ್ಕರು. ಅವರು ನಡೆಯಿಸಿದ ಏರ್ಪಾಟಿನಂತೆ ಜಾರ್ಜ್ ಚಕ್ರವರ್ತಿಗಳವರು ೧೯೧೧ನೆಯ ಡಿಸೆಂಬರ್ ತಿಂಗಳಲ್ಲಿ ರಾಜ್ಞೀ ಸಮೇತರಾಗಿ ಪ್ರಯಾಣಮಾಡಿ ಬಂದು ಈ ದೇಶವನ್ನು ಸೇರಿ, ಪುರಾತನವಾದ ನಮ್ಮ ದೆಹಲೀ ಮಹಾ ನಗರದಲ್ಲಿ ಕಿರೀಟಧಾರಣೋತ್ಸವ ಸಂಬಂಧವಾದ ದರ್ಬಾರನ್ನು ಬೆಳಸಿದರು. ಆಗ ಭರತಭೂಮಿಯ ಸಾಮಂತ ರಾಜರುಗಳೂ, ಪ್ರಜಾಪ್ರಮುಖರೂ, ರಾಜ್ಯಾಧಿಕಾರಸ್ಥರೂ ಅಲ್ಲಿ ಸಂಭ್ರಮೋತ್ಸಾಹಗಳಿಂದ ನೆರೆದಿದ್ದರು. ಚಕ್ರವರ್ತಿಗಳವರು ಆ ಸಮಯದಲ್ಲಿ ಮಾಡಿದ ಭಾಷಣದಲ್ಲಿ ತಮಗೆ ಭಾರತೀಯರ ವಿಷಯದಲ್ಲಿದ್ದ ವಾತ್ಸಲ್ಯ ವಿಶ್ವಾಸಗಳನ್ನು ವ್ಯಕ್ತಪಡಿಸಿದುದಲ್ಲದೆ, ಆ ಮಹೋತ್ಸವದ ಜ್ಞಾಪಕಾರ್ಥವಾಗಿ ಇಂಡಿಯಾ ಸರಕಾರವು ತನ್ನ ಮುಖ್ಯ ರಾಜಧಾನಿಯನ್ನು ಕಲ್ಕತ್ತಾ ಪಟ್ಟಣದಿಂದ ದೆಹಲೀ ಪಟ್ಟಣಕ್ಕೆ ವರ್ಗಾಯಿಸುವಂತೆಯೂ, ಲಾರ್ಡ್ ಕರ್ಜನ್‌ರವರು ಮಾಡಿದ್ದ ವಂಗ ವಿಭಜನವನ್ನು ಪರಿಹಾರಮಾಡಿ ಬಂಗಾಳಾ ಪ್ರಾಂತವನ್ನು ಪುನಃ ಒಂದಾಗಿಸುವಂತೆಯೂ, ಬಿಹಾರ್ ಉಪಪ್ರಾಂತವನ್ನು ಒಂದು ಪ್ರತ್ಯೇಕ ಪ್ರಾಂತವನ್ನಾಗಿ ಮಾಡುವಂತೆಯೂ, ವಿದ್ಯಾ ಪ್ರಚಾರಕ್ಕಾಗಿ ಅಲ್ಲಿಂದ ಮುಂದೆ ವರ್ಷೇವರ್ಷೇ ೫೦ ಲಕ್ಷ ರೂಪಾಯಿಗಳನ್ನು ತೆಗೆದಿರಿಸುವಂತೆಯೂ ಅಪ್ಪಣೆಕೊಡಿಸಿದರು. ಈ ಶುಭ ಸಂಗತಿಗಳಿಂದ ಗೋಖಲೆಯವರಿಗೆ ಆದ ಸಂತೃಪ್ತಿಯನ್ನು ಅವರು ಸ್ಟರ್ಜ್ ಅವರಿಗೆ ಬರೆದ ಈ ಕಾಗದದಿಂದ ತಿಳಿಯಬಹುದು:—

೬೩, ಬ್ಯಾಲೀಗಂಜ್ ಸರ್ಕ್ಯುಲರ್ ಬೀದಿ, ಕಲ್ಕತ್ತಾ.
ಜನವರಿ ೨೫, ೧೯೧೨.

ದೊರೆಗಳವರ ಆಗಮನವು ಸಂಪೂರ್ಣ ವಿಜಯೋತ್ಸವವಾಗಿ ಬೆಳೆದಿದೆ. ಅವರ ಆಗಮನವು ಯುಕ್ತವಾದುದೆ—ಎಂಬ ವಿಷಯದಲ್ಲಿ ಒಂದಾನೊಂದು ಕಾಲದಲ್ಲಿ ಕೆಲವರು ಸಂದೇಹಪಟ್ಟಿದ್ದರು. ಸರಿಯಾದ ಸ್ಥಳದಲ್ಲಿ ಸರಿಯಾದ ಮಾತನ್ನಾಡುವ ಅಸಾಮಾನ್ಯವಾದ ಹಿತಚಾತುರ್ಯವನ್ನು ದೊರೆಗಳವರು ಪಡೆದಿರುವರೆನ್ನುವುದಕ್ಕೆ ಸಂಶಯವಿಲ್ಲ. ಇಂಡಿಯವು ಈಗ ಆಳಲ್ಪಡುತ್ತಿರುವಂತೆ ಇರುವ ದೇಶದಲ್ಲಿ ರಾಜರ ಭಾಷಣಗಳು ಅತಿ ವಿಶೇಷ ಪ್ರಾಮುಖ್ಯವುಳ್ಳವು. ಕಲ್ಕತ್ತೆಯ ವಿಶ್ವ ವಿದ್ಯಾ ಪೀಠದವರ ವಿಜ್ಞಾಪನಾ ಪತ್ರಿಕೆಗೆ ಪ್ರತ್ಯುತ್ತರವಾಗಿ ಜಾರ್ಜ್ ದೊರೆಗಳವರು ವಿದ್ಯಾಪ್ರಚಾರವನ್ನು ಕುರಿತು ಮಾಡಿದ ಭಾಷಣವು ದೇಶದಲ್ಲೆಲ್ಲಾ ಅತಿಶಯವಾದ ಸಮಾಧಾನವನ್ನುಂಟುಮಾಡಿದೆ. ಅನೇಕರು ಅದನ್ನು ಪ್ರಜೆಗಳಿಗೆ ಕೊಡಲ್ಪಟ್ಟ ಹೊಸ ವಿದ್ಯಾದಾನ ಶಾಸನವೆಂದು ಭಾವಿಸಿರುವರು. ವಂಗವಿಭಜನವನ್ನು ರದ್ದುಮಾಡಿರುವುದಾದರೋ, ರಾಜ್ಯತಂತ್ರ ನೈಪುಣ್ಯದ ಉದ್ದಾಮ ಧೋರಣೆಯಾಗಿದೆ. ಇಂಡಿಯಾದಲ್ಲಿಯ ಅಧಿಕಾರಿಗಳು, ಪ್ರಾಂತೀಯ ಸ್ವರಾಜ್ಯವೆಂಬ ಪದಕ್ಕೆ ''ತಮ್ಮ ಗೊಡವೆಗೆ ಸಾರ್ವದೇಶೀಯ ಸರಕಾರವು ಕೈಹಾಕದಿರುವುದು '' ಎಂಬಿಷ್ಟುಮಟ್ಟಿನ ಅರ್ಥವನ್ನು ಮಾತ್ರವೇ ಇಟ್ಟುಕೊಂಡಿದ್ದರೂ, ದೊರೆಗಳು ಸೂಚಿಸಿರುವ ಅಧಿಕಾರ ವಿಭಾಗ ಕ್ರಮವು ಬಹುದೂರ ವ್ಯಾಪಿಸತಕ್ಕುದಾಗಿ ಪರಿಣಮಿಸುವುದು ಖಂಡಿತ. ಅದು ಪ್ರಾಂತೀಯ ಸ್ವರಾಜ್ಯಕ್ಕಾಗಿ (ಎಂದರೆ—ಮದ್ರಾಸು, ಬೊಂಬಾಯಿ, ಬಂಗಾಳಾ ಮೊದಲಾದ ನಾನಾ ಪ್ರಾಂತಗಳಲ್ಲಿ ಪ್ರತಿಯೊಂದು ಪ್ರಾಂತದ ಒಳ ಆಡಳಿತಗಳೂ ಕೂಡಿದ ಮಟ್ಟಿಗೆ ಆಯಾ ಪ್ರಾಂತದ ಪ್ರಜೆಗಳ ಪ್ರತಿನಿಧಿಗಳನ್ನೊಳಗೊಂಡ ಶಾಸನ ಸಭೆಯು ನಿರ್ಧರಿಸುವ ಪ್ರಕಾರವಾಗಿಯೇ ನಡೆಯಬೇಕೆಂಬ ಪದ್ಧತಿಯು ನೆಲೆಗೊಳ್ಳುವುದಕ್ಕಾಗಿ) ಕೆಲಸಮಾಡಲು ನಮಗೆ ಉಪೋದ್ಬಲಕೊಡತಕ್ಕುದಾಗಿರುವುದು. ವಿದ್ಯಾಪ್ರಚಾರಕ್ಕಾಗಿ ದಯಪಾಲಿಸಿರುವ ನಿಧಿಯು ದೊಡ್ಡದಲ್ಲದಿದ್ದರೂ ಬಹು ಸಂತುಷ್ಟಿಯನ್ನುಂಟುಮಾಡಿದೆ.

ಈವರ್ಷ ಇಂಗ್ಲೆಂಡಿನಲ್ಲಿ ಸ್ವಲ್ಪ ದಿನ ನಿಲ್ಲಬೇಕೆಂದು ನಾನು ನಿಶ್ಚಯಿಸಿರುವುದನ್ನು ತಿಳಿಸಲು ಸಂತೋಷಿಸುತ್ತೇನೆ. ಈ ದೇಶದಲ್ಲಿ ಬಾಲ್ಯವಿದ್ಯೆಯ ಪ್ರಚಾರವನ್ನು ಕ್ರಮೇಣ ಧರ್ಮಾರ್ಥವಾದುದನ್ನಾಗಿಯೂ ನಿರ್ಬಂಧವಾದುದನ್ನಾಗಿಯೂ ಮಾಡಿಸುವ ಉದ್ದೇಶದಿಂದ ವೈಸ್‌ರಾಯವರ ಶಾಸನ ಸಭೆಯ ಮುಂದೆ ನಾನು ಇರಿಸಿರುವ ಕಾನೂನಿನ ಮಸೂದೆಗೆ ಪಾರ್ಲಿಮೆಂಟಿನ ಒತ್ತಾಸೆಯನ್ನು ಸಂಪಾದಿಸುವುದೇ ಈ ವರ್ಷ ನಾನು ಅಲ್ಲಿಗೆ ಬರುವುದರ ಉದ್ದೇಶ. ಆ ಮಸೂದೆಗೆ ದೇಶದ ಎಲ್ಲ ಭಾಗಗಳ ಮಹಾಜನರೂ ಉತ್ಸಾಹದಿಂದ ಸಮ್ಮತಿಕೊಟ್ಟಿರುವರು. ಆದರೆ ಅಧಿಕಾರಿಗಳಲ್ಲಿ ಬಹುಮಂದಿ ಅದಕ್ಕೆ ವಿರೋಧವಾಗಿದ್ದಾರೆ; ಆದುದರಿಂದ ಬರುವ ಮಾರ್ಚಿ ತಿಂಗಳಲ್ಲಿ ಶಾಸನ ಸಭೆಯು ಆ ಮಸೂದೆಯನ್ನು ತಿರಸ್ಕರಿಸುವುದೆಂಬ ಆಶಂಕೆಯು ನನಗುಂಟು. ಆಮೇಲೆ ಆ ವಿಚಾರವನ್ನು ನಾವು

ಪಾರ್ಲಿಮೆಂಟಿಗೆ ತರುವೆವು. ಅದಾದಬಳಿಕ ನಾನು ಅದೇ ಕಾನೂನು ಮಸೂದೆಯನ್ನು ಬರುವ ವರ್ಷ ಪುನಃ ಶಾಸನ ಸಭೆಯ ಮುಂದೆ ತಂದು, ಅದನ್ನು ಸಮರ್ಥಿಸಲು ದೇಶದಲ್ಲೆಲ್ಲಾ ದೊಡ್ಡ ಚಳವಳವನ್ನೆಬ್ಬಿಸಬೇಕೆಂದಿರುವೆನು.

ಬಾಲ್ಯವಿದ್ಯಾ ಶಾಸನದ ವಿಚಾರದಲ್ಲಿ ಗೋಖಲೆಯವರಿಗಿದ್ದ ಭಯವು ದಿಟವಾದುದನ್ನು ನಾವು ಆಗಲೇ ನೋಡಿರುವೆವು. ಮುಂದಿನ ಕಾರ್ಯಕ್ರಮವನ್ನು ಮಾತ್ರ ಅವರು ಯೋಚಿಸಿದ್ದಂತೆ ನಡಿಸಲಾಗಲಿಲ್ಲ. ಬೇರೆ ಕರ್ತವ್ಯಗಳು ಬಂದು ಅವರ ಕಾಲವನ್ನಾಕ್ರಮಿಸಿಕೊಂಡುವು. ಅವು ಮುಗಿಯುವಷ್ಟರೊಳಗೆ ಅವರ ಜೀವಿತ ಕಾಲವೇ ಮುಗಿದುಹೋಯಿತು.

ಬ್ರಿಟಿಷ್ ಇಂಡಿಯದಲ್ಲಿ ದೊಡ್ಡ ದೊಡ್ಡ ಅಧಿಕಾರಗಳಿಗೆ ಆಂಗ್ಲೇಯರನ್ನೇ ತಂದುಕೊಂಡು, ಇಂಡಿಯಾ ದೇಶೀಯರನ್ನು ಅನರ್ಹರೆಂದು ತಿರಸ್ಕರಿಸುವುದು ಅನ್ಯಾಯವೆಂದು ಗೋಖಲೆಯವರು ಬಹುಕಾಲದಿಂದ ವಾದಿಸುತ್ತಿದ್ದರಷ್ಟೆ? ದೊಡ್ಡ ದೊಡ್ಡ ಪದವಿಗಳಲ್ಲಿ ಗೌರವದಿಂದ ಕುಳಿತು ಕಾರ್ಯ ನಿರ್ವಾಹಮಾಡುವ ಶಕ್ತಿಯು ಇಂಡಿಯಾ ದೇಶೀಯರಿಗೂ ಉಂಟೆಂದೂ, ಯೋಗ್ಯರಾದ ದೇಶೀಯರನ್ನು ಎಲ್ಲಾ ಇಲಾಖೆಗಳಲ್ಲಿಯೂ ದೊಡ್ಡ ದೊಡ್ಡ ಹುದ್ದೆಗಳಿಗೆ ನಿಯಮಿಸಿದರೆ ಸರಕಾರದ ವೆಚ್ಚವು ಕಡಮೆಯಾಗಿ ಪ್ರಜೆಗಳ ಯೋಗಕ್ಷೇಮಗಳಿಗೆ ಹೆಚ್ಚು ಅನುಕೂಲವಾಗುವುದೆಂದೂ, ಈಗ ದೇಶೀಯರಲ್ಲಿ ಅಸಮಾಧಾನವು ಅತಿಶಯವಾಗಿದೆಯೆಂದೂ, ಅವರ ಬುದ್ಧಿ ವಿಕಸನಕ್ಕೆ ಅವಕಾಶವು ಸಾಲದೆಂದೂ, ಸರಕಾರದವರಿಗೆ ಕುಲವರ್ಣ ಪಕ್ಷಪಾತವು ತಕ್ಕುದಲ್ಲವೆಂದೂ, ಇಂಡಿಯದ ಪ್ರಜಾಪ್ರಮುಖರು ಬಹು ಬಗೆಯಾಗಿ ವಾದಿಸಿದ್ದರ ಫಲವಾಗಿ, ಈ ವಿಷಯದಲ್ಲಿರತಕ್ಕ ಜನಾಭಿಪ್ರಾಯಗಳನ್ನು ತಿಳಿದು, ತಕ್ಕ ಸಲಹೆಗಳನ್ನು ಸೂಚಿಸುವುದಕ್ಕೋಸ್ಕರ (ಪಬ್ಲಿಕ್ ಸರ್ವಿಸ್ ಕಮಿಷನ್) ಸರಕಾರೀ ಉದ್ಯೋಗಸ್ಥಿತಿ ಸಂಬಂಧವಾದ ವಿಚಾರಕ ಮಂಡಲಿಯೊಂದನ್ನು ಬ್ರಿಟಿಷ್ ಸರಕಾರದವರು ರಾಜಾಜ್ಞೆಯಂತೆ ೧೯೧೨ರಲ್ಲಿ ಏರ್ಪಡಿಸಿದರು. ಆ ಮಂಡಲಿಗೆ ಗೋಖಲೆಯವರೂ ಒಬ್ಬ ಸದಸ್ಯರಾಗಿ ನಿಯಮಿಸಲ್ಪಟ್ಟರು. ಈಗ (೧೯೩೩ರಲ್ಲಿ) ಬ್ರಿಟಿಷ್ ಚಕ್ರಾಧಿಪತ್ಯದ ಮುಖ್ಯ ಮಂತ್ರಿಯಾಗಿರುವ ರ್‍ಯಾಮ್ಸೇ ಮ್ಯಾಕ್‌ಡೊನಾಲ್ಡ್

ಎಂಬ ಕಾರ್ಮಿಕಜನ ಪಕ್ಷದ ಪ್ರಮುಖರೂ, ಕೆಲವು ಕಾಲ ಬಂಗಾಳಾ ಪ್ರಾಂತದ ಗವರ್ನರಾಗಿದ್ದ ಲಾರ್ಡ್ ರೊನಾಲ್ಡ್‌ಷೇ (ಈಗ ಲಾರ್ಡ್ ಜೆಟ್‌ಲೆಂಡ್) ಅವರೂ, ಇತರ ಕೆಲಮಂದಿ ಪ್ರಸಿದ್ಧ ವಿದ್ವಾಂಸರೂ ರಾಜ್ಯ ವಿಚಾರಜ್ಞರೂ ಆ ಮಂಡಲಿಯಲ್ಲಿ ಗೋಖಲೆಯವರ ಸಹೋದ್ಯೋಗಿಗಳಾಗಿದ್ದರು. ಆ ಮಂಡಲಿಯು ಕಲ್ಕತ್ತಾ, ಬೊಂಬಾಯಿ, ಮದರಾಸು ಮುಂತಾದ ಮುಖ್ಯ ಪಟ್ಟಣಗಳಲ್ಲಿ ಕುಳಿತು, ಅಲ್ಲಿನ ಮುಖ್ಯಾಧಿಕಾರಿಗಳನ್ನೂ ಗಣ್ಯರಾದ ಪ್ರಜಾಮುಖ್ಯರನ್ನೂ ವಿಚಾರಿಸಿ, ಅವರ ಅಭಿಮತವನ್ನು ತಿಳಿದುಕೊಂಡು, ಆ ಆಧಾರದ ಮೇಲೆ ಸರಕಾರಕ್ಕೆ ಉಚಿತವಾದ ಸಲಹೆಗಳನ್ನು ಕೊಡಬೇಕಾಗಿತ್ತು. ಆ ಮಂಡಲಿಯವರು ತಮ್ಮ ಸಂಚಾರ ವಿಚಾರಣೆಗಳನ್ನು ಮಾಡಿ ಮುಗಿಸಿ, ಇನ್ನು ವರದಿ (ರಿಪೋರ್ಟ್) ಯನ್ನು ಬರೆಯಬೇಕಾಗಿದ್ದಷ್ಟರಲ್ಲಿ ಗೋಖಲೆಯವರು ಮೃತ್ಯುವಶರಾದರು. ಅವರು ಇನ್ನು ಕೆಲವು ದಿನ ಜೀವವಂತರಾಗಿದ್ದಿದ್ದರೆ ಆ ಮಂಡಲಿಯ ಶಿಫಾರಸುಗಳು ಎಲ್ಲ ವಿಷಯಗಳಲ್ಲಿಯೂ ದೇಶೀಯರಿಗೇ ಅನುಕೂಲವಾಗಿ ಇರುತ್ತಿದ್ದುವೆಂದು ಹೇಳಬೇಕಾದುದಿಲ್ಲ. ಆ ರಿಪೋರ್ಟನ್ನು ಬರೆಯುವ ಪ್ರಾಪ್ತಿಯು ತಮಗೆ ಇಲ್ಲದೆ ಹೋಯಿತಲ್ಲಾ ಎಂದು ಅವಸಾನಕಾಲದಲ್ಲಿ ಗೋಖಲೆಯವರು ತುಂಬಾ ವ್ಯಸನಪಟ್ಟರಂತೆ. ಆ ಮಂಡಲಿಯ ಇತರ ಸದಸ್ಯರು, ಆಮೇಲೆ ಒಪ್ಪಿಸಿದ ವರದಿಯಲ್ಲಿ, ಗೋಖಲೆಯವರ ಮರಣದಿಂದ ತಮ್ಮ ಕಾರ್ಯಕ್ಕೆ ವಿಶೇಷ ನಷ್ಟವಾಯಿತೆಂದು ಹೇಳಿ, ಅವರ ತಿಳಿವಳಿಕೆಯನ್ನೂ ನ್ಯಾಯಪರತೆಯನ್ನೂ ಕೊಂಡಾಡಿ, ಅವರಿಂದ ಪೂರ್ಣ ಪ್ರಯೋಜನವನ್ನು ಪಡೆಯುವ ಭಾಗ್ಯವು ತಮಗೆ ಇಲ್ಲದೆ ಹೋಯಿತೆಂದು ವಿಷಾದಿಸಿದರು.

ದಕ್ಷಿಣ ಆಫ್ರಿಕಾ ದೇಶದಲ್ಲಿ (ಕಾಲನಿ) ಸ್ವಾಸ್ಥ್ಯಗಳನ್ನು ಕಲ್ಪಿಸಿಕೊಂಡಿರುವ ಯೂರೋಪಿಯನ್ ಜನರ ಗದ್ದೆ ತೋಟಗಳಲ್ಲಿಯೂ ಕಾರ್ಖಾನೆಗಣೆಗಳಲ್ಲಿಯೂ ಕೂಲಿಯ ಕೆಲಸಮಾಡಿ ಜೀವನ ಸಂಪಾದಿಸುವುದಕ್ಕೆಂದು ಹೋಗಿ, ಅಲ್ಲಿಯೇ ವಸತಿಗಳನ್ನು ಕಲ್ಪಿಸಿಕೊಂಡು ಇರುವ ಭಾರತೀಯರಿಗೆ, ಆ ಬಿಳಿಯ ಜನರಿಂದಲೂ ಅವರ ಸರಕಾರದಿಂದಲೂ ನಾನಾವಿಧವಾದ ಹಿಂಸೆಗಳೂ ಅಪಮಾನಗಳೂ ನಡೆಯುತ್ತಿರುವ ಸಂಗತಿ ಈಗ ಎಲ್ಲರಿಗೂ

ತಿಳಿದಿದೆ. ಇಂಡಿಯಾ ದೇಶದವರು ಬ್ರಿಟಿಷ್ ಚಕ್ರಾಧಿಪತ್ಯದ ಪ್ರಜೆಗಳಾಗಿದ್ದರೂ, ಅವರನ್ನು ಆದೇ ಚಕ್ರಾಧಿಪತ್ಯದ ಮತ್ತೊಂದು ಭಾಗದ ಸರಕಾರವೂ ಪ್ರಜೆಗಳೂ ಕ್ರೂರವೂ ತುಚ್ಛವೂ ಆದ ರೀತಿಯಲ್ಲಿ ಕಾಣುವುದು ಅಧರ್ಮವೆಂದು ಭಾರತೀಯರು ಪ್ರತಿಭಟಿಸಿ ನಿಂತಿದ್ದರು. ಈ ವಿಚಾರಕ್ಕೆ ಸಂಬಂಧಪಟ್ಟಂತೆ ಅನೇಕ ಭಾಷಣಗಳನ್ನು ಗೋಖಲೆಯವರು ಇಂಡಿಯಾ ದೇಶದ ಶಾಸನ ಸಭೆಯಲ್ಲಿಯೂ ಇತರ ಕಡೆಗಳಲ್ಲಿಯೂ ಮಾಡಿದ್ದರು. ಪ್ರಪಂಚದ ಇತರ ನಾಗರಿಕ ದೇಶಗಳಲ್ಲಿ ಗುಲಾಮರ ಮಾರಾಟವು—ಎಂದರೆ ಮನುಷ್ಯರನ್ನು ಬೆಲೆಗೆ ಮಾರುವ ವ್ಯಾಪಾರವು—ನಿಂತು ಹೋಗಿದ್ದರೂ, ಬ್ರಿಟಿಷ್ ಉಪರಾಷ್ಟ್ರಗಳಲ್ಲಿ ಮಾತ್ರ ಭಾರತೀಯರ ಅವಸ್ಥೆಯು ಇನ್ನೂ ಗುಲಾಮತನದಂತೆಯೇ ಇರುವುದೆಂದು ಅವರು ಹೇಳುತ್ತಿದ್ದರು. ನಮ್ಮ ದೇಶದಿಂದ ಬ್ರಿಟಿಷ್ ಉಪರಾಷ್ಟ್ರ ಅಥವಾ "ಕಾಲನಿ"ಗಳಿಗೆ ಜನರನ್ನು ಕೂಲಿಗಾಗಿ ಆಕರ್ಷಿಸುವುದು ಆಗದಂತೆಯೇ ಮಾಡಬೇಕೆಂದು ಅವರು ಯೋಚಿಸಿದ್ದರೆಂಬುದು, ಹಿಂದೆ ನಾವು ನೋಡಿರುವ ಅವರ ಭಾಷಣಗಳ ಸಾರಾಂಶದ ಪಟ್ಟಿಯಲ್ಲಿಯೇ ಕಾಣುತ್ತದೆ. ಇಲ್ಲಿಗೆ ಬಹುದೂರವಾದ ಆ ಟ್ರಾನ್ಸ್‌ವಾಲ್ ದೇಶದಲ್ಲಿ ನಮ್ಮ ಸೋದರ ಸೋದರಿಯರು ಸುಮಾರು ನಾಲ್ಕು ಸಾವಿರ ಮಂದಿ ಸ್ವದೇಶದ ಮೇಲೆಯೂ ಸ್ವಗೌರವದ ಮೇಲೆಯೂ ದೃಷ್ಟಿಯಿಟ್ಟು, ಮಹನೀಯರಾದ ಗಾಂಧಿಯವರನ್ನನುಸರಿಸಿ—ಪ್ರಹ್ಲಾದನು ಹಿರಣ್ಯಕಶಿಪುವಿನೊಡನೆ ಮಾಡಿದಂತೆ, ಅಥವಾ ವಸಿಷ್ಠನು ವಿಶ್ವಾಮಿತ್ರನೊಡನೆ ಮಾಡಿದಂತೆ—ಬಿಳಿಯ ಜನರೊಡನೆ "ಸತ್ಯಾಗ್ರಹ"ರೂಪವಾದ—ಎಂದರೆ, ಕ್ರೋಧವನ್ನು ಬಿಟ್ಟು, ಶಸ್ತ್ರಾಸ್ತ್ರ ಪ್ರಯೋಗಮಾಡದೆ, ಕೇವಲ ಶಾಂತಿಪೂರ್ವಕವಾದ ಸಹನೆಯಿಂದಲೇ ವಿರೋಧಿಯನ್ನೆದುರಿಸುವ—ಸಾತ್ತ್ವಿಕ ಯುದ್ಧವನ್ನು ನಡೆಯಿಸುತ್ತಿದ್ದರು. ಗೋಖಲೆಯವರು ಈ ವಿಷಯಕ್ಕೆ ತಮ್ಮ ಮನಸ್ಸನ್ನು ಸಂಪೂರ್ಣವಾಗಿ ಕೊಟ್ಟು, ಗಾಂಧಿಯವರ ಸಾತ್ತ್ವಿಕ ಸೈನ್ಯಕ್ಕೆ ಬೇಕಾದ ಪ್ರೋತ್ಸಾಹ ಸಹಾಯಗಳನ್ನು ಈ ದೇಶದಲ್ಲಿ ಒದಗಿಸಿದುದಲ್ಲದೆ, ತಾವೇ ೧೯೧೨ರಲ್ಲಿ ದಕ್ಷಿಣ ಆಫ್ರಿಕಕ್ಕೆ ಹೋಗಿ, ಅಲ್ಲಿಯ ಅಧಿಕಾರಿಗಳನ್ನು ಕಂಡು ಮಾತ

ನಾಡಿ, ಅವರಿಗೆ ಭಾರತೀಯರ ವಿಷಯದಲ್ಲಿ ಗೌರವವೂ ವಿಶ್ವಾಸವೂ ಹುಟ್ಟು ವಂತೆ ಮಾಡಿದರು. ಅಲ್ಲಿ ಆ ಕಾಲದಲ್ಲಿ ನಮ್ಮವರಿಗಿದ್ದ ಕಷ್ಟಗಳಲ್ಲಿ ತಲೆ ಗಂದಾಯದ ಕಾನೂನೊಂದೂ ಮದುವೆಗೆ ಅಡ್ಡಿಪಡಿಸುವ ಕಾನೂನೊಂದೂ ಮುಖ್ಯವಾಗಿದ್ದುವು. ಗೋಖಲೆಯವರ ರಾಯಭಾರದಿಂದ ಇಂಡಿಯಾ ದೇಶದವರಿಗೆ ಆ ಕಷ್ಟಗಳು ನಿವಾರಣೆಯಾಗಲು ಮಾರ್ಗವಾಯಿತು. ಬ್ರಿಟಿಷ್ ಚಕ್ರಾಧಿಪತ್ಯದ ಅಂತರ್ಗತ ರಾಷ್ಟ್ರಗಳಲ್ಲಿ ಭಾರತೀಯರಿಗೆ ಸಲ್ಲ ಬೇಕಾದ ಹಕ್ಕು ಮನ್ನಣೆಗಳ ವಿಷಯವು ಈಗಲೂ ಇನ್ನೂ ಚರ್ಚೆಯಲ್ಲಿಯೇ ಉಳಿದಿದೆ. ಗೋಖಲೆಯವರ ಕಾಲದಿಂದೀಚೆಗೆ ಅದು ಕೆರಳಿ, ಎರಡು ಪಕ್ಷ ಗಳವರ ಮನಸ್ಸುಗಳಲ್ಲಿಯೂ ಉರಿಯನ್ನೆಬ್ಬಿಸಿದೆ. ಈ ಅತ್ಯುದ್ವೇಗದ ವಿವಾದ ದಲ್ಲಿ, ಹಿಂದೆ ಗೋಖಲೆಯವರು ಮಾಡಿದ ಉಪನ್ಯಾಸಗಳನ್ನು ಭಾರತೀಯರು ಈಗಲೂ ಪಠಿಸುತ್ತಿರುವರು.

---

## ಪ್ರಕರಣ ೮—ಕಡೆಯ ದಿನಗಳು

### ಕಾಂಗ್ರೆಸ್ ವಿವಾದ—ಅವಸಾನ

ಗೋಖಲೆಯವರು ದಕ್ಷಿಣ ಆಫ್ರಿಕದಿಂದ ಹಿಂದಿರುಗುವ ವೇಳೆಗೆ ಮತ್ತೊಂದು ಕಠಿಣ ಪ್ರಸಂಗವು ಅವರಿಗೆ ಇಲ್ಲಿ ಸಿದ್ಧವಾಗಿತ್ತು. ಅದು ಕ್ರಾಂಗ್ರೆಸ್ಸಿನ ಸಂಬಂಧವಾದುದು. ೧೯೦೬, ೦೭, ೦೮ನೆಯ ವರ್ಷಗಳಲ್ಲಿ ಗೋಖಲೆಯವರು ಆ ಸಭೆಯ ಮುಖ್ಯ ಕಾರ್ಯದರ್ಶಿಯಾಗಿದ್ದರು. ಅಂದಿಗೆ ಕೆಲವು ಕಾಲದ ಹಿಂದಿನಿಂದ ಆ ಸಂಸ್ಥೆಯೊಳಗೆ ಎರಡು ಕಕ್ಷಿಗಳಾ ಗಿದ್ದುವು:—ಮಿತವೇಗಗಾಮಿ (ಮಾಡರೇಟ್) ಗಳದು ಒಂದು, ಅತಿವೇಗ ಗಾಮಿ (ಎಕ್ಸ್‌ಟ್ರಿಮಿಸ್ಟ್) ಗಳದು ಇನ್ನೊಂದು. ಅವರಿಬ್ಬರ ಪರಮೋ ದ್ದೇಶವೂ ವಸ್ತುತಃ ಒಂದೇ :—ತಮ್ಮ ದೇಶವು ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಅಂತರ್ಗತರಾಷ್ಟ್ರವಾಗಿ, ಸ್ವರಾಜ್ಯವನ್ನು ಪಡೆದಿರಬೇಕೆನ್ನುವುದು. ಆದರೆ ಆ ಉದ್ದೇಶವನ್ನು ಸಾಧಿಸುವುದಕ್ಕಾಗಿ ಅನುಸರಿಸಬೇಕಾದ ಮಾರ್ಗಗಳ ವಿಷಯದಲ್ಲಿಯೂ, ಉಪಯೋಗಿಸಬೇಕಾದ ಕರಣ ಉಪಕರಣಗಳ ವಿಷಯ ದಲ್ಲಿಯೂ, ಎರಡು ಕಕ್ಷಿಗಳವರಿಗೂ ಭಿನ್ನಾಭಿಪ್ರಾಯಗಳಿದ್ದುವು. ಈ

ಸ್ಪಷ್ಟ ಸಂಗತಿಯ ಜೊತೆಗೆ, ಉಭಯ ಕಕ್ಷಿಗಳಲ್ಲಿಯೂ ಕೆಲಕೆಲಮಂದಿಯಲ್ಲಿ ವೈಯಕ್ತಿಕವಾದ ಅಸಹನೆ ಅಸೂಯೆಗಳು ಗೂಢವಾಗಿದ್ದುಕೊಂಡು, ಮನಸ್ತಾಪಗಳನ್ನು ಬೆಳೆಸಿದ್ದುವೆಂದು ಯಥಾರ್ಥವನ್ನರಿತವರು ಹೇಳುತ್ತಾರೆ. ಅಂತೂ ಇಂತೂ ಆ ಎರಡು ಕಕ್ಷಿಗಳ ವೈಮನಸ್ಯವು ೧೯೦೭ರಲ್ಲಿ ಉಲ್ಬಣಾವಸ್ಥೆಗೆ ಬಂದು, ಜನಪದ ಮಹಾಸಭೆಯನ್ನು ಎರಡಾಗಿ ಒಡೆಯಿಸಿತು. ಅತಿವೇಗ ಪಕ್ಷದವರು ಆಗ ತಮ್ಮ ಮುಖಂಡರಾದ ಬಾಲ ಗಂಗಾಧರ ತಿಲಕರನ್ನನುಸರಿಸಿ, ಆ ಸಂಸ್ಥೆಯನ್ನು ಬಿಟ್ಟು ಹೊರಕ್ಕೆ ನಡೆದರು. ಆಮೇಲೆ ಕೆಲವು ವರ್ಷ ಅವರು ಅದಕ್ಕೆ ಹಿಂದಿರುಗಿ ಬರುವ ಸೂಚನೆ ಹೆಚ್ಚಾಗಿ ತೋರಲಿಲ್ಲ. ೧೯೧೪ರಲ್ಲಿ ತಿಲಕರವರು ಆರು ವರ್ಷದ ಕಾರಾಗೃಹ ವಾಸವನ್ನು ಮುಗಿಸಿಕೊಂಡು ಬಂದರು. ಆಗ ಹೇಗಾದರೂ ಮಾಡಿ ಕಾಂಗ್ರೆಸ್ಸಿನೊಡನೆ ಪುನಃ ಸೇರಿದರೇನೇ ತಮ್ಮ ಜೀವಿತೋದ್ದೇಶವು ನೆರವೇರುವುದೆಂದೂ, ಅನ್ಯಥಾ ಅದು ಸುಲಭವಲ್ಲವೆಂದೂ ಅವರಿಗೆ ತೋರಿತು. ಅದರಂತೆ ಮಿತವೇಗ ಪಕ್ಷದೊಡನೆ "ರಾಜಿ" ಮಾಡಿಕೊಳ್ಳಲು ತಾವು ಇಷ್ಟಪಟ್ಟಿರುವುದಾಗಿ ಅವರು ಸೂಚಿಸಿದರು. ಇದರ ಜೊತೆಗೆ ಇನ್ನೂ ಒಂದೆರಡು ಸಂದರ್ಭಗಳು ಸೇರಿದುವು. ಮಾರ್ಲೇ-ಮಿಂಟೋ ರಾಜ್ಯ ಪರಿಷ್ಕರಣಗಳು ಒಂದು ಕಡೆಯೂ, ಅಧಿಕಾರಿ ವರ್ಗದ ಕೋಪ ವಿಜೃಂಭಣೆಯು ಇನ್ನೊಂದು ಕಡೆಯೂ ಸಾಗುತ್ತಿದ್ದುವು. ಪ್ರಜೆಗಳಿಗೆ ಸುಖ ಶಾಂತಿಗಳನ್ನು ಸಂಪಾದಿಸಿಕೊಡಲು ಆ ಪರಿಷ್ಕಾರಗಳು ಸಾಲದೆಹೋದುವೆಂಬುದು ಕ್ಷಿಪ್ರದಲ್ಲಿಯೇ ಗೊತ್ತಾಯಿತು. ರಾಜ್ಯಭೃತ್ಯರ ದರ್ಪವನ್ನು ಹದ್ದಿನಲ್ಲಿಡುವುದಕ್ಕೂ, ಪ್ರಜಾಪ್ರಾಬಲ್ಯವನ್ನು ಸಾಧಿಸುವುದಕ್ಕೂ, ಪುನಃ ರಾಜ್ಯಾಂಗ ಸಂಸ್ಕಾರಗಳನ್ನು ಮಾಡಿಸುವುದು ಆವಶ್ಯಕವಾಯಿತು. ಮಹಾಜನರ ಅಭಿಪ್ರಾಯವು ಈ ರೀತಿ ಬೆಳೆಯುತ್ತಿರುವ ವೇಳೆಗೆ ಸರಿಯಾಗಿ, ಯೂರೋಪು ಖಂಡದಲ್ಲಿ ಮಹಾ ಯುದ್ಧವು ಪ್ರಾರಂಭವಾಗಲು, ಅದರ ಒಂದು ಪರಿಣಾಮ ರೂಪವಾಗಿ ಬ್ರಿಟಿಷ್ ಚಕ್ರಾಧಿಪತ್ಯದೊಳಗಣ ನಾನಾ ಉಪರಾಷ್ಟ್ರಗಳ ರಾಜಕೀಯ ಸ್ಥಿತಿಗತಿಗಳು ಮಾರ್ಪಟ್ಟಾವೆಂಬ ಆಶೆಯು ತಲೆದೋರಿತು. ಹೀಗೆ ಹೊಸ ರಾಜ್ಯ ಸಂಸ್ಕಾರಗಳನ್ನು ಬಯಸಬೇಕಾದ

ಆವಶ್ಯಕತೆಯೂ ಅದಕ್ಕೆ ತಕ್ಕ ಸಮಯಾನುಕೂಲವೂ ಎರಡೂ ಸೇರಿದ್ದಾಗ, ದೇಶೀಯರು ಅನೇಕ ಮುಖರಾಗಿರದೆ ಐಕಮತ್ಯದಿಂದ ನಿಲ್ಲುವುದೇ ಲಾಭ ಕರವೆಂದು ಎಲ್ಲರಿಗೂ ಕಂಡುಬಂದಿತು. ಈ ದೃಷ್ಟಿಯಿಂದ, ಮಿತವಾದಿ ಪಕ್ಷದವರು ಮೇಲೆ ಹೇಳಿದ ಅತಿವಾದಿ ಪ್ರಮುಖರ "ರಾಜೀ" ಪ್ರಯುಕ್ತ ವಾದ ಸೂಚನೆಗೆ ಆದರದಿಂದ ಕಿವಿಗೊಟ್ಟರು. ಅದಕ್ಕೆ ಸರಿಯಾಗಿ ಶ್ರೀಮತಿ ಅನಿಬೆಸೆಂಟ್ ಅಮ್ಮನವರೂ ಇತರ ಮಿತ್ರರು ಕೆಲವರೂ ಉಭಯ ಕಕ್ಷಿ ಗಳಿಗೂ ಮಧ್ಯಸ್ಥರಾಗಿ ನಿಂತು "ರಾಯಭಾರ" ಮಾಡಲು ಉದ್ಯುಕ್ತ ರಾದರು. ಅವರ ಮುಖಾಂತರ ಉಭಯ ಪಕ್ಷಗಳವರಿಗೂ "ರಾಜಿ"ಯ ಏರ್ಪಾಟಿನ ವಿಷಯದಲ್ಲಿ ಚರ್ಚೆಗಳು ಉಪಕ್ರಮವಾದುವು. ಆ ಚರ್ಚೆ ಗಳಲ್ಲಿ ಪರಸ್ಪರ ಮರ್ಮೋದ್ಘಾಟನೆಗಳು ಮರಳಿ ಆರಂಭಿಸಿದುವು. ಹಳೆಯ ಹೊಟ್ಟೇಕಿಚ್ಚೂ, ಮರೆತುಹೋಗಿದ್ದ ಮನಸ್ತಾಪವೂ ಮರಳಿ ಎದ್ದು ಉರಿಯಲು ಮೊದಲಾಯಿತು. ಇಂತಹ ವಿವಾದಗಳಲ್ಲಿ ದೊಡ್ಡ ದೊಡ್ಡವರು ಪರಸ್ಪರ ನಯಗಂಭೀರಗಳಿಂದ ನಡೆಯಬೇಕೆಂದಿದ್ದರೂ, ಅಂಥವರ ಸುತ್ತ ಮುತ್ತಲಿರುವ ಅನುಯಾಯಿಗಳು ಸಣ್ಣ ಜನರಾದಕಾರಣ, ಇವರು ಸಣ್ಣ ಸಣ್ಣ ಗರ್ವ ಮತ್ಸರಗಳಿಗೆ ವಶರಾಗಿ, ತಮ್ಮ ಕ್ಷುದ್ರ ವಚನಗಳಿಂದ ಆ ಬೆಂಕಿಯುರಿಗೆ ತುಪ್ಪ ಸುರಿಯುವುದು ಅಪರೂಪವಲ್ಲ. ಈ ದಾರುಣವಾದ ವಾಕ್ಕಲಹದ ಪರಿಣಾಮವು ಗೋಖಲೆಯವರಿಗೆ ಸಂತಾಪ ಜುಗುಪ್ಸೆಗಳನ್ನು ಉಂಟುಮಾಡುವುದಾಯಿತು.

ಈ ವೇಳೆಗೆ ಅವರಿಗೆ ೪೮ ವರುಷ ವಯಸ್ಸಾಗಿತ್ತು. ಅದರಲ್ಲಿ ೧೮ ವರುಷಗಳು ಬಡತನ ವಿದ್ಯಾತುರತೆಗಳಲ್ಲಿ ಕಳೆಯಲ್ಪಟ್ಟಿದ್ದುವು; ೩೦ ವರುಷಗಳು ದೇಶಾಟನೆಯಲ್ಲಿಯೂ ಸಂತತ ಬುದ್ಧಿಕಾರ್ಯದಲ್ಲಿಯೂ ಕಳೆ ಯಲ್ಪಟ್ಟಿದ್ದುವು. ಅವರು ಇಂಡಿಯಾ ದೇಶದ ಎಲ್ಲ ಭಾಗಗಳಲ್ಲಿಯೂ ನಾಲ್ಕಾರು ಸಲ ಸಂಚಾರ ಮಾಡಿದ್ದರು; ಇಂಗ್ಲೆಂಡು ಮೊದಲಾದ ವಿದೇಶಗಳಿಗೂ ಅನೇಕಾವೃತ್ತಿ ಪ್ರಯಾಣಮಾಡಿದ್ದರು. ಸ್ವಾಭಾವಿಕ ವಾಗಿ ಅಷ್ಟೇನೂ ಪರಿ ಪುಷ್ಟಾಂಗರಲ್ಲದೆ, ದ್ರವ್ಯಾನುಕೂಲತೆಯ ವಿಷಯ ದಲ್ಲಿ ಎಷ್ಟು ಮಾತ್ರವೂ ಭಾಗ್ಯಶಾಲಿಗಳಾಗಿರದೆ, ಅವಿಚ್ಛಿನ್ನವಾದ ಚಿಂತೆಗೆ

ಮನಸ್ಸು ಕೊಟ್ಟು ಬಾಳಿದವರ ದೇಹವು, ಪದೇ ಪದೇ ಯಾತಾಯಾತಕ್ಕೆ ಸಿಕ್ಕಿದರೆ, ಅದು ಇಷ್ಟಷ್ಟು ಬೇಗ ದುರ್ಬಲವಾಗುವುದು ಆಶ್ಚರ್ಯವೇನೂ ಅಲ್ಲ. ಗೋಖಲೆಯವರ ಸ್ವಭಾವವೂ ಅತಿ ಮೃದುವಾದುದೆಂಬುದನ್ನು ವಾಚಕರು ಬಲ್ಲರು. ಶರೀರವೂ ಮನಸ್ಸೂ ಹೀಗೆ ಪೆತ್ತಗಾಗಿ ಅಶಕ್ತ ಸ್ಥಿತಿಯಲ್ಲಿದ್ದಾಗ ಕಾಂಗ್ರೆಸ್ ಸಂಬಂಧದ ದುಸ್ಸಹ ವಿವಾದವು ಅವರಿಗೆ ಮತ್ತಷ್ಟು ವ್ಯಥೆಯನ್ನೂ ಆಯಾಸವನ್ನೂ ಉಂಟುಮಾಡಿತು. ಪ್ರತ್ಯರ್ಥಿಗಳು ಹೇಳಿಕೊಳ್ಳುತ್ತಿದ್ದ ಅತಿಕಥೆಗಳಿಗೂ ಮಿಥ್ಯಾಪವಾದಗಳಿಗೂ ತಕ್ಕಂತೆ ಪ್ರತ್ಯುತ್ತರ ಕೊಡುವ ಕ್ಲೇಶವೂ, ಜನಪದ ಮಹಾಸಭೆಗೆ ಅತಿವೇಗ ಪಕ್ಷದವರನ್ನು ಯಾವರೀತಿ ಸೇರಿಸಿಕೊಂಡರೆ ಅವರಿಂದ ಅದಕ್ಕೆ ಅಪಾಯ ಬಾರದೆ, ಅದರ ಪರಮೋದ್ದೇಶಕ್ಕೆ ಹಾನಿಯಾಗದೆ, ಅದರ ಸಾಧನೆಯು ಮತ್ತಷ್ಟು ಚೆನ್ನಾಗಿ ಆದೀತು—ಎಂಬ ಪ್ರಶ್ನೆಯ ಪ್ರಯಾಸವೂ ಗೋಖಲೆಯವರ ಮನಸ್ಸನ್ನು ಆಕ್ರಮಣ ಮಾಡಿದ್ದ ಕಾಲದಲ್ಲಿ ಅವರಿಗೆ ಮೃತ್ಯುವು ಸನ್ನಿಹಿತವಾಯಿತು.

೧೯೧೫ನೆಯ ಇಸವಿಯ ಫೆಬ್ರುವರಿ ೧೨ನೆಯ ತಾರೀಖು ಶುಕ್ರವಾರ ಪೂನಾ ಪಟ್ಟಣದಲ್ಲಿಯ ದೇಶ ಸೇವಕ ಸಂಘದ ಮಂದಿರದಲ್ಲಿ ಮ|| ಗಾಂಧಿಯವರನ್ನು ಬಹುಮಾನಿಸುವುದಕ್ಕಾಗಿ ಒಂದು ಕೂಟವು ಸೇರಿತ್ತು. ಗೋಖಲೆಯವರಿಗೆ ಆ ಸಾಯಂಕಾಲವೇ ಮೂರ್ಛೆ ಬಂದಂತಾಯಿತು. ಅವರು ಬೇಗನೆ ಚೇತರಿಸಿಕೊಂಡರಾದರೂ ಅದರಿಂದ ವೈದ್ಯರ ಮನಸ್ಸಿಗೆ ಭೀತಿ ತೋರಿತು. ಆ ವೇಳೆಗೆ ಸುಮಾರು ಎರಡು ವರ್ಷದ ಹಿಂದಿನಿಂದಲೂ ಗೋಖಲೆಯವರು ಅನಾರೋಗ್ಯದಲ್ಲಿಯೇ ಇದ್ದರು. ಬಹು ದಿನಗಳಿಂದ ಅವರು ಬಹುಮೂತ್ರವ್ಯಾಧಿಗೆ ಸಿಕ್ಕಿ ಬಡವಾಗಿದ್ದರು. ಅದು ಈಗ ಉಲ್ಬಣಾವಸ್ಥೆಗೆ ಬಂದಿತ್ತು. ಆದರೂ ದಿನಚರಿಯ ಕೆಲಸವು ಯಥಾಪ್ರಕಾರ ನಡೆಯುತ್ತಿತ್ತು. ೧೭ನೆಯ ತಾ|| ಬುಧವಾರ ರಾತ್ರಿ ಅವರು ಒಂದು ಮುಖ್ಯವಾದ ರಾಜ್ಯಸಂಸ್ಕಾರ ನಿರೂಪವನ್ನು ರಹಸ್ಯವಾಗಿ ಹೇಳಿ ಬರೆಯಿಸಿದರು.

ಮಾರ್ಲೀ-ಮಿಂಟೋ ಸುಧಾರಣೆಗಳು ಆದ ಒಂದೆರಡು ವರ್ಷಗಳೊಳ

ಗಾಗಿಯೇ ಪುನಃ ರಾಜ್ಯವ್ಯವಸ್ಥೆಗೆ ಸಂಸ್ಕಾರಗಳು ನಡೆಯಬೇಕಾದುದರ ಆವಶ್ಯಕತೆಯು ಕಂಡುಬಂದಿತ್ತೆಂಬ ಸಂಗತಿಯನ್ನು ಮೇಲೆ ನೋಡಿದೆವಷ್ಟೆ ?' ಪ್ರಸಕ್ತ ಸಮಯದಲ್ಲಿ ಬೊಂಬಾಯಿ ಗವರ್ನರಾಗಿದ್ದ ಲಾರ್ಡ್ ವಿಲ್ಲಿಂಗ್‌ಡನ್ ಅವರು ಕೆಲವು ದಿನಗಳ ಹಿಂದೆ ಗೋಖಲೆಯವರನ್ನು ಕಂಡಿದ್ದು—ಯಾವ ಯಾವ ಪರಿಷ್ಕಾರಗಳನ್ನು ನಡಿಸುವುದು ಭಾರತೀಯರ ಸಮಾಧಾನಕ್ಕೆ ಸದ್ಯಃ ಅತ್ಯಂತಾವಶ್ಯಕ ?—ಎಂದು ರಹಸ್ಯದಲ್ಲಿ ಕೇಳಿದ್ದರು. ಅದಕ್ಕೆ ಉತ್ತರ ವಾಗಿ, ಗೋಖಲೆಯವರು ಆಗಿನ ಸಂದರ್ಭಗಳನ್ನೆಲ್ಲ ಲಕ್ಷ್ಯಕ್ಕೆ ತೆಗೆದು ಕೊಂಡು, ಎಷ್ಟುಮಟ್ಟಿನ ಸಂಸ್ಕಾರಗಳನ್ನು ನಡೆಯಿಸುವುದು ಪ್ರಜಾ ವರ್ಗದವರ ದೃಷ್ಟಿಯಿಂದ ಆಗಿಗೆ ಆವಶ್ಯಕ ಎಂಬುದನ್ನು ಮಾತ್ರವೇ ಅಲ್ಲದೆ, ಎಷ್ಟುಮಟ್ಟಿನ ಸಂಸ್ಕಾರಗಳನ್ನು ನಡಿಸುವುದು ಆ ಕಾಲದ ಅಧಿಕಾರಿ ವರ್ಗದ ದೃಷ್ಟಿಯಿಂದ ಸಾಧ್ಯ ಎಂಬುದನ್ನೂ ಪರ್ಯಾಲೋಚಿಸಿ, ಲಾರ್ಡ್ ವಿಲ್ಲಿಂಗ್‌ಡನ್‌ರವರೊಬ್ಬರ ಉಪಯೋಗಕ್ಕೋಸ್ಕರವಾಗಿ ಮಾತ್ರ ಮೇಲೆ ಹೇಳಿದ ರಹಸ್ಯನಿರೂಪವನ್ನು ಬರೆಯಿಸಿ, ಅದರ ಒಂದು ಪ್ರತಿಯನ್ನು ತಮ್ಮ ಮಿತ್ರರಾದ ಆಗಾಖಾನ್‌ರವರಿಗೂ ಮತ್ತೊಂದನ್ನು ಹಿರಿಯರಾದ ಸರ್ ಫೆರೋಜ್‌ಷಾ ಮೇತಾ ಅವರಿಗೂ ಸಮಯಬಂದಾಗ ಆಲೋಚಿಸು ವುದಕ್ಕೆಂದು ಕಳುಹಿಸಿದರು. ಆ ನಿರೂಪದ ವಿಷಯದಲ್ಲಿ, ಅದು ಪ್ರಜಾ ದೃಷ್ಟಿಯೊಂದರಿಂದಲೇ ಅಲ್ಲದೆ, ಕಾರ್ಯಭಾರವನ್ನು ವಹಿಸಿದ ಮಂತ್ರಿಯ ದೃಷ್ಟಿಯಿಂದಲೂ ಸಹ ಬರೆಯಲ್ಪಟ್ಟುದು, ಮತ್ತು ಐರೋಪ್ಯ ಮಹಾ ಯುದ್ಧದ ಪರಿಣಾಮಗಳು ಸ್ಪಷ್ಟವಾಗಿ ಕಾಣಬರುವುದಕ್ಕೆ ಮುಂಚೆ ಬರೆಯಲ್ಪಟ್ಟುದು—ಎಂಬೆರಡಂಶಗಳನ್ನು ನಾವು ನೆನಪಿನಲ್ಲಿಡಬೇಕು. ಆಗಿನ ಆ ಸಣ್ಣ ಮಿತ ಸಂದರ್ಭಕ್ಕಾಗಿ ಮಾಡಿದ ಸಲಹೆಗಳು ಈಗಿನ ವಿಶೇಷವಾದ ಜನಪ್ರಬುದ್ಧಸ್ಥಿತಿಗೆ ಸರಿಹೋಗಲಾರವೆಂಬುದರಲ್ಲಿ ಆಶ್ಚರ್ಯವೇನೂ ಇಲ್ಲ.

ಅವರು ಗುರುವಾರ (೧೮-೨-೧೯೧೫) ಅನೇಕ ಇತರ ಕಾಗದ ಗಳನ್ನು ಬರೆಯಿಸಿದರು. ಶುಕ್ರವಾರ ಪ್ರಾತಃಕಾಲ ಅವರ ಮನಸ್ಸಿಗೇ ಸ್ವಲ್ಪ ಭೀತಿ ತೋರಿತು. ಕೂಡಲೇ ತಮ್ಮ ಸೋದರಿಯರನ್ನೂ ಕುವರಿಯ ರಿರ್ವರನ್ನೂ, ಇತರ ಬಂಧು ಮಿತ್ರರನ್ನೂ ಕರೆಯಿಸಿ, ಹೇಳಬೇಕಾದುದನ್ನು

ಹೇಳಿ, ಪ್ರಯಾಣೋನ್ಮುಖರಾದರು. ರಾತ್ರಿ ಒಂಭತ್ತು ಘಂಟೆಯ ಸಮಯದಲ್ಲಿ ಹತ್ತಿರದಲ್ಲಿದ್ದೊಬ್ಬಾತನಿಗೆ—

"ಇಷ್ಟು ದಿನವೂ ಇಲ್ಲಿಯ ವಿನೋದವನ್ನು ನೋಡಿದುದಾಯಿತು; ಇನ್ನು ಅಲ್ಲಿಯದನ್ನು ನೋಡಲು ತೆರಳುವೆನು"

ಎಂದು ಹೇಳಿ, ಆನಂದನಾಮ ಸಂವತ್ಸರ ಫಾಲ್ಗುಣ ಶುದ್ಧ ಷಷ್ಠಿಯ (೧೯ನೆಯ ಫೆಬ್ರುವರಿ ೧೯೧೫) ರಾತ್ರಿ ೧೧ ಘಂಟೆ ೧೦ ನಿಮಿಷದ ವೇಳೆಗೆ ಶಾಂತಭಾವದಿಂದ ದೇಹವನ್ನು ಬಿಟ್ಟರು.

ಅದಕ್ಕೆ ಕೆಲವು ದಿನಗಳ ಹಿಂದೆ, ತಮ್ಮ ಮಿತ್ರರೂ ವಿಜ್ಞಾನಶಾಸ್ತ್ರದಲ್ಲಿ ಜಗದ್ವಿಖ್ಯಾತ ಪಂಡಿತರೂ ಪರಿಶೋಧಕರೂ ಆದ ಸರ್ ಜಗದೀಶಚಂದ್ರ ಬೋಸರವರೊಡನೆ ಮಾತನಾಡುತ್ತಿದ್ದಾಗ, ಜೀವನಿಗೆ ಜನ್ಮಾಂತರ ಪ್ರಾಪ್ತಿಯುಂಟೆ—ಎಂಬ ಜಿಜ್ಞಾಸೆಯಲ್ಲಿ ಗೋಖಲೆಯವರು ಆಸಕ್ತಿಯನ್ನು ಸೂಚಿಸಿ,

ತಮ್ಮ ಜೀರ್ಣದೇಹವನ್ನು ವಿಸರ್ಜಿಸಿದ ಕೂಡಲೆ, ತಮ್ಮ ಮಮತೆಗೆ ಪಾತ್ರವಾದ ಇದೇ ದೇಶದಲ್ಲಿಯೇ ಪುನಃ ತಾವು ಜನ್ಮಿಸಿ, ಆಕೆಯ ಸೇವೆಯಲ್ಲಿ ತಮ್ಮ ಪಾಲಿಗೆ ಬರುವ ಭಾರವನ್ನು ತಾವು ಪುನಃ ವಹಿಸುವುದು ನಿಶ್ಚಯ,

—ಎಂಬ ನಂಬಿಕೆಯನ್ನು ತಿಳಿಸಿದ್ದರಂತೆ!

---

## ಪ್ರಕರಣ ೯—ಗುಣಾತಿಶಯಗಳು

ಪಾಠಶೀಲತೆ—ಸಮಾಜ ಸಂಸ್ಕಾರ—ಶಿಷ್ಟಾಚಾರ—ಸಂಸಾರ ಪ್ರೀತಿ—ಕಷ್ಟ ಸಹನೆ— ವಿನೋದಪರತೆ— ಮರ್ಯಾದೆ— ಮುಸಲ್ಮಾನರ ವಿಶ್ವಾಸ— ತಿಲಕರೊಡನೆ ಸಾಮ್ಯಾಸಾಮ್ಯ—ಬಿರುದು— ಪರಪಕ್ಷ ಸಮೀಕ್ಷೆ—ಸ್ವಪಕ್ಷಶೋಧನೆ— ಜವಾಬ್ದಾರೀ ಬುದ್ಧಿ—ಆತ್ಮಸಾಕ್ಷಿಕ ವರ್ತನೆ—ಉಪಸಂಹಾರ

ನಮ್ಮ ಸೋಮೇಶ್ವರ ಕವಿಯ—

ಕೆಲವಂ ಬಲ್ಲವರಿಂದೆ ಕಲ್ತು ಕೆಲವಂ ಗ್ರಂಥಗಳಿಂದೋದುತಂ
ಕೆಲವಂ ಮಾಳ್ಪವರಿಂದೆ ಕಂಡು ಕೆಲವಂ ಸುಜ್ಞಾನದಿಂ ನೋಡುತಂ
ಕೆಲವಂ ಸಜ್ಜನಸಂಗದಿಂದಲರಿಯಲ್ ಸರ್ವಜ್ಞನಪ್ಪಂತೆ.........................

—ಎಂಬ ನೀತಿ ವಚನವು ಗೋಖಲೆಯವರ ವಿಷಯದಲ್ಲಿ ಅಕ್ಷರಶಃ ನಿಜವಾಯಿತೆಂದರೆ ಉತ್ಪ್ರೇಕ್ಷೆಯಾಗಲಾರದು. ಅವರು ಸರ್ವದಾ ಒಂದು

ಬಗೆಯಲ್ಲಲ್ಲದಿದ್ದರೆ ಮತ್ತೊಂದು ಬಗೆಯಲ್ಲಿ ಪಾಠಶೀಲರಾಗಿರುತ್ತಿದ್ದರು. ಅವರ ಮಿತ್ರರಾದ ಸರ್ ಡಿ. ಇ. ವಾಚಾ ಅವರು ಹೀಗೆ ಹೇಳಿರುವರು :—

ಗೋಖಲೆಯವರು ಇತರರಿಗೆ ಉಪಾಧ್ಯಾಯರಾಗಿದ್ದ ಕಾಲದಲ್ಲಿ ತಮ್ಮ ಸ್ವಂತಕ್ಕೂ ಉಪಾಧ್ಯಾಯರಾಗಿದ್ದರು. ಅವರ ಗ್ರಂಥಪರಿಚಯವು ವಿಸ್ತಾರವಾದುದಾಗಿತ್ತು. ವಿಷಯ ಸಂಗ್ರಹ ಶಕ್ತಿಯು ಗೋಖಲೆಯವರಿಗೆ ಹೇರಳವಾಗಿತ್ತು.

ಯಾವ ಭಾಗದಲ್ಲಿಯೂ ದೂಷ್ಯವಾದ ಅಥವಾ ಆಕ್ಷೇಪಣೀಯವಾದ ರೀತಿಯಲ್ಲಿ ನಡೆಯದೆ ಇರಬೇಕೆಂದು ಅವರು ಬಹಳ ಪ್ರಯತ್ನಪಡುತ್ತಿದ್ದರು ಇಂಗ್ಲೆಂಡಿಗೆ ಹೋಗುವುದಕ್ಕೆ ಮುಂಚೆ ಇಂಗ್ಲಿಷ್ ಸಮಾಜದ ನಡೆನುಡಿತೊಡಿಗೆಗಳ ರೀತಿಯನ್ನು ತಪಶೀಲು ಸಹಿತ ತಿಳಿದುಕೊಂಡಿದ್ದರು. ಲಂಡನ್ ನಗರದಲ್ಲಿದ್ದಾಗ ಅಲ್ಲಿಯ ಸಂಭಾವಿತನಾದ ಮತ್ತು ಗೌರವಸ್ಥನಾದ ನಾಗರಿಕನ ರೀತಿಯಲ್ಲಿ ನಡೆದುಕೊಳ್ಳಬೇಕೆಂಬುದು ಅವರ ಅಭಿಮತ. ಅಲ್ಲಿಯ ಪ್ರಸಿದ್ಧ ರಾಜ್ಯತಂತ್ರ ವಿಶಾರದರನ್ನೂ ಇತರ ಮುಖ್ಯ ಜನರನ್ನೂ ಕಂಡು ಮಾತನಾಡಬೇಕೆಂದು ಅವರಿಗೆ ತುಂಬಾ ಆಶೆ. ಅಲ್ಲಿಯ ಕಲಾಶಾಲೆಗಳಿಗೂ ವಿದ್ಯಾಲಯಗಳಿಗೂ ಹೋದಾಗ ಇಂಗ್ಲೆಂಡಿನ ವಿದ್ಯಾಪ್ರಚಾರ ವಿಷಯವನ್ನೆಲ್ಲಾ ವಿಚಾರಿಸಿ ತಿಳಿದುಕೊಂಡರು. ಬಾಲಿಕಾ ಪಾಠಶಾಲೆಗಳಿಗೆ ಹೋಗಿ ಅಲ್ಲಿಯ ಸ್ತ್ರೀ ವಿದ್ಯಾಭ್ಯಾಸ ಕ್ರಮವನ್ನೆಲ್ಲಾ ನೋಡಿ ಬಂದರು....ತಮ್ಮ ವಿಷಯದಲ್ಲಿ ಎಲ್ಲರಿಗೂ ಸದಭಿಪ್ರಾಯವುಂಟಾಗುವಂತೆ ಮಾಡಲು ಅವರು ಸರ್ವದಾ ಪ್ರಯಾಸ ತೆಗೆದುಕೊಳ್ಳುತ್ತಿದ್ದರು. ಅವರನ್ನು ನೋಡಿದರೆ, ಒಬ್ಬ ಸುಶಿಕ್ಷಿತನಾದ ಹುಡುಗನು ತನ್ನ ತಂದೆತಾಯಿಗಳು ಹೇಳಿದ ಬುದ್ಧಿಯ ಮಾತುಗಳನ್ನು ಸ್ವಲ್ಪವೂ ತಪ್ಪದೆ ಜ್ಞಾಪಕದಲ್ಲಿಟ್ಟುಕೊಂಡು ಪರಸ್ಥಳ ಸಂಚಾರಮಾಡುತ್ತಿದ್ದರೆ ಹೇಗೋ ಹಾಗೆ ನನಗೆ ತೋರುತ್ತಿತ್ತು. ಗೋಖಲೆಯವರ ಮುಖ್ಯ ಲಕ್ಷಣವೇನೆಂದರೆ—ಹಿಡಿದ ಕೆಲಸವನ್ನು ಪರಿಷ್ಕಾರವಾಗಿ ಮಾಡುತ್ತಿದ್ದುದು. ಅವರ ಭಾಷಾಶೈಲಿಯು ಶುದ್ಧವಾದುದಾಗಿಯೂ ಅವರ ಅಭಿಪ್ರಾಯಗಳು ವಿಶದವಾದವುಗಳಾಗಿಯೂ ಅವರ ವಾಕ್ಪ್ರವಾಹವು ನಿರರ್ಗಳವಾದುದಾಗಿಯೂ ಇದ್ದುವು. ಅವರು ಪ್ರಜಾಪ್ರತಿನಿಧಿಯಾಗಿದ್ದರು ; ದೊಂಬಿಯ ಧೂರ್ತರಲ್ಲ. ನಿಷ್ಠುರದಿಂದ ಕೂಡಿದ ಅಥವಾ ಗಾಂಭೀರ್ಯವಿಲ್ಲದ ಮಾತುಗಳನ್ನು ಎಂದಿಗೂ ಅವರು ಆಡುತ್ತಿರಲಿಲ್ಲ.

ರಾನಡೆಯವರಂತೆಯೇ ಗೋಖಲೆಯವರೂ ಸಮಾಜ ಸಂಸ್ಕಾರವಾದಿಗಳಾಗಿದ್ದರು—ಎಂದರೆ ಹಿಂದೂ ಸಮಾಜದ ಆಚಾರ ಸಂಪ್ರದಾಯಗಳಲ್ಲಿ ಈ ಕಾಲಕ್ಕೆ ತಕ್ಕಂತೆ ತಿದ್ದಲ್ಪಡಬೇಕಾದ ಅಂಶಗಳು ಅನೇಕ ಇವೆ ಎಂದು ಬೋಧಿಸುತ್ತಿದ್ದರು. ಬಾಲಕ ಬಾಲಿಕೆಯರ ವಿವಾಹದ ವಯಸ್ಸನ್ನು

ಹೆಚ್ಚಿಸುವುದು, ಸ್ತ್ರೀಯರಿಗೆ ವಿದ್ಯೆ ಕಲಿಸಿ ಅವರ ಸ್ಥಿತಿಯನ್ನುತ್ತಮಪಡಿಸು ವುದು, ವೈಧವ್ಯದ ಕಾಠಿಣ್ಯವನ್ನು ಕಡಿಮೆಮಾಡಿಸುವುದು, ಅಂತ್ಯಜರೆನ್ನಿಸಿ ಕೊಂಡಿರುವವರ ಅಸ್ಪೃಶ್ಯತೆಯನ್ನು ತೆಗೆದುಹಾಕಿ ಅವರ ಸ್ಥಿತಿಯನ್ನು ಉತ್ತಮಗೊಳಿಸುವುದು, ಜಾತಿ ವಿಜಾತಿಗಳವರ ವೈಷಮ್ಯಗಳು ತೊಲಗಿ ಐಕಮತ್ಯ ಸಮಭಾವಗಳು ಅವರಲ್ಲಿ ಬೆಳೆಯುವಂತೆ ಮಾಡುವುದು—ಇವು ಸಮಾಜ ಸಂಸ್ಕಾರಗಳಲ್ಲಿ ಮುಖ್ಯವಾದ ಕೆಲವು. ಈ ವಿಷಯಗಳಲ್ಲಿ ಗೋಖಲೆಯವರು ತಮ್ಮ ಗುರುಗಳಂತೆಯೇ ಅಭಿಪ್ರಾಯಪಟ್ಟಿದ್ದರೂ, ಅವರು ರಾಜಕೀಯ ಪ್ರಸಂಗಕ್ಕೆ ತಮ್ಮ ಗಮನವನ್ನು ಮೀಸಲು ಕಟ್ಟಿದ್ದ ಕಾರಣ, ಸಾಮಾಜಿಕ ಪ್ರಸಂಗಕ್ಕೆ ಅವರ ಗಮನವು ಹೆಚ್ಚಾಗಿ ದೊರೆಯಲಿಲ್ಲ. ಒಬ್ಬೊಬ್ಬರು ಒಂದೊಂದು ಕೆಲಸವನ್ನು ಮಾಡುವುದೇ ಕಷ್ಟವಾಗಿರುವ ಈ ಕಾಲದಲ್ಲಿ, ಒಬ್ಬರೇ ಎರಡು ಮೂರು ದೊಡ್ಡ ಕೆಲಸಗಳಿಗೆ ಕೈಹಾಕುವುದು ನಿಷ್ಫಲವೆಂದೂ ಅದರಿಂದ ಯಾವ ಒಂದು ಕೆಲಸವೂ ಚೆನ್ನಾಗಿ ನಡೆಯದೆ ಹೋಗುವುದೆಂದೂ ಗೋಖಲೆಯವರು ಭಾವಿಸಿದ್ದರು. ಅದಲ್ಲದೆ, ರಾಜಕೀಯ ಪ್ರಸಂಗವೊಂದರಲ್ಲಿಯೇ ತಮಗೆ ಬೇಕಾದಷ್ಟು ಮಂದಿ ದ್ವೇಷಿಗಳು ಆಗಿರುವಾಗ, ತಾವು ಸಾಮಾಜಿಕ ಪ್ರಸಂಗಕ್ಕೂ ಹೊರಟರೆ ತಮ್ಮಲ್ಲಿ ಅವಿಶ್ವಾಸಿಗಳಾದವರ ಸಂಖ್ಯೆಯು ದ್ವಿಗುಣವಾಗಿ, ತಮ್ಮ ಎರಡು ಪ್ರಸಂಗಗಳೂ ಕೆಟ್ಟುಹೋಗಬಹುದೆಂದು ಅವರಿಗೆ ಶಂಕೆಯಿತ್ತು. ಒಂದು ಕಡೆ ರಾಜ್ಯಾಧಿಕಾರಿಗಳೂ, ಇನ್ನೊಂದು ಕಡೆ ಸಮಾಜಾಧಿಕಾರಿಗಳಾದ ಶಾಸ್ತ್ರಪಂಡಿತರುಗಳೂ (ಅಥವಾ ಪೂರ್ವಾ ಚಾರ ಜಡರೂ) ಇಬ್ಬರೂ ವಿರೋಧಿಗಳಾದರೆ ತಮಗೆ ಎಲ್ಲಿಯೂ ನಿಲ್ಲಲೆಡೆಯಿರದೆಂಬುದನ್ನು ಗೋಖಲೆಯವರು ತಿಳಿದು, ಸಮಾಜ ಸಂಸ್ಕಾರ ಪ್ರಚಾರವನ್ನು ಇತರರಿಗೆ ಬಿಟ್ಟು, ಎಲ್ಲ ಸಂಸ್ಕಾರಗಳಿಗೂ ಮೂಲಭೂತ ವಾದ, ಮತ್ತು ಇಂಡಿಯಾ ದೇಶದ ಆಗಿನ ಸ್ಥಿತಿಯಲ್ಲಿ ಕಷ್ಟತರವಾಗಿದ್ದ ರಾಜಕೀಯ ಪ್ರಸಂಗಕ್ಕೇ ತಮ್ಮ ಮನೋಬುದ್ಧಿಗಳನ್ನು ಹೆಚ್ಚಾಗಿ ವಿನಿಯೋಗಿಸಿದರು. ತಮ್ಮ ಸ್ವಂತ ಕುಟುಂಬ ವರ್ಗದಲ್ಲಿ ಮಾತ್ರ ಅವರು ಯುಕ್ತವೆನಿಸಿದ ಸಮಾಜ ಸಂಸ್ಕಾರಗಳನ್ನು ನಿರ್ಭಯವಾಗಿ ನಡಿಸಿದ್ದರು.

ಸ್ವಂತ ಆಚಾರ ವ್ಯವಹಾರಗಳಲ್ಲಿ ಅವರು ಶಿಷ್ಟಸಂಪ್ರದಾಯ್ಯವನ್ನು ಎಂದೂ ಬಿಟ್ಟವರಲ್ಲ. ವಾಚಾ ಅವರು ಹೀಗೆ ಹೇಳಿರುವರು :—

ಇಂಗ್ಲೆಂಡಿನಲ್ಲಿ ವಿದೇಶಿಗಳ ಮಧ್ಯೆ ಇದ್ದಾಗಲೂ ತಾವು ಹಿಂದೂ ಮತಸ್ಥರೆಂಬುದನ್ನು ಅವರು ಮರೆತಿರಲಿಲ್ಲ ; ಆಚಾರ ನಿಯಮವುಳ್ಳವರಾಗಿದ್ದರು. ಮೊಟ್ಟೆಯನ್ನು ಮುಟ್ಟಿದವರಲ್ಲ ; ಮೀನನ್ನು ಮೂಸಿನೋಡಿದವರಲ್ಲ ; ರೊಟ್ಟಿ, ಬೆಣ್ಣೆ, ಕಾಯಿಪಲ್ಯ, ಹಣ್ಣು—ಇವೇ ಅವರ ಆಹಾರ. ಭಕ್ಷ್ಯವೇನನ್ನಾದರೂ ತಂದರೆ ಅದರಲ್ಲಿ ಮೊಟ್ಟೆ ಕಲೆತಿರಬಹುದೆಂಬ ಭೀತಿಯಿಂದ ಅದಕ್ಕೆ ಕೈ ಹಾಕುತ್ತಿರಲಿಲ್ಲ. ಇದಕ್ಕಾಗಿ ನಾನು ಅವರನ್ನು ಅನೇಕವೇಳೆ ಪರಿಹಾಸಕ್ಕೆ ಗುರಿಪಡಿಸುತ್ತಿದ್ದೆನು. ಆಗ ದಾದಾಭಾಯಿ ನವರೋಜಿಯವರು ಅವರಿಗೆ ಸಹಾಯವಾಗಿ ಬರುತ್ತಿದ್ದರು. . . . . ಮಿತ್ರಗೋಷ್ಠಿಗೆ ಬಂದಾಗ ಗೋಖಲೆಯವರು ತಮ್ಮ ಮರಾಠೀ ಪಾಗನ್ನೇ (ರುಮಾಲನ್ನು) ಧರಿಸುತ್ತಿದ್ದರು. ಅದರ ಸುವರ್ಣಚ್ಛಾಯೆಯು ಅನೇಕ ಮಂದಿ ಆಂಗ್ಲ ಮಹಿಳೆಯರ ದೃಷ್ಟಿಯನ್ನಾಕರ್ಷಿಸುತ್ತಿತ್ತು.

ದೇಶ ಸೇವಕ ಸಂಘವನ್ನು ಸ್ಥಾಪಿಸಿದ ಬಳಿಕ, ಗೋಖಲೆಯವರು ಪುಣೆಯಲ್ಲಿದ್ದಾಗ ತಮ್ಮ ಕಾಲವನ್ನು ಊರ ಹೊರಗಿರುವ ಆ ಸಂಘದ ಕಟ್ಟಡದಲ್ಲಿಯೇ ಹೆಚ್ಚಾಗಿ ಕಳೆಯುತ್ತಿದ್ದರು. ಅವರ ಇಬ್ಬರು ಹೆಣ್ಣು ಮಕ್ಕಳೂ ಅವರ ಅಣ್ಣಂದಿರ ಮತ್ತು ಸಹೋದರಿಯರ ಮಕ್ಕಳು ಮರಿಗಳೂ ಒಟ್ಟಿಗೆ ಊರೊಳಗೆ ಬೇರೊಂದು ಮನೆಯಲ್ಲಿ ವಾಸವಾಗಿದ್ದರು. ಆ ದೊಡ್ಡ ಕುಟುಂಬದ ಪೋಷಣೆಯು ತಮ್ಮನ್ನೇ ಹೊಂದಿದ್ದರೂ, ಕಡೆ ಕಡೆಗೆ ಅವರ ಆಲೋಚನೆಯು ಗೃಹಕೃತ್ಯ ವಿಷಯಗಳಲ್ಲಿ ತೀರಾ ಕಡಿಮೆಯಾಗಿ, ಸಾರ್ವಜನಿಕ ವಿಷಯಗಳಲ್ಲಿ ಹೆಚ್ಚಾಯಿತು. ಕೆಲವು ವರ್ಷಗಳ ಹಿಂದೆಯೇ ಅವರಿಗೆ ಭಾರ್ಯಾವಿಯೋಗವಾಗಿತ್ತು. ಪುನರ್ವಿವಾಹದ ಯೋಚನೆಯೇ ಅವರಿಗೆ ಬರಲಿಲ್ಲ. ಸರ್ ಡಿ. ಇ. ವಾಚಾ ಅವರು ಹೀಗೆ ಹೇಳಿದ್ದಾರೆ :—

ನಾವಿಬ್ಬರೂ ಗೃಹಸ್ಥ ಧರ್ಮದಲ್ಲಿ ಆಶೆಯುಳ್ಳವರು. ಅವರ ಹೃದಯವು ಮೃದುವಾದುದು. ಸಾಂಸಾರಿಕ ಕಷ್ಟಸುಖಗಳನ್ನು ನಾವಿಬ್ಬರೂ ಪರಸ್ಪರ ಹೇಳಿಕೊಂಡು ಅನೇಕ ವೇಳೆ ಕಣ್ಣೀರಿಟ್ಟದ್ದೇವೆ. . . . ಅವರು ಪಾಪಭೀತರು ; ಸಹಧರ್ಮಿಣಿಯಲ್ಲಿ ಅನುರಾಗವುಳ್ಳವರಾಗಿಯೂ, ಮಕ್ಕಳಲ್ಲಿ ಅತಿಶಯ ವಾತ್ಸಲ್ಯವುಳ್ಳವರಾಗಿಯೂ, ಸ್ನೇಹಿತರಲ್ಲಿ ಪ್ರೇಮಪೂರಿತರಾಗಿಯೂ ವಿನೋದಪರರಾಗಿಯೂ ಇದ್ದರು.

ಗೋಖಲೆಯವರು ಬಡವರಾಗಿ ಹುಟ್ಟಿ, ಧನಿಕರಾಗಲು ತಕ್ಕ ಸಾಮರ್ಥ್ಯವಿದ್ದರೂ, ಬಡತನದಲ್ಲಿಯೇ ಕಡೆಯವರೆಗೂ ಬದುಕಿದರು. ಅವರು ಉಪಾಧ್ಯಾಯರಾಗಿದ್ದಾಗ ಗಣಿತ ಪುಸ್ತಕವನ್ನು ಬರೆದಿದ್ದರಲ್ಲವೆ? ಅದರಿಂದ ಬಂದ ವರಮಾನವೇ ಅವರಿಗಿದ್ದ ಅಲ್ಪಸ್ವಲ್ಪ ಆಸ್ತಿ. ಸ್ವಲಾಭಕ್ಕಾಗಿ ಅವರು ಎಂದೂ ಇತರರನ್ನು ಯಾಚಿಸಿದವರಲ್ಲ. ಅವರು ತಮ್ಮ ಗೃಹ ಕೃತ್ಯ ವಿಷಯಗಳನ್ನು ಲೋಕಕ್ಕೆ ತೋರ್ಪಡಿಸಿಕೊಳ್ಳುತ್ತಿರಲಿಲ್ಲ. ಅವರು ಪ್ರಸಿದ್ಧಿಗೆ ಬರುವುದಕ್ಕೆ ಮುಂಚೆ ಕಲ್ಕತ್ತೆಯ ಬೀದಿಗಳಲ್ಲಿ ಪಾದಚಾರಿ ಯಾಗಿ, ಕೊಡೆಸಹಿತವಿಲ್ಲದೆ, ದೂರದಲ್ಲಿದ್ದ ಗ್ರಂಥಾಲಯ ಮೊದಲಾದ ಸ್ಥಳ ಗಳಿಗೆ ಹೋಗಿಬರುತ್ತಿದ್ದುದನ್ನು ನೋಡಿದವರು ಈಗಲೂ ಇದ್ದಾರೆ. "ಟ್ರಾಂ ಗಾಡಿಯಲ್ಲಿ ಹೋಗಬಾರದೆ?" ಎಂದು ಒಬ್ಬ ಸ್ನೇಹಿತನು ಕೇಳಲು, ಅವರು ನಕ್ಕು "ನಾನು ಬಡವನೆಂಬುದು ನಿಮಗೆ ತಿಳಿಯದೆ?" ಎಂದರಂತೆ. ಅವರು ವೈಸ್‌ರಾಯರವರ ಶಾಸನ ಸಭೆಗೆ ಹತ್ತಿದಮೇಲೆಯೂ ಸಹ ಬಡವ ರಾಗಿಯೇ ಇದ್ದರು. ಆಗ ಸರಕಾರದಿಂದ ಉಪವೇತನ (ಅಲೋಯನ್ಸ್) ದೊರೆಯದೆ ಇದ್ದಿದ್ದರೆ ಅವರು ಕೆಲಸ ನಡಸುವುದೇ ಅಸಾಧ್ಯವಾಗುತ್ತಿತ್ತು. ಹೀಗಿದ್ದರೂ ಅವರು ಶಕ್ತ್ಯನುಸಾರ ದಾನಶೀಲರಾಗಿದ್ದರು.

ಗೋಖಲೆಯವರು ತಮ್ಮ ಕಷ್ಟ ಕಾರ್ಪಣ್ಯಗಳನ್ನು ಇತರರಿಗೆ ಹೇಳಿಕೊಳ್ಳದೆ, ತಮ್ಮೊಳಗೆ ತಾವೇ ಸದ್ದುಮಾಡದೆ ಅನುಭವಿಸುತ್ತಿದ್ದರು. ಇದಕ್ಕೆ ವಾಚಾ ಅವರು ಒಂದು ನಿದರ್ಶನವನ್ನು ಕೊಟ್ಟಿರುವರು. ಗೋಖಲೆಯವರು ಮೊದಲನೆಯ ಸಾರಿ ಇಂಗ್ಲೆಂಡಿಗೆ ಪ್ರಯಾಣ ಮಾಡುತ್ತಿದ್ದಾಗ, ದಾರಿಯಲ್ಲಿ ಕೆಲೇ ಎಂಬ ಸ್ಥಳದಲ್ಲಿ ಅಕಸ್ಮಾತ್ತಾಗಿ ಅವರಿಗೆ ಎದೆಯಮೇಲೆ ಒಂದು ಬಲವಾದ ಪೆಟ್ಟು ತಗಲಿತು. ಅದರ ನೋವು ಸಹಿಸಲಾರದಷ್ಟಾಗಿದ್ದರೂ ಆ ಸಂಗತಿಯನ್ನು ಅವರು ಯಾರಿಗೂ ಹೇಳಲಿಲ್ಲ. ಎರಡು ಮೂರು ದಿನಗಳಲ್ಲಿ ಲಂಡನ್ ಪಟ್ಟಣವನ್ನು ಸೇರುವ ವೇಳೆಗೆ ಆ ನೋವು ಇನ್ನೂ ಹೆಚ್ಚಾಗಲು, ಆಗ ಅವರು ಅದನ್ನು ಗೋಪ್ಯ ವಾಗಿ ಅಲ್ಲಿದ್ದ ವಾಚಾ ಅವರಿಗೆ ಕಿವಿಯಲ್ಲುಸಿರಿದರು. ಆಮೇಲೆ ವಾಚಾ ಅವರೂ ದಾದಾಭಾಯಿ ನವರೋಜಿಯವರೂ ಇಬ್ಬರೂ ಸೇರಿ ಸಮರ್ಥ

ನಾದ ಒಬ್ಬ ವೈದ್ಯನನ್ನು ಕರೆಯಿಸಿದರು. ಆತನು ಗೋಖಲೆಯವರ ದೇಹವನ್ನು ಪರೀಕ್ಷಿಸಿ, ಅದು ಬಹು ಅಪಾಯಕರವಾದ ಏಟೆಂದು ಹೇಳಿ, ಅದಕ್ಕೆ ತಕ್ಕ ಚಿಕಿತ್ಸೆ ಮಾಡಿದನು. ಆಗ ಗೋಖಲೆಯವರಿಗೆ ಮಾಡ ಬೇಕಾಗಿದ್ದ ಸೇವೆ ಸತ್ಕಾರಗಳನ್ನು ಮಿಸೆಸ್ ಕಾಂಗ್ರೀವ್ ಎಂಬ ಸಾಧ್ವಿಯು ಮಾಡುತ್ತಿದ್ದಳು. ಆಕೆಯಲ್ಲಿ ಗೋಖಲೆಯವರು ತಮ್ಮ ತಾಯಲ್ಲಿ ನಡೆದುಕೊಂಡಂತೆ ನಡೆದುಕೊಳ್ಳುತ್ತಿದ್ದರು. ಇದನ್ನು ಕಂಡ ಮಿತ್ರರು ಅವರಿಗೆ "ಕಾಂಗ್ರೀವ್ ತಾಯಿಯ ಕಂದುಬಣ್ಣದ ಕೂಸು" ಎಂಬ ಹೆಸರನ್ನಿಟ್ಟು ಅವರನ್ನು ಪರಿಹಾಸ ಮಾಡುತ್ತಿದ್ದರಂತೆ.

ಗೋಖಲೆಯವರು ಚಿಂತಿಸುವ ಮತ್ತು ಶ್ರಮಪಡುತ್ತಿರುವ ಸ್ವಭಾವ ದವರಾದರೂ, ಅವರು ನಗುಮುಖವಿಲ್ಲದೆ, ವಿನೋದಸಲ್ಲಾಪಗಳಿಲ್ಲದೆ ಇದ್ದ ವರಲ್ಲ. ಅವರು ಮೊದಲನೆಯ ಸಲ ಇಂಗ್ಲೆಂಡಿನಲ್ಲಿದ್ದಾಗ, ಆಕ್ಸ್‌ಫರ್ಡ್ ಮತ್ತು ಕೇಂಬ್ರಿಡ್ಜ್ ವಿಶ್ವವಿದ್ಯಾಪೀಠಗಳ ವಿದ್ಯಾರ್ಥಿಗಳು ದೋಣಿ ನಡೆ ಯಿಸುವುದರಲ್ಲಿ ಪೋಟಾಪೋಟಿ ಆಡುವುದನ್ನು ನೋಡಬೇಕೆಂದು ಕುತೂ ಹಲಪಟ್ಟರಂತೆ. ಆ ಪೋಟಾಪೋಟಿಯು ವರ್ಷೇ ವರ್ಷೇ ನಡೆಯತಕ್ಕು ದಾಗಿ, ಸಾವಿರಾರು ಮಂದಿ ನೋಟಕರನ್ನಾಕರ್ಷಿಸುವುದಾಗಿ, ಪ್ರಸಿದ್ಧ ವಾಗಿದ್ದರೂ, ಅದುವರೆಗೆ ೪೨ ವರ್ಷಗಳ ಹಿಂದಿನಿಂದ ಲಂಡನ್ನಿನಲ್ಲಿ ವಾಸ ವಾಗಿದ್ದ ದಾದಾಭಾಯಿ ನವರೋಜಿಯವರು ಆ ನೋಟವನ್ನು ಒಂದು ಸಲವೂ ನೋಡಿರಲಿಲ್ಲ. ಇದನ್ನು ಗೋಖಲೆಯವರು ಕೇಳಿ ಆಶ್ಚರ್ಯ ಪಟ್ಟು, ಆ ಮಹನೀಯರು ಮಾಡಿದ್ದ ಸ್ವಸೌಖ್ಯತ್ಯಾಗವನ್ನೂ ಆತ್ಮಸಂಯ ಮವನ್ನೂ ವ್ರತನಿಷ್ಠೆಯನ್ನೂ ಶ್ಲಾಘಿಸಿದರಲ್ಲದೆ, ಅವರ ಬಳಿಗೆ ಹೋಗಿ ತಮಗೋಸ್ಕರವಾದರೂ ಅವರು ಆ ನೋಟವನ್ನು ನೋಡಲು ಬರಬೇಕೆಂದು ಕೇಳಿಕೊಂಡರು. ನವರೋಜಿಯವರು ಅದಕ್ಕೆ ಸಂತೋಷದಿಂದೊಪ್ಪಲು, ಅವರೂ ವಾಚಾ ಅವರೂ ಗೋಖಲೆಯವರೊಡನೆ ಹೋಗಿ ಆ ಬಾಲ ನಾವಿಕ ಸ್ಪರ್ಧೆಯನ್ನು ನೋಡಿ ಬಂದರು. ಅದನ್ನು ನೋಡುವ ಕಾಲದಲ್ಲಿ ಗೋಖಲೆ ಯವರು ತಾವೇ ಆ ಸ್ಪರ್ಧೆಯಲ್ಲಿ ಸೇರಿದ್ದಿದ್ದರೆ ಹೇಗೋ ಹಾಗೆ ಉತ್ಸಾಹ ಸಂಭ್ರಮಗಳನ್ನು ತೋರಿದರಂತೆ.

ಗೋಖಲೆಯವರಿಗೆ ಆಟಗಳಲ್ಲಿ ಆಸಕ್ತಿಯೇನೂ ಕಡಮೆಯಾಗಿರಲಿಲ್ಲ. ಅವರು ಇಸ್ಪೀಟು, ಚತುರಂಗ—ಈ ಆಟಗಳಲ್ಲಿ ಗಟ್ಟಿಗರಾಗಿದ್ದರು. ಒಂದುಸಲ ಅವರೂ ಪರಂಜಪೆಯವರೂ ಒಟ್ಟಿಗೆ ಹದಿನಾಲ್ಕು ಘಂಟೆಗಳ ಕಾಲ ನಿಲುಕಡೆಯಿಲ್ಲದೆ ಇಸ್ಪೀಟು ಆಡುತ್ತಿದ್ದರಂತೆ. ಬಿಲಿಯರ್ಡ್ಸ್ ಎಂಬಾಟವೂ ಗೋಖಲೆಯವರಿಗೆ ಬಹು ಇಷ್ಟವಾಗಿತ್ತು. ಆ ಆಟವು ಮೇಜಿನ ಮೇಲೆ ಗುಂಡುಗಳನ್ನಿಟ್ಟು, ಕೋಲುಮೊನೆಗಳಿಂದ ತಳ್ಳಿ, ಗೋಲಿಯ ಆಟದಂತೆ ಆಡತಕ್ಕದ್ದು. ಅದನ್ನು ಕಲಿಯುವ ಹೊಸತಿನಲ್ಲಿ ಅವರು ಪ್ರತಿದಿನವೂ ಅನೇಕ ಘಂಟೆಗಳನ್ನು ಅದರ ಅಭ್ಯಾಸದಲ್ಲಿ ಕಳೆಯುತ್ತಿದ್ದರಲ್ಲದೆ, ಕೆಲವು ತಿಂಗಳುಗಳ ಕಾಲ ಒಂದು "ಬಿಲಿಯರ್ಡ್ಸ್" ಮೇಜನ್ನು ಬಾಡಿಗೆಗೆ ತೆಗೆದುಕೊಂಡಿದ್ದರಂತೆ. ಸಾಯಂಕಾಲದ ವೇಳೆ ಬೈಲಿನಲ್ಲಿ ಕೂತಾಗ ಅವರು ಆಕಾಶದ ಮೇಲೆ ದೃಷ್ಟಿಯಿಟ್ಟು, ಅಲ್ಲಿ ಯಾವ ಮೂರು ನಕ್ಷತ್ರಗಳು 'ಬಿಲಿಯರ್ಡ್ಸ್' ಗುಂಡುಗಳ ಸ್ಥಾನದಲ್ಲಿವೆ, ಅವನ್ನು ಹೇಗೆ ಹೇಗೆ ಹೊಡೆದರೆ ಅವು ಹೇಗೆ ಹೇಗೆ ನಡೆಯಬಹುದು—ಎಂದು ಮನಸ್ಸಿನಲ್ಲಿ ಗುಣಾಕಾರ ಹಾಕಿಕೊಳ್ಳುತ್ತಿದ್ದರಂತೆ. ಅವರ ಎಡಗೈ ಹೆಬ್ಬೆರಳು ಯಾವುದೋ ಒಂದು ಕಾರಣದಿಂದ ಊನವಾದಮೇಲೆ ಅವರು ಆ ಆಟವನ್ನಾಡಲು ಆಗುತ್ತಿರಲಿಲ್ಲವಾದರೂ, ಇತರರು ಅದನ್ನಾಡುತ್ತಿದ್ದರೆ ಅದನ್ನು ನೋಡುವುದರಿಂದ ಸಂತೋಷಪಡುತ್ತಿದ್ದರು. ಅವರು ಟೆನ್ನಿಸ್ ಎಂಬ ಚಂಡಾಟವನ್ನೂ ಚೆನ್ನಾಗಿ ಆಡಬಲ್ಲವರಾಗಿದ್ದರು.

"ನಮ್ಮವರು ಎಂಥಾ ಭೋಜನ ರಸಿಕರು! ಶ್ರೀಖಂಡವನ್ನು ತಿನ್ನುವ ಸಂಭ್ರಮದಲ್ಲಿ ಮಹಾರಾಷ್ಟ್ರರು (ಪೇಷ್ವೆಗಳು) ತಮ್ಮ ಸಾಮ್ರಾಜ್ಯ ಹೋಗುವುದನ್ನೂ ಲಕ್ಷ್ಯಕ್ಕೆ ತೆಗೆದುಕೊಂಡವರಲ್ಲ"—ಎಂದು ಹೇಳಿ ಅವರು ತಮಾಷೆಮಾಡುತ್ತಿದ್ದರಂತೆ. ಆದರೆ ಪರಿಹಾಸ ವಿನೋದಗಳಲ್ಲಿ ಅವರು ಯಾರನ್ನೂ ನೋಯಿಸುತ್ತಿರಲಿಲ್ಲ, ಮತ್ತು ಮರ್ಯಾದೆ ಮೀರಗೊಡಿಸುತ್ತಿರಲಿಲ್ಲ. ಒಂದಾನೊಂದು ಸಂದರ್ಭದಲ್ಲಿ, ವೈಸ್‌ರಾಯವರ ಶಾಸನ ಸಭೆಯಲ್ಲಿ ಗೋಖಲೆಯವರು ಇದ್ದಾಗ, ಆ ಸಭೆಯ ಒಬ್ಬ ಮಹಮ್ಮದೀಯ ಸದಸ್ಯನು ಭಾಷಣ ಮಾಡುವುದಕ್ಕೆಂದು ನಿಂತು, ತಪ್ಪುತಪ್ಪಾಗಿ

ಇಂಗ್ಲೀಷು ಮಾತನಾಡಿದನಂತೆ. ಅಲ್ಲಿ ಅಧಿಕಾರಪಕ್ಷದ ಸದಸ್ಯರಾಗಿ ಕುಳಿತಿದ್ದ ಯೂರೋಪಿಯನ್ನರೆಲ್ಲರೂ ಅದನ್ನು ನೋಡಿ ನಕ್ಕರಂತೆ. ಆಗ ಪ್ರಜಾಪಕ್ಷದವರಾಗಿ ಅಲ್ಲಿ ಕುಳಿತಿದ್ದ ಭಾರತೀಯರಲ್ಲಿ ಕೆಲವರೂ ಆ ಅಧಿಕಾರಿಗಳೊಡನೆ ಸೇರಿ ನಗಲಾರಂಭಿಸಿದರಂತೆ. ಇದಕ್ಕಾಗಿ ಗೋಖಲೆಯವರು ತುಂಬಾ ಅಸಮಾಧಾನಪಟ್ಟುಕೊಂಡು, ಕೂಡಲೆ ಹೊರಗೆ ಬಂದು, ಒಳಗೆ ನಕ್ಕಿದ್ದ ಸ್ವದೇಶೀಯರನ್ನು ಕರಿಸಿಕೊಂಡು, ಅವರು ಹಾಗೆ ಮಾಡಿದ್ದು ಸರಿಯಲ್ಲವೆಂದೂ, ಆ ಮಹಮ್ಮದೀಯ ಸದಸ್ಯನು ಸ್ವಚ್ಛವಾದ ಇಂಗ್ಲಿಷನ್ನರಿಯದ ಮಾತ್ರದಿಂದಲೇ ಅವನ ಯೋಗ್ಯತೆಯು ಕಡಮೆಯಾಗಲಿಲ್ಲವೆಂದೂ, ಅವನು ಹೇಗಿದ್ದರೂ ಭಾರತೀಯನೇ ಆದಕಾರಣ ಆತನನ್ನು ಅಧಿಕಾರಿಗಳಾದ ವಿದೇಶೀಯರ ಪರಿಹಾಸಕ್ಕೆ ಬಿಟ್ಟುಕೊಡುವುದು ತಮಗೇ ಗೌರವವಲ್ಲವೆಂದೂ ಬುದ್ಧಿವಾದ ಹೇಳಿದರಂತೆ.

ತಮಗೆ ಪ್ರತಿವಾದಿಗಳಾದವರ ವಿಷಯದಲ್ಲಿಯೂ ಗೋಖಲೆಯವರು ಬಹು ಗೌರವದಿಂದ ನಡೆದುಕೊಳ್ಳುತ್ತಿದ್ದರು. ಪ್ರತಿವಾದಿಗಳ ವಿಷಯದಲ್ಲಿ ಯಾರಾದರೂ ಅಗೌರವದ ಮಾತನ್ನು ಉಪಯೋಗಿಸಿದುದನ್ನು ಅವರು ಕೇಳಿದರೆ, ಕೂಡಲೆ ಅದನ್ನು ತಡೆದು,—ಯಾವುದಾದರೊಂದು ರೀತಿಯಲ್ಲಿ ದೇಶಸೇವೆ ಮಾಡುತ್ತಿರುವವರ ಹೆಸರನ್ನೆತ್ತಲು ಯಾವ ಸೇವೆಯನ್ನೂ ಇನ್ನೂ ಮಾಡದೆ ಇರುವವರಿಗೆ ಬಾಯೇ ಇಲ್ಲವೆಂದು ಹೇಳಿ ಬುದ್ಧಿ ಕಲಿಸುತ್ತಿದ್ದರು.

ಯಾವ ಕೆಲಸಕ್ಕೆ ಹೊರಟರೂ ಅವರು ತದೇಕಾಯತ್ತ ಚಿತ್ತರಾಗಿರುತ್ತಿದ್ದರೆಂಬುದಕ್ಕೆ ಅನೇಕ ದೃಷ್ಟಾಂತಗಳನ್ನು ಮೇಲೆ ನೋಡಿದ್ದೇವೆ. ಒಂದುಸಲ ಲ್ಯಾಟಿನ್ ಭಾಷೆಯನ್ನು ಕಲಿಯಬೇಕೆಂಬ ಪ್ರವೃತ್ತಿಯು ಅವರಿಗೆ ಉಂಟಾಯಿತಂತೆ. ತತ್‌ಕ್ಷಣವೇ ಅದಕ್ಕೆ ಬೇಕಾದ ಪುಸ್ತಕಗಳಿಗಾಗಿ ಅವರು ಕಾಗದ ಬರೆದರು. ಆದರೆ ಅದಕ್ಕಿಂತ ಎಷ್ಟೋ ಮುಖ್ಯವಾದ ಇತರ ಕಾರ್ಯಗಳು ಅನೇಕವಾಗಿದ್ದ ಕಾರಣ ಆ ಯೋಚನೆಯನ್ನು ಮೂಲೆಗೊತ್ತಬೇಕಾಯಿತು.

ಆ ಕಾಲದ ಕಾಂಗ್ರೆಸ್ ಮುಖಂಡರ ಪೈಕಿ ಗೋಖಲೆಯವರಂತೆ ಇತರ ಮತಸ್ಥರ ವಿಶ್ವಾಸ ನಂಬಿಕೆಗಳಿಗೆ ಪಾತ್ರರಾಗಿದ್ದವರು ಮತ್ತಾರೂ ಇರಲಿಲ್ಲ. ಈ ದೇಶದ ನಾನಾಮತ ನಾನಾಜಾತಿಗಳವರು ಒಟ್ಟುಗೂಡಿ, ಜನ್ಮಭೂಮಿಯ ದೃಷ್ಟಿಯಿಂದ ಏಕೀಭವಿಸಿದ ಹೊರತು ಜನಪದ ಸಭೆಯ ಉದ್ದೇಶ ಸಾಧನೆಯೂ, ದೇಶವು ಉದ್ಧಾರವಾಗುವ ಆಶೆಯೂ ಇಲ್ಲವೆಂಬು ದನ್ನು ಅವರು ಎಂದೂ ಮರೆತಿರಲಿಲ್ಲ. ಐಕಮತ್ಯ ಸಂಪಾದನೆಗೋಸ್ಕರ ಹಿಂದೂಗಳು ಮಹಮ್ಮದೀಯರಿಗೆ ಕೆಲವು ಹಕ್ಕುಗಳನ್ನು ಬಿಟ್ಟುಕೊಟ್ಟರೂ ಅದು ನಷ್ಟವಲ್ಲ; ಅವರನ್ನು ಜನಪದ ಸಭೆಗೆ ಎಳೆದುಕೊಳ್ಳಲು ಏನುಬೇಕಾ ದರೂ ಕೊಡಬಹುದು—ಎಂದು ಅವರು ಹೇಳುವವರಾಗಿದ್ದರು. ಆದುದ ರಿಂದಲೇ ಗೋಖಲೆಯವರನ್ನು ಮಹಮ್ಮದೀಯರೂ ತಮ್ಮ ಪ್ರತಿನಿಧಿಯೆಂದು ಒಪ್ಪಿಕೊಳ್ಳುತ್ತಿದ್ದರು. ಜನಪದ ಸಭೆಯಲ್ಲಿಯೂ, ರಾಜ್ಯಯಂತ್ರಕ್ಕೆ ಸಂಬಂಧಪಟ್ಟ ಪ್ರಜಾಸಂಸ್ಥೆಗಳಲ್ಲಿಯೂ ಅಧಿಕಾರಸ್ಥಾನಗಳಲ್ಲಿಯೂ ಮಹಮ್ಮದೀಯರು ಎಷ್ಟೆಷ್ಟು ಮಾತ್ರ ಇರಬೇಕು—ಎಂಬುದನ್ನು ನಿಷ್ಕರ್ಷೆ ಮಾಡಿ, ಆ ಮತದವರನ್ನು ಸಮಾಧಾನಗೊಳಿಸಲು ಶ್ರಮಪಟ್ಟವರಲ್ಲಿ ಗೋಖಲೆ ಯವರು ಅತಿ ಮುಖ್ಯರು.

ಗೋಖಲೆಯವರು ತಿಲಕರಂತೆಯೇ ಸ್ವರಾಜ್ಯವಾದಿಯಾಗಿದ್ದರೆಂದು ಹಿಂದೆ ತಿಳಿಸಿದೆ. ಅವರಿಬ್ಬರೂ ಮಹಾರಾಷ್ಟ್ರದವರು; ಒಂದೇ ಜಾತಿ ಯವರು; ಇಬ್ಬರೂ ಪರಸ್ಪರ ಸ್ನೇಹಗೌರವಗಳುಳ್ಳವರು; ಇಬ್ಬರೂ ದೇಶ ಹಿತವನ್ನೇ ಸ್ವಹಿತವೆಂದು ಭಾವಿಸಿದವರು; ಇಬ್ಬರೂ ನೀತಿ ಸೂಕ್ಷ್ಮವನ್ನರಿ ತವರು; ಇಬ್ಬರೂ ಒಂದೇ ರಾಜಕೀಯ ತತ್ತ್ವವನ್ನವಲಂಬಿಸಿದವರು. ಹೀಗೆ ಬಹುವಿಧಗಳಲ್ಲಿ ಅವರು ಸಮಾನ ಧರ್ಮವುಳ್ಳವರಾಗಿದ್ದರೂ, ಕಾರ್ಯ ಸಾಧನೆಗಾಗಿ ಅವರು ಬೇರೆ ಬೇರೆ ದಾರಿಗಳನ್ನು ಅನುಸರಿಸುತ್ತಿದ್ದರೆಂಬುದು ಬಹುಶಃ ಎಲ್ಲರಿಗೂ ತಿಳಿದ ವಿಷಯ. ಆ ದಾರಿಗಳಲ್ಲಿ "ಅದು ತಪ್ಪು, ಇದು ಸರಿ; ಅದು ಮೇಲು, ಇದು ಕೀಳು" ಎಂದು ತಾರತಮ್ಯ ವಿಚಾರಮಾಡು ವುದು ಅಸಂಗತ. ಎರಡು ರಾಜ್ಯಗಳಲ್ಲಿ ಒಂದರಿಂದೊಂದಕ್ಕೆ ಅನ್ಯಾಯ ನಡೆಯದಂತೆ ನೋಡಿಕೊಳ್ಳುವುದಕ್ಕೆ ಶೂರನಾದ ಸೇನಾಪತಿಯು

ಮುಖ್ಯವೋ, ಯುಕ್ತಿವಂತನಾದ ರಾಯಭಾರಿಯು ಮುಖ್ಯವೋ ?— ಎಂದರೆ, ಇಬ್ಬರೂ ಮುಖ್ಯವೆಂದು ಹೇಳಬೇಕಾಗುವುದೇ ವಿನಾ, ಒಬ್ಬರು ಹೆಚ್ಚು ಒಬ್ಬರು ಕಡಮೆಯೆಂದು ಹೇಳಲಾಗುವುದಿಲ್ಲ. ಅದೇ ರೀತಿಯಾಗಿ, ಸ್ವದೇಶದ ಸ್ವಾತಂತ್ರ್ಯವನ್ನು ಅನ್ಯದೇಶದ ಕೈಯಿಂದ ಬಿಡಿಸಿಕೊಂಡು ಸಂಪಾದಿಸಿಕೊಡಬೇಕಾದರೆ, ಆ ಪರಮೋದ್ದೇಶವೊಂದರಲ್ಲಿಯೇ ದೃಷ್ಟಿಯಿಟ್ಟು ಪ್ರತಿವಾದಿ ಭಯಂಕರನಾಗಿ ನಿಲ್ಲುವ ವೀರನೂ, ಆ ಉದ್ದೇಶವನ್ನು ಸ್ವಲ್ಪ ಸ್ವಲ್ಪವಾಗಿ ಸಾಧಿಸಬಲ್ಲ ಉಪಾಯಶಾಲಿಯೂ ಇಬ್ಬರೂ ಆವಶ್ಯಕ. ಗೋಖಲೆಯವರು ಎರಡನೆಯ ಬಗೆಯವರು. ಬಲವದ್ವಿರೋಧವನ್ನು ಬೆಳೆಯಿಸದೆ, ಯುಕ್ತಿಯಿಂದ ನಡೆದು, ಪ್ರಕೃತ ವಿಷಯಕ್ಕೆ ಹೆಚ್ಚು ಗಮನವನ್ನು ಕೊಟ್ಟು, ಸದ್ಯಃ ಸಮಯೋಚಿತವಾದ ತಿದ್ದುಪಾಟುಗಳನ್ನು ಮಾತ್ರ ಕೇಳಿ ಸಾಧಿಸಿ—ಈ ರೀತಿ ಕ್ರಮೇಣ ಮುಂದುವರಿಯುವುದು ಗೋಖಲೆಯವರ ಪದ್ಧತಿ. ಒಬ್ಬ ಪುರಾತನ ಕವಿಯು ಹೇಳಿರುವ ವರ್ಣನೆಯು ಅವರ ವಿಷಯದಲ್ಲಿ ಚೆನ್ನಾಗಿ ಅನ್ವಯಿಸುವುದು :—

ನರಪತಿ ಹಿತಕರ್ತಾ ದ್ವೇಷ್ಯತಾಂ ಯಾತಿ ಲೋಕೇ |
ಜನಪದ ಹಿತಕರ್ತಾ ತ್ಯಜ್ಯತೇ ಪಾರ್ಥಿವೇನ ||
ಇತಿ ಮಹತಿ ವಿರೋಧೇ ವಿದ್ಯಮಾನೇ ಸಮಾನೇ |
ನೃಪತಿ ಜನಪದಾನಾಂ ದುರ್ಲಭಃ ಕಾರ್ಯಕರ್ತಾ ||

(ರಾಜನಿಗೆ ಒಳ್ಳೆಯದನ್ನು ಮಾಡುವವನು ಲೋಕದ ಜನರ ದ್ವೇಷಕ್ಕೆ ಗುರಿಯಾಗುವನು; ಜನರಿಗೆ ಒಳ್ಳೆಯದನ್ನು ಮಾಡುವವನು ರಾಜನಿಂದ ತ್ಯಜಿಸಲ್ಪಡುವನು. ಹೀಗೆ ರಾಜ ಪ್ರಜೆಗಳಿಗೆ ಪರಸ್ಪರ ಮಹತ್ತರವಾದ ವಿರೋಧವಿರುವಲ್ಲಿ, ಅವರಿಬ್ಬರಿಗೂ ಹಿತಕರನಾದ ಕಾರ್ಯಶಾಲಿಯು ದೊರೆಯುವುದು ಕಷ್ಟ.)

ಗೋಖಲೆಯವರು ಅಂತಹ ಕಾರ್ಯಶಾಲಿಯಾಗಿದ್ದರು.

೧೯೦೪ರಲ್ಲಿಯೇ ಗೋಖಲೆಯವರಿಗೆ ಸಿ.ಐ.ಇ. ಎಂಬ ಬಿರುದು ಬಂದಿತು. ೧೯೦೭ರಲ್ಲಿ ಲಾರ್ಡ್ ಮಾರ್ಲೇ ಅವರು ಗೋಖಲೆಯವರನ್ನು ತಮ್ಮ ಮಂತ್ರಾಲೋಚಕ ಮಂಡಲಿಗೆ ಸೇರಿಸಿಕೊಳ್ಳಲು ಇಚ್ಛಿಸಿದರು. ಗೋಖಲೆಯವರು ಅದಕ್ಕೊಪ್ಪಿದ್ದಿದ್ದರೆ, ಆ ಪದವಿಗೆ ಹತ್ತಿದ ಭಾರತೀಯರಲ್ಲಿ ಅವರೇ ಮೊದಲನೆಯವರಾಗುತ್ತಿದ್ದರು. ಆದರೆ, ಯಾವಾಗಲೂ ಪ್ರಜಾ

ವರ್ಗೀಯರಾಗಿದ್ದುಕೊಂಡು, ಸ್ವತಂತ್ರವಾಗಿ ದೇಶಸೇವೆ ಮಾಡಬೇಕೆನ್ನು ವುದೇ ಗೋಖಲೆಯವರ ಮುಖ್ಯಾಶಯವಾಗಿದ್ದ ಕಾರಣ, ಅವರು ಆ ಪದವಿಯನ್ನು ಬೇಡವೆನ್ನಬೇಕಾಯಿತು. ೧೯೧೧ರಲ್ಲಿ ಲಾರ್ಡ್ ಹಾರ್ಡಿಂಜರವರೂ ಲಾರ್ಡ್ ಕ್ರೂ ಅವರೂ ಚಕ್ರವರ್ತಿಗಳವರಿಂದ ಕೆ.ಸಿ.ಐ.ಇ. ಬಿರುದನ್ನು ಗೋಖಲೆಯವರಿಗೆ ಕೊಡಿಸಲು ಏರ್ಪಾಡು ಮಾಡಿದ್ದರು. ಆದರೆ ಯಾವ ಬಿರುದೂ ಇಲ್ಲದೆ ಸಾಮಾನ್ಯ ಪ್ರಜೆಯಂತೆ ಇರುವುದೇ ತಮಗೆ ಇಷ್ಟವೆಂದು ಗೋಖಲೆಯವರು ಕೃತಜ್ಞತಾಪೂರ್ವಕವಾಗಿ ವಿಜ್ಞಾಪಿಸಿ, ಆ ಪ್ರಶಸ್ತಿಯನ್ನು ಬೇಡವೆಂದರು.

ಒಂದು ದೈವಿಕವಾದ ತೇಜೋ ವಿಶೇಷವು ಯಾವಾಗಲೂ ತಮ್ಮನ್ನು ಎಡೆಬಿಡದೆ ಆವರಿಸಿಕೊಂಡಿರುತ್ತಿತ್ತೆಂದು ಗೋಖಲೆಯವರು ನಂಬಿದ್ದರಂತೆ. ತಮ್ಮ ವೃತ್ತಿ ಪ್ರವೃತ್ತಿಗಳಿಗೂ ಸಂಕಲ್ಪ ಸಮಾರಂಭಗಳಿಗೂ ಪ್ರೇರಕವೂ ಮಾರ್ಗದರ್ಶಕವೂ ಆದುದು ಆ ತೇಜಸ್ಸೇ ಎಂಬುದು ಅವರ ಭಾವನೆಯಾಗಿದ್ದಿತು. ಇದನ್ನು ನೋಡಿದರೆ ಈ ಕೆಳಗಿನ ಶ್ರೀಕೃಷ್ಣ ವಾಕ್ಯವು ಮನಸ್ಸಿಗೆ ಬರುತ್ತದೆ :—

ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ |
ತತ್ತದೇವಾವಗಚ್ಛ ತ್ವಂ ಮಮತೇಜೋಂಶ ಸಂಭವಂ ||

—ಭಗವದ್ಗೀತೆ, ೧೦-೪೧.

(ಯಾವ ಯಾವ ವಸ್ತುವು ಮಹಿಮೆಯುಳ್ಳುದಾಗಿ, ಕಾಂತಿಯುಳ್ಳುದಾಗಿ ಅಥವಾ ಬಲವುಳ್ಳುದಾಗಿ ಇರುವುದೋ ಅದೆಲ್ಲವೂ ನನ್ನ ತೇಜಸ್ಸಿನ ಅಂಶದಿಂದ ಹುಟ್ಟಿದುದೆಂದು ತಿಳಿ.)

ಗೋಖಲೆಯವರ ಜೀವಿತದ ಆಶಯಗಳಲ್ಲಿಯೂ ಕಾರ್ಯಗಳಲ್ಲಿಯೂ ಅಸಾಧಾರಣವಾದ ಮಹಿಮೆ ಕಾಂತಿ ಬಲಗಳು ಕಾಣಬರುತ್ತವೆಯೆಂಬುದನ್ನು ಎಲ್ಲರೂ ಒಪ್ಪಿರುವರು.

ಗೋಖಲೆಯವರ ಮರಣದಿಂದ ಸಂಭವಿಸಿದ ನಷ್ಟವನ್ನೂ ದುಃಖವನ್ನೂ ಈ ದೇಶವು ಇದುವರೆಗೆ ಮರೆತಿಲ್ಲ; ಎದುವರೆಗೂ ನಮ್ಮಲ್ಲಿ ಕೃತಜ್ಞತಾ ಗುಣವು ಲುಪ್ತವಾಗದೆ ಇರುವುದೋ ಅದುವರೆಗೂ ಅದು ಮರೆಯಲಾರದು. ಸ್ವದೇಶೀಯವರ ಶೋಕವಂತಿರಲಿ; ಸುಗುಣ ಸಂಪನ್ನರಾದ ವಿದೇಶೀಯರೂ ಆ ಶೋಕದಲ್ಲಿ ಭಾಗಿಗಳಾಗಿರುವರು. ಸಮಯಕ್ಕೆ

ತಕ್ಕ ಹಿತವಾಕ್ಯಗಳನ್ನು ಹೇಳುತ್ತಿದ್ದ ಆಪ್ತಮಿತ್ರನು ಮೃತಯೊಂದಿದನೆಂದು ವೈಸ್‌ರಾಯ್ ಲಾರ್ಡ್ ಹಾರ್ಡಿಂಜರು ತಮ್ಮ 'ಸಾಮ್ರಾಜ್ಯ ಸಭೆಯಲ್ಲಿ' ಶೋಕಿಸಿದರು. ಶ್ರೀ ಚಕ್ರವರ್ತಿಗಳವರು ಸಹ ತಮ್ಮ ಮನಃಪೂರ್ವಕವಾದ ಪರಿತಾಪವನ್ನು ಲೋಕಕ್ಕೆ ವ್ಯಕ್ತಗೊಳಿಸಿದರು. ದಕ್ಷಿಣ ಆಫ್ರಿಕದಲ್ಲಿಯು ಯಾವ ಬಿಳಿಯ ಜನರನ್ನು ಗೋಖಲೆಯವರು ಪ್ರತಿಭಟಿಸಿದ್ದರೋ ಅವರ ಮುಖ್ಯಾಧಿಕಾರಿಗಳೂ, ಬ್ರಿಟಿಷ್ ಚಕ್ರಾಧಿಪತ್ಯದ ಇತರ ಎಲ್ಲಾ ಭಾಗಗಳ ಪ್ರಮುಖ ಜನರೂ, ವಾರ್ತಾಪತ್ರಿಕೆಗಳವರೂ ಗೋಖಲೆಯವರ ಅಕಾಲ ಮರಣದ ವಿಷಯದಲ್ಲಿ ಅತಿಶಯವಾದ ವ್ಯಸನವನ್ನು ತೋರ್ಪಡಿಸಿದರು. ಇಂಡಿಯಾ ದೇಶದ ಮುಖ್ಯ ಮುಖ್ಯ ಸ್ಥಳಗಳಲ್ಲೆಲ್ಲಾ ಮಹಾಜನರ ಸಭೆಗಳು ನಡೆದು, ದೇಶದ ನಷ್ಟವು ಎಷ್ಟು ದೊಡ್ಡದು, ದುಃಖವು ಎಷ್ಟು ಆಳವಾದುದು ಎಂಬುದನ್ನು ಪ್ರತ್ಯಕ್ಷಗೊಳಿಸಿದುವು. ಅವರೊಡನೆ ಕೆಲಸಮಾಡಿ ಅವರ ಮಹಿಮೆಯನ್ನರಿತಿದ್ದವರು ಅವರ ಗುಣಾತಿಶಯಗಳನ್ನು ಕೀರ್ತಿಸಿದರು. ಗೋಖಲೆಯವರ ಪವಿತ್ರನಾಮವನ್ನು ಜನರ ಸ್ಮರಣೆಗೆ ತರುವುದಕ್ಕೋಸ್ಕರ ಅವರ ಹೆಸರಿನಲ್ಲಿ ಸಭಾಭವನಗಳೂ, ವಿದ್ಯಾಶಾಲೆಗಳೂ, ಅವರ ಪ್ರತಿಮೆ ಭಾವಚಿತ್ರಗಳೂ ನಮ್ಮ ದೊಡ್ಡ ದೊಡ್ಡ ಊರುಗಳಲ್ಲೆಲ್ಲಾ ಸ್ಥಾಪಿತ ವಾಗಿವೆ; ಇನ್ನೂ ಆಗುತ್ತಿವೆ.

ಗೋಪಾಲ ಕೃಷ್ಣ ಗೋಖಲೆಯವರು ಈ ಲೋಕವನ್ನು ಬಿಟ್ಟು ಇಂದಿಗೆ (೧೯೩೩) ಹದಿನೆಂಟು ವರ್ಷಗಳಾದುವು. ಆದರೂ ಅದರಿಂದ ದೇಶಕ್ಕುಂಟಾದ ನಷ್ಟವು ಎಷ್ಟು ದೊಡ್ಡದೆಂದು ಅಂದು ನಮಗೆ ತೋರಿತ್ತೋ ಇಂದೂ ಹಾಗೆಯೇ ತೋರುತ್ತಿದೆ. ಬಗೆ ಬಗೆಯ ಸಲಹೆಗಳಿಂದಲೂ ಬಗೆ ಬಗೆಯ ಉಪದೇಶಗಳಿಂದಲೂ ನಮ್ಮ ಮನಸ್ಸು ಡೋಲಾಯಮಾನವಾಗಿ ರುವ ಈ ಕಾಲದಲ್ಲಿ, "ಆ ಮಹನೀಯರು ಬದುಕಿದ್ದಿರಬಾರದಾಗಿತ್ತೆ!"— ಎನ್ನಿಸುತ್ತದೆ. ಇದಕ್ಕೆ ಕಾರಣವೇನೆಂದರೆ, ಗೋಖಲೆಯವರಲ್ಲಿ ಅನೇಕ ವಿಧದ ದೊಡ್ಡ ಗುಣಗಳು ಅಸಾಧಾರಣವಾದ ರೀತಿಯಲ್ಲಿ ಸಮಗೂಡಿದ್ದುದು.

ಅವರಷ್ಟು ಜಾಣರಾದವರು ನಮ್ಮ ದೇಶದಲ್ಲಿ ಹುಟ್ಟಿಲ್ಲವೆಂದು ಯಾರೂ ಹೇಳುವುದಿಲ್ಲ. ಅವರಿಗಿಂತ ವಿದ್ಯಾವಂತರಾದವರು ನಮ್ಮಲ್ಲಿಲ್ಲ

ವೆಂದು ಯಾರೂ ವಾದಿಸತಕ್ಕವರಲ್ಲ. ಅವರ ದೇಶಾಭಿಮಾನವು ಇತರರಿಗಿಲ್ಲ ವೆಂದೂ ತಿಳಿಯಲಾಗುವುದಿಲ್ಲ. ಸಾಹಸದಲ್ಲಿಯೂ ಉತ್ಸಾಹದಲ್ಲಿಯೂ ಅವರನ್ನು ಮೀರಿಸಿದವರು ನಮ್ಮಲ್ಲಿಲ್ಲದೆ ಇಲ್ಲ. ಸ್ವಾರ್ಥತ್ಯಾಗದಲ್ಲಿಯೂ ಅವರಿಗೆ ಸಮನಾದವರನ್ನು ನಾವು ಕಾಣದೆ ಇಲ್ಲ. ವಾಗ್ಮಿತೆ, ಚತುರತೆ, ಸಾಮರ್ಥ್ಯ, ಲೋಕಾನುಭವ, ವೈರಾಗ್ಯ—ಇವೆಲ್ಲವುಗಳಲ್ಲಿಯೂ ಅವರಷ್ಟು ಪ್ರಸಿದ್ಧರಾದವರೂ, ಅವರಿಗಿಂತ ಪ್ರಸಿದ್ಧರಾಗತಕ್ಕವರೂ ಎಷ್ಟೋ ಮಂದಿ ಇರಬಹುದು. ಆದರೂ ಮೇಲುನೋಟಕ್ಕೆ ವಿರುದ್ಧಗಳೆಂದು ಕಾಣುವ ಅನೇಕ ಗುಣಾಂಶಗಳು ಅವರಲ್ಲಿ ಏಕತ್ರ ಒಟ್ಟುಗೂಡಿದ್ದಂತೆ ಒಟ್ಟುಗೂಡಿರುವುದು ಮತ್ತೆಲ್ಲಿಯೂ ಈಗ ಕಾಣಬರುತ್ತಿಲ್ಲ.

ಒಂದು ಮಹಾಕಾರ್ಯವನ್ನು ಸಾಧಿಸಬೇಕಾದರೆ ಪ್ರಾಯಶಃ ಪರಸ್ಪರ ಮಿಳಿತವಾಗದ ಗುಣಗಳು ಸಾಧಕನಲ್ಲಿ ಸೇರಿರಬೇಕಾಗುತ್ತವೆ. ಅವನಲ್ಲಿ ಉತ್ಸಾಹವಿರಬೇಕು, ತಾಳ್ಮೆಯೂ ಇರಬೇಕು ; ಇವೆರಡೂ ಸಾಮಾನ್ಯವಾಗಿ ಕಲೆತಿರುವ ಗುಣಗಳಲ್ಲ. ಧೈರ್ಯವಿರಬೇಕು, ಚಮತ್ಕಾರವೂ ಇರಬೇಕು ; ಸಾಮಾನ್ಯವಾಗಿ ಇವೆರಡೂ ಒಟ್ಟಿಗೆ ಇರುವುದಿಲ್ಲ. ತೀವ್ರ ನಿಶ್ಚಯವಿರಬೇಕು, ದೂರಾಲೋಚನೆಯೂ ಇರಬೇಕು ; ಇವೆರಡೂ ಬೆರೆತಿರುವ ಗುಣಗಳಲ್ಲ. ಹೆಚ್ಚಾಗಿ ಸಂಪಾದಿಸಬೇಕೆಂಬ ಆಶೆಯಿರಬೇಕು, ಅದರ ಜೊತೆಗೆ ಸಾಧ್ಯಸಾಧ್ಯ ವಿವೇಚನೆಯೂ ಇರಬೇಕು ; ಇವೂ ಒಟ್ಟುಗೂಡತಕ್ಕ ಗುಣಗಳಲ್ಲ. ಹೀಗೆ ಕಾರ್ಯಕಾರಿಗಳಾದ ನಾನಾ ಗುಣಗಳು ಅನ್ಯೋನ್ಯ ಬಾಧಕಗಳಾಗಿ ಕಾಣುತ್ತವೆ. ಇಂತಹ ವಿವಿಧ ಗುಣ ಅಥವಾ ಶಕ್ತಿಗಳನ್ನೆಲ್ಲ ವೃದ್ಧಿಪಡಿಸಿಕೊಂಡು, ಅವುಗಳನ್ನು ಹದ್ದಿನಲ್ಲಿಯೂ ಇಟ್ಟುಕೊಂಡು, ಅವುಗಳಲ್ಲೊಂದರಿಂದ ಒಂದಕ್ಕೆ ಹಾನಿ ಬಾರದೆ ಸಹಾಯ ದೊರೆಯುವ ರೀತಿಯಲ್ಲಿ ಅವುಗಳನ್ನು ಜೋಡಿಸಿ ಉಪಯೋಗಿಸುವುದು ಎಲ್ಲಕ್ಕಿಂತ ದೊಡ್ಡದಾದ ಗುಣ ಅಥವಾ ಶಕ್ತಿ. ಈ ಶಕ್ತಿಯನ್ನು ಗೋಖಲೆಯವರು ಅನ್ಯಾದೃಶವಾದಷ್ಟು ಪಡೆದುಕೊಂಡಿದ್ದರು.

ಹಾಗಿದ್ದುದರಿಂದಲೇ ಅವರನ್ನು "ತಮ್ಮ ಮೂಗಿಗೆ ನೇರವಾಗಿ ಮಾತನಾಡಿಕೊಳ್ಳತಕ್ಕವರು" ಎಂದು ಕರೆಯಲು ಯಾರಿಗೂ ಕಾರಣ

ದೊರೆತಿರಲಿಲ್ಲ. ಕಕ್ಷಿಗಳೂ ಹಠಗಳೂ ಪ್ರಬಲವಾಗಿರುವ ಈ ದಿನಗಳಲ್ಲಿ ನಾವು ವಿಶೇಷವಾಗಿ ಜ್ಞಾಪಕದಲ್ಲಿಟ್ಟುಕೊಳ್ಳಬೇಕಾದ ತತ್ತ್ವವೊಂದು ಅವರ ನಡತೆಯಲ್ಲಿ ಚೆನ್ನಾಗಿ ತೋರಬರುತ್ತಿತ್ತು. ಮಾನುಷ ವ್ಯಾಪಾರ ಗಳಲ್ಲಿ ಸಂಪೂರ್ಣವಾಗಿ ಸರಿಯಾದುದೂ, ಏನೇನೂ ಸರಿಯಲ್ಲದುದೂ ಯಾವುದೂ ಇರುವುದಿಲ್ಲ. ನಮ್ಮ ಎಲ್ಲ ವ್ಯಾಜ್ಯ ವ್ಯವಹಾರಗಳಲ್ಲಿಯೂ ಗುಣದೋಷಗಳೆರಡೂ ಸಂಮಿಶ್ರಿತಗಳಾಗಿರುತ್ತವೆ. ಯಾವ ವಿವಾದ ದಲ್ಲಿಯೂ ನ್ಯಾಯವೆಂಬುದು ಸಂಪೂರ್ಣವಾಗಿ ಒಂದೇಕಡೆ ಇರುವುದಿಲ್ಲ; ಒಂದುಕಡೆ ಅದು ಸ್ವಲ್ಪ ಹೆಚ್ಚಾಗಿರಬಹುದು, ಮತ್ತೊಂದುಕಡೆ ಕಡಮೆ ಯಾಗಿರಬಹುದು; ಅಷ್ಟೇ. ಹಾಗೆಯೇ ಕಾರ್ಯಸಾಧನೆಯ ರೀತಿ ಗಳನ್ನು ವಿಚಾರಮಾಡುವಾಗಲೂ ಸಂಪೂರ್ಣವಾಗಿ ಅನುಕೂಲವಾದ ದಾರಿಯು ಒಂದೂ ಸಂಪೂರ್ಣವಾಗಿ ಪ್ರತಿಕೂಲವಾದ ದಾರಿಯು ಮತ್ತೊಂದೂ ಕಾಣಬರುವುದಿಲ್ಲ. ಒಂದು ದಾರಿಯಲ್ಲಿ ಅನುಕೂಲ್ಯಗಳು ಮತ್ತೊಂದರಲ್ಲಿರುವುದಕ್ಕಿಂತ ಸ್ವಲ್ಪ ಹೆಚ್ಚಾಗಿರಬಹುದು; ಅಷ್ಟೇ. ಹೀಗಿರು ವುದರಿಂದ, ಮನುಷ್ಯ ಪ್ರಯತ್ನಗಳನ್ನು ಕುರಿತು ಮಾತನಾಡುವಾಗ ಒಂದು ಪಕ್ಷವೆಲ್ಲ ಸರಿ, ಮತ್ತೊಂದು ಪಕ್ಷವೆಲ್ಲ ತಪ್ಪು ಎಂದು ಹಿಡಿ ವಾದ ಮಾಡಲಾಗುವುದಿಲ್ಲ. ಪಕ್ಷ ಪ್ರತಿಪಕ್ಷಗಳವರು ಒಬ್ಬರಿಂದೊಬ್ಬರು ಗ್ರಹಿಸಬೇಕಾದ ಅಂಶಗಳು ಯಾವಾಗಲೂ ಇದ್ದೇ ಇರುವುವು. ನಾವು ಹೇಳುವುದನ್ನು ನಮ್ಮ ಪ್ರತಿವಾದಿಗಳು ಅಂಗೀಕರಿಸಬೇಕೆಂದು ನಾವು ಹೇಗೆ ಆಶೆಪಡುವೆವೋ, ಹಾಗೆಯೇ ನಮ್ಮ ಪ್ರತಿವಾದಿಗಳು ಹೇಳುವುದರಲ್ಲಿ ನಮ್ಮ ಪರ್ಯಾಲೋಚನೆಗೆ ಬರಬೇಕಾದ ಭಾಗಗಳೂ ಒಂದೆರಡಾದರೂ ಇದ್ದಾ ವೆಂಬುದನ್ನು ನಾವು ಮರೆಯಬಾರದು. ಹೀಗೆ, ನಮ್ಮ ಚರ್ಚೆಗಳ ವಿಷಯ ಗಳನ್ನು ಅನೇಕ ಮುಖಗಳಿಂದ ನೋಡಿ, ಪಕ್ಷ ವಿಪಕ್ಷಗಳ ದೃಷ್ಟಿಯಿಂದ ವಿಮರ್ಶೆಮಾಡುವುದು ಪ್ರಾಮಾಣಿಕ ಪದ್ಧತಿ. ಸತ್ಯವನ್ನು ವಿಶದವಾಗಿ ತಿಳಿಯಬೇಕಾದರೆ ಆ ಶೋಧನಪದ್ಧತಿಯನ್ನನುಸರಿಸಬೇಕು. ಗೋಖಲೆಯ ವರು ಹಾಗೆ ನಡೆಯುತ್ತಿದ್ದರು. ಆದುದರಿಂದಲೇ ಅವರು ಯಾವ ವಿಷಯ

ದಲ್ಲಿಯೂ ತೀಕ್ಷ್ಣತ್ವವನ್ನು ಹಿಡಿಯುತ್ತಿರಲಿಲ್ಲ. ಕೂಡಿದ ಮಟ್ಟಿಗೂ ಸರ್ವ ಸಮ್ಮತವಾದ ಮಾರ್ಗದಲ್ಲಿ ಹೋಗಬೇಕೆಂಬುದು ಅವರ ತಾತ್ಪರ್ಯ. ಸಾರ್ವಜನಿಕ ಕಾರ್ಯಗಳಿಗೆ ಕೈಹಾಕುವವರು ರಾಗ ದ್ವೇಷಗಳಿಗೆ ಎಡೆ ಕೊಡಬಾರದೆಂಬ ನೀತಿಯು ಸರ್ವದಾ ಅವರ ನೆನಪಿನಲ್ಲಿದ್ದುದರಿಂದ, ಅವರು ಸ್ವಪಕ್ಷದ ಲೋಪಗಳನ್ನು ಮರೆಮಾಚುತ್ತಿರಲಿಲ್ಲ; ಪರಪಕ್ಷದ ಯೋಗ್ಯತೆಯನ್ನು ಅಲ್ಲಗಳೆಯುತ್ತಿರಲಿಲ್ಲ; ತಮ್ಮ ವಾಕ್ಯವೇ ವೇದವಾಕ್ಯವೆಂದು ಭಾವಿಸುತ್ತಿರಲಿಲ್ಲ; ಅನ್ಯರ ಮಾತಿನಲ್ಲಿರಬಹುದಾದ ಯುಕ್ತಿಯನ್ನು ಅಲಕ್ಷ್ಯ ಮಾಡುತ್ತಿರಲಿಲ್ಲ. ಇದರಿಂದ ಅವರಿಗೆ ಮುಸ್ಕರ ಮಾರ್ಗದವರ ವಿಶ್ವಾಸವು ದುರ್ಲಭವಾಯಿತು. ಅವರು ಹಠವಾದಿಗಳಲ್ಲ, ಕಾರ್ಯಸಾಧಕರು. ದೇಶ ಕಾರ್ಯ ಸಾಧನೆಯಲ್ಲಿ ವೈಯಕ್ತಿಕವಾದ (ಎಂದರೆ ಸಮಸಮಗೆ ಸ್ವಂತವಾದ) ಹಠಗಳಿಗೆ ಸ್ಥಳವಿರಬಾರದೆಂದು ಗೋಖಲೆಯವರು ಚೆನ್ನಾಗಿ ತೋರಿಸಿರುವರು.

ಅವರು ಯಾವ ಕಾರ್ಯಕ್ಕೆ ತೊಡಗಿದರೂ ಅದರಲ್ಲಿ ಜವಾಬ್ದಾರಿಯ ಬುದ್ಧಿಯಿಂದ ಪ್ರವರ್ತಿಸುತ್ತಿದ್ದರೆಂಬುದಕ್ಕೆ ಅನೇಕ ನಿದರ್ಶನಗಳನ್ನು ಹಿಂದೆ ನೋಡಿರುವೆವು. ಇತರರಿಗೆ ಸಲಹೆ ಸೂಚನೆಗಳನ್ನು ಕೊಡುವುದರಲ್ಲಿ, ಅವರು ತಾವೇ ಆ ಇತರರ ಸ್ಥಾನದಲ್ಲಿದ್ದಿದ್ದರೆ ಹೇಗೆ ನಡೆಯಲಾಗುತ್ತಿತ್ತೋ ಅದನ್ನು ಪರ್ಯಾಲೋಚಿಸಿ ಆಮೇಲೆ ಮಾತನಾಡುತ್ತಿದ್ದರೇ ಹೊರತು, ಕಾಲ ದೇಶ ವರ್ತಮಾನಗಳನ್ನು ಮರೆತು, ಪೂರ್ವಾಪರಗಳನ್ನು ವಿಚಾರಿಸದೆ, ಸಾಧಕ ಬಾಧಕಗಳನ್ನು ಗಣಿಸದೆ ಮಾತನಾಡುತ್ತಿರಲಿಲ್ಲ. ಲಾರ್ಡ್ ವಿಲ್ಲಿಂಗ್‌ಡನ್‌ರವರಿಗಾಗಿ ರಾಜ್ಯವ್ಯವಸ್ಥಾ ಸಂಸ್ಕಾರಗಳನ್ನು ಕುರಿತು ನಿರೂಪ ಬರೆಯಿಸುವ ಕಾಲದಲ್ಲಿ, ಅವರು ತಾವೇ ಆ ಸಂಸ್ಕಾರಗಳ ವಿಷಯದಲ್ಲಿ ಪಾರ್ಲಿಮೆಂಟಿಗೆ ಉತ್ತರ ಹೇಳಬೇಕಾಗಿದ್ದ ಮಂತ್ರಿಯಾಗಿದ್ದಿದ್ದರೆ ಯಾವ ರೀತಿ ನಡೆಯಬಹುದಾಗಿತ್ತೋ ಅದನ್ನು ಯೋಚಿಸಿ ನೋಡಿ ಕೊಂಡೇ ಆ ಸಂದೇಶವನ್ನು ಬರೆಯಿಸಿದರೆಂದು ಹಿಂದೆ ಓದಿರುವೆವು. ಈ ಉತ್ತರ ಭಾರವಾಹಿಯಾದ ಬುದ್ಧಿಯು ಅವರ ಎಲ್ಲಾ ವಾದಗಳಲ್ಲಿಯೂ ಆಕ್ಷೇಪಣೆಗಳಲ್ಲಿಯೂ ಕಂಡುಬರುತ್ತಿದ್ದುದರಿಂದಲೇ ಅವರ ಪ್ರತಿವಾದಿಗಳೂ ಅವರ ಮಾತಿಗೆ ಗೌರವ ತೋರಬೇಕಾಗುತ್ತಿತ್ತು. "ನಾನೇ ರಾಜ್ಯ

ಕೋಶಾಧ್ಯಕ್ಷನಾಗಿದ್ದಿದ್ದರೆ"—ಎಂಬ ಹೆಸರಿನ ಉಪನ್ಯಾಸವೊಂದನ್ನು ಅವರು ಒಂದು ಸಂದರ್ಭದಲ್ಲಿ ತಮ್ಮ ದೇಶಸೇವಕ ಸಂಘದಲ್ಲಿ ಕೊಟ್ಟು, ಸರಕಾರದ ಆಯವ್ಯಯ ಕ್ರಮದ ನ್ಯೂನಾಧಿಕ್ಯಗಳನ್ನು ವಿಮರ್ಶೆಮಾಡಿ, ಆಗಿಗೆ ಸಾಧ್ಯವೂ ಅಪೇಕ್ಷಣೀಯವೂ ಆಗಿದ್ದ ಮಾರ್ಪಾಟುಗಳನ್ನು ವಿವರಿಸಿದ್ದರು.

ಗೋಖಲೆಯವರ ಇನ್ನೊಂದು ದೊಡ್ಡ ಗುಣವಾವುದೆಂದರೆ, ಅವರು ಜ್ಞಾನಾರ್ಜನೆಗೂ ವಿಷಯ ವಿಮರ್ಶೆಗೂ ಪಡುತ್ತಿದ್ದ ಶ್ರಮೆ. ಅವರು ನಿಜವಾಗಿ ಯಾವಜ್ಜೀವವೂ ವಿದ್ಯಾರ್ಥಿಯಂತಿದ್ದರು. ಎಲ್ಲ ಕಲೆ ಎಲ್ಲ ಕಸಬುಗಳವರಿಗೂ ಶಿಕ್ಷಣೆಯು ಆವಶ್ಯಕವಾಗಿರುವಾಗ, ರಾಜ್ಯ ಸಂಸ್ಕಾರಕರಿಗೆ ಮಾತ್ರ ಶಿಕ್ಷಣೆ ಹೇಗೆ ಬೇಡ ? ಒಂದು ಸಣ್ಣ ಸಂಸಾರವನ್ನು ಚೆನ್ನಾಗಿ ನಡೆಯಿಸಬೇಕಾದರೆ ಎಷ್ಟೋ ಬುದ್ಧಿವಂತಿಕೆಯೂ ಪ್ರಪಂಚ ಜ್ಞಾನವೂ ಬೇಕಾಗಿರುವಲ್ಲಿ, ಕೋಟ್ಯನುಕೋಟಿ ಸಂಸಾರಗಳ ಯೋಗ ಕ್ಷೇಮಗಳ ವಿಷಯಗಳನ್ನು ನಿರ್ಧರಿಸುವುದಕ್ಕೆ ಹೆಚ್ಚಾದ ತಿಳಿವಳಿಕೆಯೂ ಆಲೋಚನೆಯೂ ಬೇಡವೆ? ಗೋಖಲೆಯವರು ರಾಜಕೀಯ ವಿಚಾರಗಳಿಗೆ ಕೈಹಾಕುವುದಕ್ಕೆ ಮುಂಚೆ ಬಹುಕಾಲ—ಒಂದೆರಡು ವರ್ಷಗಳಲ್ಲ, ಹನ್ನೆರಡು ವರ್ಷ !—ತಾವು ಫರ್ಗ್ಯುಸನ್ ಕಲಾಶಾಲೆಯಲ್ಲಿ ಬೋಧಕರಾಗಿದ್ದುಕೊಂಡು, ಮಹಾದೇವ ಗೋವಿಂದ ರಾನಡೆಯವರಲ್ಲಿ ಶಿಷ್ಯತ್ವವನ್ನು ವಹಿಸಿದ್ದರು. ಅಷ್ಟು ದೀರ್ಘಕಾಲ ಆ ಗುರುಗಳಿಗೆ ಅವರು ವಿಧೇಯರಾಗಿ ವರ್ತಿಸಿ, ದೇಶದ ಸ್ಥಿತಿಗತಿಗಳಿಗೆ ಸಂಬಂಧಪಟ್ಟ ವಿವರವನ್ನೆಲ್ಲ ಕರತಲಾಮಲಕದಂತೆ ಕಂಡುಕೊಂಡರು. ಹೀಗೆ ಅವರು ವಿಷಯಗಳನ್ನು ಆಮೂಲಾಗ್ರವಾಗಿ ಪರಿಶೋಧಿಸಿದ್ದುದರಿಂದಲೇ ಅವರು ಆಡಿದ ಮಾತು ಪ್ರಮಾಣವಚನವೆಂದು ಸಕಲರ ಮೆಚ್ಚಿಕೆಗೂ, ಗೌರವಕ್ಕೂ—ಅವರ ವಿರೋಧಿಗಳಲ್ಲಿ ಸಹ—ಪಾತ್ರವಾಗುತ್ತಿತ್ತು. ಈಗ ಎಲ್ಲರೂ ರಾಜ್ಯತಂತ್ರ ವಿಶಾರದರಾಗುತ್ತಿದ್ದಾರೆ. ಎರಡು ಮಾತುಗಳನ್ನು ಜೋಡಿಸಬಲ್ಲೆವೆಂದು ತಿಳಿದುಕೊಂಡಿರುವವರೆಲ್ಲರೂ ರಾಜಕೀಯ ಪ್ರಸಂಗಗಳಿಗೆ ತಲೆಹಾಕಿ, ಆಕ್ಷೇಪಣೆ ತೀರ್ಮಾನಗಳನ್ನು ಮಾಡುವುದಕ್ಕೆ ತಾವೇ ಅಧಿಕಾರಿಗಳೆಂಬಂತೆ ನಡೆದುಕೊಳ್ಳುತ್ತಾರೆ. ಲಕ್ಷೋಪಲಕ್ಷ ಜನರ, ಅವರ ಮಕ್ಕಳು ಮೊಮ್ಮಕ್ಕಳ, ಕ್ಷೇಮಲಾಭ

ವಿಚಾರಗಳನ್ನು ಆಟದಂತೆ ಭಾವಿಸಿ, ತಕ್ಕ ತಿಳಿವಳಿಕೆಯನ್ನೂ ಅನುಭವವನ್ನೂ ಸಂಪಾದಿಸುವುದಕ್ಕೆ ಮುಂಚೆಯೇ ತೀರ್ಮಾನಗಳನ್ನು ಹೇಳಹೊರಡುವುದು ದೇಶಕ್ಕೆ ಉಪಕಾರವೋ ಅಪಕಾರವೋ ಬಾಯಿಬಿಟ್ಟು ಹೇಳಬೇಕಾದುದಿಲ್ಲ. ಗೋಖಲೆಯವರು ತಾವು ಸ್ವತಃ ಅನುಸರಿಸಿದ್ದ ಕ್ರಮಕ್ಕೆ ತಕ್ಕಂತೆ, ತಮ್ಮ ಶಿಷ್ಯರು—ಎಂದರೆ ಭಾರತ ದೇಶ ಸೇವಕ ಸಂಘದ ಸದಸ್ಯರು—ಐದು ವರ್ಷ ಕಾಲ ಅಭ್ಯಾಸ ಶಿಕ್ಷಣೆಗಳನ್ನು ಪಡೆದಿದ್ದ ಹೊರತು ರಾಜಕೀಯ ವಿಚಾರಕ್ಕೆ ಪ್ರವೇಶಮಾಡಕೂಡದೆಂದು ಕಟ್ಟುಮಾಡಿದ್ದರು. ಬುದ್ಧಿಶ್ರಮ ದಿಂದ ಮಾಡುವ ಸೇವೆಯೇ ಸದ್ಯಕ್ಕೆ ಎಲ್ಲ ಬಗೆಯ ದೇಶಸೇವೆಗಳಿಗಿಂತ ದೊಡ್ಡದೆಂದು ಅವರು ನಂಬಿದ್ದರು. ಜನರು ಸಾಮಾನ್ಯವಾಗಿ ಮಾತ ನಾಡುವ ಶ್ರಮವನ್ನು ಬೇಕಾದರೆ ಪಟ್ಟಾರು; ದೇಹಶ್ರಮವನ್ನು ಬೇಕಾ ದರೂ ಅಲ್ಪಸ್ವಲ್ಪ ಪಡಬಹುದು; ಇನ್ನೂ ಬೇಕಾದರೆ ಒಂದೆರಡು ಹಣ ವನ್ನೂ ಕೊಟ್ಟು ದೇಶದ ಋಣವನ್ನು ಹರಿಸಿಕೊಂಡಾರು; ಆದರೆ ಯೋಚನೆ ಮಾಡುವ ಶ್ರಮಕ್ಕೆ ಸಿದ್ಧರಾಗಿ ಬರುವವರು ಮಾತ್ರ ಅತಿ ವಿರಳ. ಯೋಚ ನೆಯು ಆಹಾರ ನಿದ್ರೆಗಳಿಗೆ ಭಂಗ ತಂದು ದೇಹವನ್ನು ಸವೆಯಿಸುತ್ತದೆ. ಆದುದರಿಂದ ಬುದ್ಧಿ ಶಕ್ತಿಯ ಮೂಲಕ ದೇಶಸೇವೆ ಮಾಡಲು ಮುಂದೆ ಬರುವವರು ಹೇರಳವಾಗಿರುವುದಿಲ್ಲ. ಗೋಖಲೆಯವರಿಗೆ ಒಂದು ಘಳಿಗೆ ಉಪನ್ಯಾಸ ಮಾಡುವುದೆಂದರೆ, ಹತ್ತು ಘಳಿಗೆ ಯೋಚನೆಮಾಡುವುದೆಂದು ಅರ್ಥವಾಗಿತ್ತು. ಪ್ರಸಕ್ತ ವಿಷಯವನ್ನು ಕುರಿತ ಪುಸ್ತಕಗಳನ್ನೆಲ್ಲ ಓದ ಬೇಕು; ಅದಕ್ಕೆ ಸಂಬಂಧಪಟ್ಟ ಎಲ್ಲಾ ಲೆಕ್ಕಗಳನ್ನೂ ಸಂಗತಿಗಳನ್ನೂ ಗುರುತಿಟ್ಟುಕೊಳ್ಳಬೇಕು; ಅದರ ಪೂರ್ವಾಪರ ಸಂದರ್ಭಗಳನ್ನೆಲ್ಲ ಮನ ಸ್ಸಿಗೆ ತಂದುಕೊಳ್ಳಬೇಕು; ಆಮೇಲೆ ಸಾವಧಾನವಾಗಿ ಚಿಂತಿಸಿ ಸರಿಯಾದು ದನ್ನು ನಿಶ್ಚಯಿಸಬೇಕು; ಅದಕ್ಕೆ ಬರಬಹುದಾದ ಆಕ್ಷೇಪಣೆಗಳನ್ನು ಕಂಡುಕೊಂಡು ಅವುಗಳಿಗೆ ಸಮಾಧಾನಗಳನ್ನು ಸಿದ್ಧಪಡಿಸಬೇಕು—ಹೀಗೆ ಮಾಡಿದವರ ವಾಕ್ಯವೇ ಪ್ರಮಾಣವೆನಿಸುವುದು. ಗೋಖಲೆಯವರು ಹಾಗೆ ಮಾಡುತ್ತಿದ್ದರು. ಉಪನ್ಯಾಸಕ್ಕಾಗಿ ಸನ್ನದ್ಧರಾಗುವ ಸಮಯದಲ್ಲಿ ಅವರ ಮನಸ್ಸಿನಲ್ಲಿದ್ದ ಅಭಿಪ್ರಾಯವನ್ನು ಸರಿಯಾಗಿ ವ್ಯಕ್ತಪಡಿಸುವ ಪದವು

ತೋರದೆ ಹೋದರೆ ಅದನ್ನು ನೆನಪಿಗೆ ತಂದುಕೊಳ್ಳುವುದಕ್ಕಾಗಿ ಅವರು ಅನೇಕ ನಿಮಿಷಗಳ ಕಾಲ ಕಷ್ಟಪಡುತ್ತಿದ್ದರು. ಹಾಗೆ ಅವರು ತದೇಕ ಧ್ಯಾನದಿಂದ ತಮ್ಮ ಕೋಣೆಯಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಶತಪಥವಿಡುತ್ತಿದ್ದುದನ್ನು ನೋಡಿದವರು ಅವರನ್ನು ಬೋನಿನಲ್ಲಿ ಆವೇಶ ದಿಂದ ಹಿಂದಕ್ಕೂ ಮುಂದಕ್ಕೂ ನಡೆಯುತ್ತಿರುವ ಹುಲಿಗೆ ಹೋಲಿಸಿರುವರು. ವಿಷಯವನ್ನು ಹೆಚ್ಚು ಕಡಿಮೆಗಳಿಲ್ಲದಂತೆ ತಿಳಿದುಕೊಂಡು ಹೆಚ್ಚು ಕಡಿಮೆ ಗಳಿಲ್ಲದಂತೆ ಹೇಳುವುದು ಎಷ್ಟು ಮುಖ್ಯವೆಂಬುದನ್ನು ನಾವು ಗೋಖಲೆ ಯವರಿಂದ ಕಲಿಯಬೇಕು.

ಗೋಖಲೆಯವರ ಇನ್ನೊಂದು ದೊಡ್ಡ ಗುಣವೇನೆಂದರೆ—ಸ್ವಜನ ಗುಣದೋಷ ವಿವೇಚನೆ. ನಮ್ಮ ದೇಶದವರು ಹೇಗಿದ್ದರೂ ಅದೇ ಸರಿ; ಪರ ದೇಶೀಯರಲ್ಲಿ ಯಾವ ಗುಣ ಕಂಡರೂ ಅದು ಗಣ್ಯವಲ್ಲ—ಎಂದು ವಾದಿ ಸುವ ಬುದ್ಧಿವಿಕಾರವು ಅವರಿಗೆ ಬಂದಿರಲಿಲ್ಲ. ಈ ಕಾಲದಲ್ಲಿ ದೊಡ್ಡ ದೊಡ್ಡ ಸಭೆಗಳು ಚಪ್ಪಾಳೆ ತಟ್ಟುವಂತೆ ಉಪನ್ಯಾಸಮಾಡಬೇಕೆನ್ನುವವರು ಅವರ ಹಾಗಿದ್ದರೆ ಆಗುವುದಿಲ್ಲ. ಇದ್ದುದನ್ನೂ, ಇರಬಹುದಾಗಿದ್ದುದನ್ನೂ ಇತ್ತೆಂದು ಹೇಳಲು ಇಷ್ಟವಾಗುವುದನ್ನೂ—ಎಲ್ಲವನ್ನೂ ಸೇರಿಸಿ, ನಮ್ಮ ದೇಶದ ಪೂರ್ವಸ್ಥಿತಿಯನ್ನು ಉತ್ಪ್ರೇಕ್ಷೆಮಾಡಬೇಕು; ಈಗ ನಮ್ಮಲ್ಲಿ ಕಾಣುವ ಅವಗುಣಗಳಿಗೆ ಅವು ಸುಗುಣಗಳೇ ಎಂದು ತೋರುವಂತೆ ಬಣ್ಣ ಕಟ್ಟಬೇಕು; ನಾವು ಅತಿಶಕ್ತರು, ಅಸಮಾನ ಸಮರ್ಥರು ಎಂದೂ, ನಮ್ಮಲ್ಲಿ ನ್ಯೂನತೆಗಳೇನಾದರೂ ಕಂಡರೆ ಅವಕ್ಕೆಲ್ಲಾ ಪರದೇಶೀಯರೇ ಕಾರಣವೆಂದೂ ವಾದಿಸಿ ನಮ್ಮನ್ನು ಹೊಗಳಿಕೊಳ್ಳಬೇಕು; ಅನ್ಯ ಭಾಷೆ ಯನ್ನು ದೂಷಿಸಿ ಸ್ವಭಾಷೆಯನ್ನು ಪ್ರಶಂಸಿಸಬೇಕು; ಅನ್ಯರ ಆಚಾರ ಪದ್ಧತಿಗಳನ್ನು ಹೀಯಾಳಿಸಿ ನಮ್ಮವೇ ದೊಡ್ಡವೆಂದು ಹೇಳಬೇಕು; ಅನ್ಯರ ದೋಷಗಳನ್ನು ಡ್ಯಾಟಿಸಿ ನಮ್ಮ ಮೇಲ್ಮೆಯನ್ನು ಸ್ಥಾಪಿಸಬೇಕು;—ಹೀಗೆ ಮಾಡಲಾರದವರು ಈಗ ಜನರಂಜನೆಯನ್ನು ಮಾಡಲಾರರು. ಆದರೆ ಈ ರೀತಿ ಜನರಂಜನೆ ಮಾಡುವುದು ಜನಸೇವೆಯೆಂದು ಗೋಖಲೆಯವರು ತಿಳಿದುಕೊಂಡಿರಲಿಲ್ಲ; ತಮ್ಮ ಕರ್ತವ್ಯವು ಜನರಿಗೆ ಹಿತವಾದುದನ್ನು ಹೇಳು

ವುದೆಂದು ತಿಳಿದಿದ್ದರೇ' ಹೊರತು, ಅವರಿಗೆ ಇಷ್ಟವಾದುದನ್ನು ಹೇಳುವುದೆಂದಲ್ಲ. ನಮ್ಮಲ್ಲಿ ಅನೇಕ ಲೋಪಗಳಿವೆ; ನಮ್ಮ ಸಮಾಜದ ಸಂಪ್ರದಾಯಗಳಲ್ಲಿ ಅನೇಕ ಅನರ್ಥಗಳಿವೆ; ನಮ್ಮ ನಡತೆಯಲ್ಲಿ ಅನೇಕ ಕೊರತೆಗಳಿವೆ; ನಮ್ಮ ಜೀವನ ರೀತಿಯಲ್ಲಿ ಅನೇಕ ಮೂಢ ವಿಶ್ವಾಸಗಳಿವೆ; ಇವುಗಳನ್ನೆಲ್ಲ ನಾವು ಸರಿಪಡಿಸಿಕೊಂಡು, ನಮ್ಮ ಬುದ್ಧಿಬಲವನ್ನೂ ಸಂಘಬಲವನ್ನೂ ಅಭಿವೃದ್ಧಿಪಡಿಸಿಕೊಂಡಲ್ಲದೆ, ಹೆಚ್ಚಿನ ರಾಜಕೀಯ ಶಕ್ತಿ ಸ್ವಾತಂತ್ರ್ಯಗಳಿಗೆ ನಾವು ಅರ್ಹರಾಗಲಾರೆವು—ಎಂದು ಅವರು ಪದೇಪದೇ ಹೇಳುತ್ತಿದ್ದರು. ನಮ್ಮ ಪೂರ್ವಿಕರ ಮಹಿಮೆಯನ್ನು ಅವರು ಅರಿಯದವರಲ್ಲ; ನಮ್ಮಲ್ಲಿರುವ ಗುಣಾಂಶಗಳನ್ನೇನೂ ಅವರು ತೃಣೀಕರಿಸಿರಲಿಲ್ಲ; ಆದರೆ ನಾವು ಇನ್ನೂ ಉತ್ತಮರಾಗಬೇಕೆಂಬುದು ಅವರ ಆಶೆ. ನಮ್ಮಲ್ಲಿ ಮೇಧಾವಿಗಳೂ, ಸಾಧುಗಳೂ ಆದ ಮಹಾ ಪುರುಷರು ಕೆಲವುಮಂದಿಯಿದ್ದರೇನು? ಇಷ್ಟು ಕೋಟಿ ಪ್ರಜೆಯಲ್ಲಿ ಒಬ್ಬರೋ ಇಬ್ಬರೋ ಜಗತ್ಪ್ರಸಿದ್ಧರಾದರೇನು? ಸಾಮಾನ್ಯ ಜನರ ಯೋಗ್ಯತೆಗನುಸಾರವಾಗಿ ದೇಶದ ಸ್ಥಿತಿಯಿರುವುದು. ಒಬ್ಬ ಸಾಮಾನ್ಯನಾದ ಭಾರತೀಯನನ್ನು ಒಬ್ಬ ಸಾಮಾನ್ಯನಾದ ಆಂಗ್ಲೇಯನೊಡನೆ ಹೋಲಿಸಿ ನೋಡಿದರೆ, ಕಾರ್ಯಶಕ್ತಿಯಲ್ಲಿಯೂ, ಧೈರ್ಯದಲ್ಲಿಯೂ, ಶ್ರದ್ಧೆಯಲ್ಲಿಯೂ, ನ್ಯಾಯಪ್ರೀತಿಯಲ್ಲಿಯೂ, ಪ್ರಾಮಾಣಿಕತೆಯಲ್ಲಿಯೂ ನಮ್ಮವನ ಯೋಗ್ಯತೆಯು ಕೀಳು ತೆರದ್ದಾಗಿ ಕಾಣಬರುವುದು—ಎಂದು ಗೋಖಲೆಯವರು ಪುನಃ ಪುನಃ ಹೇಳಿ ವಿಷಾದಪಡುತ್ತಿದ್ದರು. ಅವರು ಮುಖಸ್ತೋತ್ರ ಮಾಡುವ ಕೃತ್ರಿಮ ಮಿತ್ರರಾಗಿರಲಿಲ್ಲ; ಆತ್ಮಪರಿಶೋಧನೆ ಮಾಡಿಸುವ ಉತ್ತಮ ಗುರುವಾಗಿದ್ದರು. ವಿಭೀಷಣನು ರಾವಣನನ್ನು ಕುರಿತು—

> ಸುಲಭಾಃ ಪುರುಷಾ ರಾಜನ್ ಸತತಂ ಪ್ರಿಯವಾದಿನಃ |
> ಅಪ್ರಿಯಸ್ಯ ತು ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ||

"ಈ ಲೋಕದಲ್ಲಿ ಪ್ರಿಯವಾದುದನ್ನೇ ಹೇಳಿ ಸಂತೋಷಪಡಿಸುವ ಜನರು ಸುಲಭವಾಗಿ ಸಿಕ್ಕುವರು; ಆದರೆ ಅಪ್ರಿಯವಾದರೂ ಪಥ್ಯವಾಗಿ (ಎಂದರೆ ಒಳ್ಳೆಯದಾಗಿ) ಇರುವುದನ್ನು ಹೇಳತಕ್ಕವರೂ ಕೇಳತಕ್ಕವರೂ

ಇಬ್ಬರೂ ದುರ್ಲಭರೇ ''—ಎಂದು ಹೇಳಿದ ತತ್ತ್ವವನ್ನು ನಾವು ಇಲ್ಲಿ ಸ್ಮರಣೆಗೆ ತಂದುಕೊಳ್ಳಬಹುದು.

ಮೇಲೆ ವಿವರಿಸಿರುವ ಗುಣಗಳೆಲ್ಲವೂ ಒಂದೇ ಗುಣದ ರೂಪಾಂತರಗಳು. ಆ ಮೂಲ ಗುಣವಾವುದೆಂದರೆ, ನಮ್ಮ ಜೀವನದ ಎಲ್ಲ ವಿಚಾರ, ಎಲ್ಲ ಕ್ರಿಯೆ, ಎಲ್ಲ ವ್ಯವಹಾರಗಳಿಗೂ ಮನಸ್ಸಿನ ಒಳಗಿರುವ ಸತ್ಯ-ಧರ್ಮ-ಸೂಚಕ ಶಕ್ತಿಯನ್ನು ಸಾಕ್ಷಿಯಾಗಿಟ್ಟುಕೊಂಡು ನಡೆಯಬೇಕೆಂಬುದೇ. ಈ ಆತ್ಮಶಕ್ತಿಯು—ಈ ಸತ್ಯ ಧರ್ಮಮೂಲವು—ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿಯೂ ಅಡಗಿರುತ್ತದೆ. ಆದರೆ ಬಹುಮಂದಿಗೆ ಸಾಮಾನ್ಯವಾಗಿ ಅದರ ಧ್ವನಿ ಕೇಳಬರುವುದೇ ಇಲ್ಲ; ಗತಾನುಗತಿಕವಾದ ಲೋಕದ ರಗಳೆಯೇ ಸಾಮಾನ್ಯ ಜನರ ಮನಸ್ಸಿನ ಕಿವಿಯಲ್ಲಿ ತುಂಬಿರುತ್ತದೆ; ಧರ್ಮದ ಸೂಕ್ಷ್ಮವೊಂದಿರುವುದೆಂಬುದೂ, ಅದನ್ನು ಹುಡುಕಿ ನೋಡದಿದ್ದರೆ ಅದು ಕಾಣಬಾರದೆಂಬುದೂ ಅವರ ತಿಳಿವಳಿಕೆಗೆ ಬಂದೇ ಇರುವುದಿಲ್ಲ. ಇನ್ನು ಕೆಲಮಂದಿಗೆ ಆ ಒಳಗಿನ ಉಪದೇಶವು ಕೇಳಬಂದರೂ ಅವರು ಅದನ್ನು ಲಾಲಿಸುವುದಿಲ್ಲ. ಈ ಲೋಕದ ರಾಗದ್ವೇಷಗಳೂ ದರ್ಪಮೋಹಗಳೂ ಅವರಲ್ಲಿ ಪ್ರಬಲಿಸಿ ಆ ಅಂತರ್ಜ್ಯೋತಿಯ ಬೆಳಕಿಗೆ ಅಡ್ಡಗಟ್ಟಿಕೊಂಡು ನಿಂತಿರುತ್ತವೆ. ಗೋಖಲೆಯವರಂತಹ ಕೆಲವರು ಮಾತ್ರ ಬಹು ಪ್ರಯತ್ನಪಟ್ಟು ಅದರ ಪ್ರಕಾಶವನ್ನು ಸಂಪಾದಿಸಿಕೊಂಡು, ಸರ್ವದಾ ಆ ಪ್ರಕಾಶದಿಂದ ತೋರಿಬಂದ ಮಾರ್ಗದಲ್ಲಿಯೇ ಹೆಜ್ಜೆಯಿಡುವರು. ಮನುಷ್ಯನು ತನ್ನ ಅಂತರಾತ್ಮನನ್ನು ಸಾಕ್ಷಿಯಾಗಿಟ್ಟುಕೊಂಡೇ ಎಲ್ಲ ಕೆಲಸಗಳನ್ನೂ ಮಾಡಬೇಕು; ಹಾಗೆ ಮಾಡಿದ ಕೆಲಸಗಳೂ ಹಾಗೆ ಆಡಿದ ಮಾತುಗಳೂ ಮಂಗಳಪ್ರದಗಳಾಗುವುವು—ಎಂಬುದು ಅವರ ಮತ. "ದೇಶಾರಾಧನೆಯೇ ದೇವಾರಾಧನೆ," "ಸಾರ್ವಜನಿಕ ಕಾರ್ಯನಿಷ್ಠೆಯು ಧರ್ಮಾಂಗವಾದ ಕರ್ಮ ''—ಎಂದು ಗೋಖಲೆಯವರು ಪದೇಪದೇ ಬೋಧಿಸಿರುವರು. ನಾವು ನಮ್ಮ ವ್ರತ ಜಪ ದೀಕ್ಷೆಗಳಲ್ಲಿ ಎಂತಹ ಶ್ರದ್ಧೆಯನ್ನು ತೋರಬೇಕೋ, ಅವುಗಳನ್ನಾಚರಿಸುವಾಗ ತಮ್ಮ ಮನೋಬುದ್ಧಿಗಳು ಹೇಗೆ ಇರಬೇಕೋ, ದೇಶಕಾರ್ಯದಲ್ಲಿಯೂ ನಾವು ಅಂತಹ ಶ್ರದ್ಧೆಯನ್ನು

ತೋರಬೇಕು, ನಮ್ಮ ಮನೋಬುದ್ಧಿಗಳು ಅದರಲ್ಲಿಯೂ ಹಾಗೆಯೇ ಇರಬೇಕು. ನಮ್ಮ ಆತ್ಮವೇ ನಮ್ಮ ಎಲ್ಲ ವರ್ತನೆಗಳಿಗೂ ಸಾಕ್ಷಿಯಾಗಿರಲಿ—ಎಂಬುದು ಗೋಖಲೆಯವರ ಜೀವನ ಚರಿತ್ರೆಯ ಮುಖ್ಯ ನೀತಿ.

ಹೀಗೆ ಯಾವ ದೃಷ್ಟಿಯಿಂದ ನೋಡಿದರೂ ನಮಗೆ ಗುರುಪ್ರಾಯರಾಗಿರುವ ಗೋಖಲೆಯವರನ್ನು ಅನುದಿನವೂ ಕೃತಜ್ಞತೆಯೊಡನೆ ಸ್ಮರಿಸುವುದು ನಮಗೆ ಪವಿತ್ರವಾದ ಕರ್ತವ್ಯ ಮಾತ್ರವಲ್ಲದೆ, ಶ್ರೇಯಸ್ಕರವಾದ ವ್ರತವೂ ಅಹುದು. ಅಂತಹ ಮಹನೀಯರನ್ನು ಧ್ಯಾನಿಸುವುದರಿಂದ, ನಮ್ಮಂತಹ ಸಾಮಾನ್ಯರ ಹೃದಯದಲ್ಲಿ ದೇಶಾಭಿಮಾನರಸವು ಲೇಶಮಾತ್ರವಾದರೂ ವೃದ್ಧಿಹೊಂದುವುದು; ನಮ್ಮಲ್ಲಿ ಮಂಕಾಗಿ, ಕಾರ್ಯಕಾರಿಯಾಗದೆ ಇರುವ ಧರ್ಮಾಧರ್ಮ ವಿವೇಚಕ ಶಕ್ತಿಯು ಅವರ ಮಹಿಮೆಯಿಂದ ಸ್ವಲ್ಪವಾದರೂ ಪ್ರಕಾಶಮಾನವಾದೀತು; ಕೊಂಚ ಮಟ್ಟಿಗಾದರೂ ಅವರು ಹಾಕಿದ ಮೇಲ್ಪಂಕ್ತಿಯನ್ನನುಸರಿಸಬೇಕೆಂಬ ಬುದ್ಧಿಯು ಕ್ಷಣಮಾತ್ರಕ್ಕಾದರೂ ನಮ್ಮಲ್ಲಿ ಹುಟ್ಟೀತು. ಇಂತಹ ಉದ್ದೇಶದಿಂದಲೇ ನಮ್ಮ ಪೂರ್ವಿಕರು ಮಹನೀಯರೂ ಪೂಜ್ಯರೂ ಆದವರ ಜಯಂತ್ಯುತ್ಸವಗಳನ್ನೂ ಆರಾಧನೆಗಳನ್ನೂ ಆಚರಿಸುವ ಸಂಪ್ರದಾಯವನ್ನಿಟ್ಟಿರುವರು.

ನಮ್ಮ ಭರತಖಂಡದ ಪುರಾತನ ಮಹಾಪುರುಷರ ಜೊತೆಗೆ ಸೇರಲು ಅರ್ಹರಾದವರು ಈಗಿನ ಕಾಲದಲ್ಲಿಯೂ ಕೆಲಮಂದಿ ಇರುವರು. ಮಹಾಪುರುಷರಿಗೆ ಅವತಾರಕೊಟ್ಟು ಲೋಕೋಪಕಾರಮಾಡುವ ಶಕ್ತಿಯನ್ನು ನಮ್ಮ ಭರತಮಾತೆಯು ಇನ್ನೂ ಕಳೆದುಕೊಂಡಿಲ್ಲ. ನಮ್ಮ ಈಚಿನ ಕಾಲದ ಮಹನೀಯರಲ್ಲಿ ಗೋಖಲೆಯವರು ಅಗ್ರಪಂಕ್ತಿಯಲ್ಲಿ ಗಣ್ಯರಾಗತಕ್ಕವರು. ಮೊದಲೇ ಹೇಳಿದಂತೆ, ಅನೇಕ ಬಗೆಯ ದೇಶೋಪಕಾರಿಗಳ ಪೈಕಿ ರಾಜ್ಯಪರಿಷ್ಕಾರಕರ್ತನದೂ ಒಂದು ಬಗೆ; ಮತ್ತು ಅನೇಕ ಬಗೆಯ ರಾಜ್ಯಪರಿಷ್ಕಾರಕರಲ್ಲಿ ಗೋಖಲೆಯವರದೂ ಒಂದು ಬಗೆ. ಕೆಲವು ಸಂದರ್ಭಗಳಲ್ಲಿ ದೇಶೋದ್ಧಾರಕ್ಕೆ ಈ ಒಂದು ಬಗೆಯೇ ಸಾಕಾಗದೆ ಹೋಗಬಹುದು. ಹೊಸ ಕಾಲಕ್ಕೆ ಹೊಸ ಸಂಸ್ಕಾರಕರ್ತರೂ, ನೂತನ ಸಂದರ್ಭಗಳಿಗೆ ನೂತನ

ಸಂಧಾನಗಳೂ ಅವಶ್ಯವೆನಿಸುವುದು ಸ್ವಾಭಾವಿಕವೇ ಸರಿ. ಯುದ್ಧವೊದಗಿರುವಾಗ ದೇಶಕ್ಕೆ ಮಂತ್ರಿ ರಾಯಭಾರಿಗಳಿಗಿಂತ ಸೇನಾನಾಯಕರೇ ಹೆಚ್ಚು ಆವಶ್ಯಕ. ಆದರೆ ಯುದ್ಧ ಪ್ರಸಕ್ತಿ ಹತ್ತಾರು ವರ್ಷಗಳಲ್ಲೊಂದು ಬಾರಿ ಬಂದೀತು. ಉಳಿದೆಲ್ಲ ಕಾಲಗಳಲ್ಲಿಯೂ ಶಾಂತಿ ಸಂರಕ್ಷಣೆಯ ಕೆಲಸವೇ ದೊಡ್ಡದು. ಹೀಗೆ ರಾಜಕೀಯ ಕ್ಷೇತ್ರದಲ್ಲಿ ಮನುಷ್ಯರ ಬೆಲೆಗಳು ಪದೇ ಪದೇ ಬದಲಾಯಿಸುತ್ತಿರುತ್ತವೆ. ಕ್ಷಣೇಕ್ಷಣೇ ವ್ಯತ್ಯಸ್ತವಾಗುವುದೇ ಸ್ವಭಾವಲಕ್ಷಣವೆನಿಸಿರುವ ಈ ಮಾನುಷ ಪ್ರಪಂಚದಲ್ಲಿ, ರಾಜಕೀಯ ವ್ಯವಸ್ಥೆಗಳಷ್ಟು ಬೇಗ ಬೇಗ ವ್ಯತ್ಯಾಸ ಹೊಂದತಕ್ಕ ಮನುಷ್ಯ ಸೃಷ್ಟಿ ಇನ್ನಾವುದೂ ಇಲ್ಲ. ಈ ತತ್ತ್ವವನ್ನು ನಮ್ಮ ಪೀಠಿಕೆಯಲ್ಲಿಯೇ ಸೂಚಿಸಿದೆ. ಆದಕಾರಣ, ರಾಜಕೀಯ ವ್ಯವಸ್ಥಾ ವಿಧಾನಗಳು ಏನಾದರಿರಲಿ; ಆ ಉಪಾಯ ಯುಕ್ತಿಗಳು ಎಂತಾದರಿರಲಿ ; ಅವು ಉತ್ತಮಗಳೆನಿಸಿ ಸಾರ್ಥಕವಾಗುವುದಕ್ಕೆ ಯಾವ ಸತ್ಯಸಂಧತೆ, ಯಾವ ಸಾತ್ತ್ವಿಕತೆ, ಯಾವ ಉದಾತ್ತತೆ—ಇವು ಸರ್ವದಾ ಮೂಲಸಾಧನಗಳೋ ಆ ಸರ್ವಕಾಲಾಪೇಕ್ಷಿತಗಳಾದ ಮೂಲಗುಣಗಳನ್ನು ನಾವು ಗಣನೆಯಲ್ಲಿಡುವುದಾದರೆ, ಗೋಖಲೆಯವರ ಹೆಸರನ್ನೂ ಉದಾಹರಣೆಯನ್ನೂ ಮರೆಯುವುದು ಎಂದಿಗೂ ಸಾಧ್ಯವಾಗದು. ಮುವ್ವತ್ತು ವರ್ಷಕಾಲ ಅವಿಚ್ಛಿನ್ನ ದೇಶಸೇವಾ ರೂಪವಾದ ಭಗವತ್ಸೇವೆಯನ್ನು ಮಾಡಿ, ಆ ಮೂಲಕ ಸ್ವಜನರ ಕೃತಜ್ಞತೆಗೂ ಇತರರ ಮೆಚ್ಚಿಕೆಗೂ ಪಾತ್ರರಾಗಿ, ವಿಶಾಲವಾದ ನಿರ್ಮಲ ಕೀರ್ತಿಯನ್ನು ಬಿಟ್ಟು, ಕೃತಕೃತ್ಯರಾದ ಇವರ ಜೀವನ ಚರಿತ್ರೆಯು ವಿಶೇಷವಾಗಿ ನಮ್ಮ ಯುವಕ ದೇಶಭಕ್ತರ ಸ್ಮರಣೆಯಲ್ಲಿರಬೇಕು. ರಾಜ್ಯವ್ಯವಸ್ಥೆಯ ನ್ಯೂನತೆಗಳನ್ನು ಹೋಗಲಾಡಿಸಿ, ಪ್ರಜಾಸೌಖ್ಯಕ್ಕೆ ಹೆಚ್ಚು ಗಮನವನ್ನೂ ಪ್ರಜಾಭಿಪ್ರಾಯಕ್ಕೆ ಹೆಚ್ಚು ಗೌರವವನ್ನೂ ಸಂಪಾದಿಸಿಕೊಡಲು ಅವರು ಪಟ್ಟ ಶ್ರಮವೂ, ಅವರು ತೋರಿಸಿರುವ ಉಪಾಯಗಳೂ ಎಲ್ಲರಿಗೂ ಅನುಸರಣೀಯವಾಗಿವೆ. ನಮ್ಮ ಜನರು ದೇಶಹಿತವಿಲ್ಲದೆ ಆತ್ಮಹಿತವಿಲ್ಲವೆಂಬುದನ್ನರಿತು, ತಂತಮ್ಮ ಮನೆಗೆಲಸ ಮಾತ್ರವಲ್ಲದೆ ತಮ್ಮ ದೇಶದ ಕೆಲಸವೂ ತಮ್ಮ ಕೆಲಸವೇ ಎಂದು ನಂಬಿ, ಜಾತಿಮತಗಳು ನೂರಾದರೂ ಜನತೆಯೊಂದೇ ಎಂಬುದನ್ನು ಮರೆ

ಯದೆ, ತಮ್ಮ ಪುರೋಭಿವೃದ್ಧಿಯ ಸೂತ್ರವು ತಮ್ಮ ಕೈಯಲ್ಲಿಯೇ ಇರುವುದೆಂಬುದನ್ನು ಸ್ಮರಿಸುತ್ತ, ಆತ್ಮೋದ್ಧಾರದ ಪ್ರಯತ್ನಗಳನ್ನು ಸಡಿಲುಬಿಡದೆ ಸಂತತವಾಗಿ ನಡಿಸಲಿ—ಎಂಬುದೇ ಗೋಖಲೆಯವರು ಬೋಧಿಸಿದ ಮತ್ತು ನಡತೆಯಲ್ಲಿ ತೋರಿಸಿದ ನೀತಿ. ಆ ಮಹಾತ್ಮರ ಕಳಾವಿಶೇಷವು ಅವರ ದೇಶಬಾಂಧವರಲ್ಲಿ ನೆಲಸಿರಲಿ ಎಂಬುದೇ ನಾವು ನಮ್ಮ ಜನ್ಮಭೂಮಿಗಾಗಿ ಮಾಡಬೇಕಾಗಿರುವ ಪರಮಪ್ರಾರ್ಥನೆ. ಅವರ ಈ ಕೆಳಗಿನ ವಚನವು ನಮ್ಮೆಲ್ಲರ ನೆನಪಿನಲ್ಲಿ ನಿಂತು, ನಮ್ಮ ನಡತೆಯಲ್ಲಿ ಪ್ರತಿಫಲಿಸುತ್ತಿರಲಿ :—

"ಯಾರು ನಮ್ಮ ಜನರಲ್ಲಿ ಐಕಮತ್ಯವನ್ನು ಹೆಚ್ಚಿಸುತ್ತಾನೆಯೋ, ಯಾರು ಸ್ವದೇಶೀ ಪದ್ಧತಿಯನ್ನು ಬೋಧಿಸುತ್ತಾನೆಯೋ, ಯಾರು ಸ್ವಾರ್ಥತ್ಯಾಗದ ವಿಧಾನಗಳನ್ನು ಕಲಿಸುತ್ತಾನೆಯೋ, ಯಾರು ನಮ್ಮ ಜನಪದದ ಬಲವನ್ನು—ರಾಜಕೀಯ ವಿಷಯದಲ್ಲಾಗಲಿ, ಕಸಬು ಕೈಗಾರಿಕೆಗಳ ವಿಷಯದಲ್ಲಾಗಲಿ, ನೀತಿವಿಷಯದಲ್ಲಾಗಲಿ, ಯಾವ ರೀತಿಯಲ್ಲಾಗಲಿ, ಯಾವ ರೂಪದಲ್ಲಾಗಲಿ—ಅಭಿವೃದ್ಧಿ ಪಡಿಸುತ್ತಾನೆಯೋ, ಆತನೇ ನಮ್ಮ ಸಹೋದ್ಯೋಗಿ ; ಆತನೇ ನಮ್ಮ ಸಹೋದರ".

---

# ಉಪನ್ಯಾಸ ಸಂಗ್ರಹ

---

## ನಮ್ಮ ರಾಜಕೀಯ ಪರಿಸ್ಥಿತಿ

೧೯೦೪ನೆಯ ಇಸವಿ ಜುಲೈ ೨೫ನೆಯ ತಾರೀಖು ಸೋಮವಾರ ಮದ್ರಾಸ್ ಪಟ್ಟಣದಲ್ಲಿ ಅನೇಕ ಸಾವಿರ ಮಂದಿ ಸೇರಿದ್ದ ಮಹಾಸಭೆಯ ಮುಂದೆ ಗೋಖಲೆಯವರು ಭಾರತೀಯರ ಸ್ವರಾಜ್ಯ ಸಂಪಾದನೋದ್ಯಮವನ್ನು ಕುರಿತು ಉಪನ್ಯಾಸ ಮಾಡಿದರು. ಆಗ ಅವರು ಹೇಳಿದ ಮಾತುಗಳು ಈಗಲೂ ನಮಗೆ ವಿಶ್ವಸನೀಯವಾಗಿವೆ. ಆ ಉಪನ್ಯಾಸದ ಸಾರ ವಾಕ್ಯಗಳು ಈ ಕೆಳಗಿನವು :—

ನಿಮ್ಮ ದೇಶದ ರಾಜ್ಯಭಾರ ನಿರ್ವಾಹದಲ್ಲಿ,—ನಿಮ್ಮ ಸರಕಾರದ ಆಡಳಿತದಲ್ಲಿ,—ನೀವು ತೆರುವ ತೆರಿಗೆಗಳನ್ನು ಖರ್ಚುಮಾಡುವ ವಿಷಯದಲ್ಲಿ,—ನಿಜವಾದಂಥಾ ಮತ್ತು ಸಾರ್ಥಕವಾಗುವಂಥಾ ಅಧಿಕಾರವು ನಿಮಗೆ ಎದುವರೆಗೂ ದೊರೆಯುವುದಿಲ್ಲವೋ, ಅದುವರೆಗೂ ನಿಮ್ಮ ಸಂಪದಭಿವೃದ್ಧಿಯ ಪ್ರಯತ್ನಗಳೂ ಸಫಲವಾಗಲಾರವು ಎಂಬುದು ನನ್ನ ದೃಢವಾದ ಮತ. . . . . . .

ಈಗಿನ ಕಾಲಕ್ಕೆ ತಕ್ಕಂತೆ ನಾವು ಏನೇನು ಮಾಡಬೇಕೆಂಬುದನ್ನು ತಿಳಿದು, ನಮ್ಮ ಕೆಲಸಗಳನ್ನು ಮತ್ತಷ್ಟು ಉತ್ಸಾಹದಿಂದಲೂ ಶ್ರದ್ಧೆಯಿಂದಲೂ ಮಾಡುವುದು ನಮಗೆ ಧರ್ಮವು. ನಾವು ಇದುವರೆಗೂ ನಡೆಯಿಸಿರುವ ಸಾರ್ವಜನಿಕ ಪ್ರಯತ್ನಗಳು ಅಸಮರ್ಪಕವಾಗಿಯೂ ನಿಷ್ಫಲವಾಗಿಯೂ ಇವೆ; ಏಕೆಂದರೆ ಅವುಗಳನ್ನು ನಾವು ಅರೆಮನಸ್ಸಿನಿಂದಲೂ ನಿಷ್ಠತೆಯಿಲ್ಲದೆಯೂ ನಡೆಸಿದ್ದೇವೆ. ಮನುಷ್ಯರು ತಾವು ಕೈಗೊಳ್ಳುವ ಕಾರ್ಯದಲ್ಲಿ ನಂಬುಗೆಯಿಲ್ಲದವರಾಗಿ, ನಿರ್ಜೀವವಾದ ಯಂತ್ರದ ಹಾಗೆ ಕೆಲಸಮಾಡಿದರೆ, ಅದರಿಂದ ಯಾವ ದೊಡ್ಡ ಫಲವೂ ದೊರೆಯದೆ ಇರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ನಾವೆಲ್ಲರೂ ಜಪಾನ್ ದೇಶದ ಮಹಾಕಾರ್ಯಗಳನ್ನು ಪ್ರಶಂಸಿಸಿ, ಆ ದೇಶದವರನ್ನು ಶ್ಲಾಘಿ

ಸುತ್ತೇವೆ. ನಮ್ಮಲ್ಲನೇಕರು ಜಪಾನಿನ ಚರಿತ್ರೆಯನ್ನೋದಿದ್ದಾರೆ; ನಾನೂ ಓದುತ್ತಿದ್ದೇನೆ. ಅದರಲ್ಲಿಯ ಮುಖ್ಯಾಂಶಗಳೇನು? ಮೊದಲನೆಯದು— ಆ ದೇಶದಲ್ಲಿಯ ಅತ್ಯದ್ಭುತವಾದ ಜನೈಕಮತ್ಯ. ಅದು ಜಪಾನರ ನೈಜ ಗುಣವೆಂದು ಹೇಳಬಹುದು. ಅದೇನೂ ನಾಲ್ವತ್ತು ವರ್ಷಗಳ ಹಿಂದೆ ಆ ದೇಶದೊಳಕ್ಕೆ ಪಾಶ್ಚಾತ್ಯ ದೇಶಗಳವರು ತಂದ ವಸ್ತುವಲ್ಲ. ಅಂತಹ ಜನಪದ ಭಾವವು ನಮ್ಮ ದೇಶದಲ್ಲಿ ಬೆಳೆಯುವುದಕ್ಕೆ ಹೆಚ್ಚುಕಾಲ ಬೇಕಾದೀತು. ಜಪಾನರ ಮತ್ತೊಂದು ದೊಡ್ಡ ಗುಣವೇನೆಂದರೆ—ಅಲ್ಲಿಯ ಪ್ರಜಾಪ್ರಮುಖರು ತೋರಿಸಿದ ಮಾರ್ಗವನ್ನು ಸಾಮಾನ್ಯ ಜನರು ಒಪ್ಪಿಕೊಂಡು ತೋರಿಸಿದ ಅನುಸರಣೆ. ಜಪಾನರ ಜಯಕ್ಕೆ ಇದೇ ಮೂಲ ಕಾರಣವೆಂದು ನನಗೆ ತೋರುತ್ತದೆ. ಜನಸಾಮಾನ್ಯವು ಮಾಡಬೇಕಾದ ಕೆಲಸಗಳನ್ನು ಆ ದೇಶದ ವಿದ್ಯಾವಂತರು ನಿರ್ಧರಿಸಿ ಹೇಳಿದರು; ಕೂಡಲೇ ಸಾಮಾನ್ಯ ಜನರು ಅದನ್ನಂಗೀಕರಿಸಿ, ತಾಳ್ಮೆಯಿಂದಲೂ ಸಮಾಧಾನದಿಂದಲೂ ಆ ಕಾರ್ಯಗಳನ್ನು ಮಾಡತೊಡಗಿದರು. ಇದರಿಂದ ಆ ದೇಶೀಯರ ಪ್ರಯತ್ನಗಳಿಗೆಲ್ಲಾ ಏಕಾಗ್ರತೆಯುಂಟಾಗಿ, ಆ ದೇಶವು ತನ್ನ ಜೀರ್ಣ ವಸ್ತ್ರಗಳನ್ನು ಕಳೆದು, ನೂತನ ವಸ್ತ್ರಾಭರಣಗಳನ್ನು ಧರಿಸಲು ಅನುಕೂಲವಾಯಿತು. ಆದುದರಿಂದ ನಾವು ಜಪಾನಿನಿಂದ ಕಲಿಯಬೇಕಾದ ಪಾಠವು ಇದು:—ನಮಗೆ ಉದ್ದೇಶ ಸಾಧನೆಯಾಗಬೇಕಾದರೆ ನಮ್ಮ ಪ್ರಯತ್ನಗಳು ಏಕಮುಖವಾಗಬೇಕು; ಪ್ರಯತ್ನಗಳು ಏಕಮುಖವಾಗಬೇಕಾದರೆ ನಮ್ಮ ಮುಖಂಡರಿಗೆ ಸಾಮಾನ್ಯ ಜನರಿಂದ—ಜಪಾನಿನಲ್ಲಿರುವಂತೆ—ಸುಶಿಕ್ಷಿತವಾದ ವಿಧೇಯತೆಯು ದೊರೆಯಬೇಕು. ನಮ್ಮ ದೇಶದಲ್ಲಿ ತದೇಕನಿಷ್ಠರಾದ ಪ್ರಜಾಪ್ರಮುಖರು ಅನೇಕರಿಲ್ಲವೆಂಬುದು ನಿಜ; ಆದರೆ ಅಂತಹವರಿಲ್ಲದೆಯೇ ಇಲ್ಲ. ಸರ್ ಫೆರೋಜ್‌ಷಾ ಮೇತಾ ಅವರು ಅಂತಹವರಲ್ಲೊಬ್ಬರು. ಅವರು ಶ್ರದ್ಧಾವಂತರು, ದೇಶಭಕ್ತಿಯುಳ್ಳವರು, ಮಹಾ ಸಾಮರ್ಥ್ಯವುಳ್ಳವರು, ಮುಂದಾಳಾಗಿರಲು ಎಲ್ಲ ವಿಧಗಳಲ್ಲಿಯೂ ಅರ್ಹರಾದವರು. ಇಂತಹವರಿಗೆ ನಮ್ಮಲ್ಲಿ ವಿದ್ಯಾವಂತರಾದ ಜನರು ಎದುರು ಮಾತಾಡದೆ ಬೆಂಬಲ ಕೊಡಬೇಕು. ಪ್ರತಿಯೊಬ್ಬನೂ ತನ್ನ ಬುದ್ಧಿಯನ್ನು

ಸ್ವತಂತ್ರವಾಗಿ ಉಪಯೋಗಿಸುವುದು ಒಳ್ಳೆಯ ಅಭ್ಯಾಸವೇ ಸರಿ. ಆದರೆ ಅನೇಕ ಮಂದಿಯ ಪ್ರಯತ್ನವು ಒಟ್ಟುಗೂಡಬೇಕಾದಾಗ —ಧರ್ಮಸೂಕ್ಷ್ಮ ವಿಷಯಗಳಲ್ಲಿ ವಿನಾ,—ಎಲ್ಲ ವಿಷಯಗಳಲ್ಲಿಯೂ ಜನರು ತಮ್ಮ ಸ್ವಂತ ಅಭಿಪ್ರಾಯಗಳನ್ನು ಒಂದು ಪಕ್ಕದಲ್ಲಿರಿಸಿ, ಮುಖಂಡರ ಮಾರ್ಗವನ್ನನುಸರಿಸಬೇಕು. ನಮ್ಮ ಸಾರ್ವಜನಿಕ ಕಾರ್ಯಗಳಲ್ಲಿ ಸುಶಿಕ್ಷಿತತೆಯು ಇನ್ನೂ ಹೆಚ್ಚಾಗಿರಬೇಕು.

ಅದರಂತೆಯೇ ನಮ್ಮ ಮುಖಂಡರೂ ತಮ್ಮ ಜವಾಬ್ದಾರಿಗಳನ್ನು ಇನ್ನೂ ಚೆನ್ನಾಗಿ ತಿಳಿದುಕೊಳ್ಳಬೇಕು. ನಮ್ಮ ದೇಶದಲ್ಲಿ ರಾಜಕೀಯ ಪ್ರಸಂಗವು ಒಂದು ಬಗೆಯ ವಿನೋದಕ್ರಿಯೆಯೆಂದು ತಿಳಿಯುವ ಕಾಲವು ಹೋಗಿ ಅನೇಕ ದಿನಗಳಾದುವು. ಹಿಂದೆ ಎಲ್ಲಾ ರಾಜಕೀಯ ವೃತ್ತಿಯೂ ಒಂದು ಬಗೆಯ ಆಟವಾಗಿತ್ತು ; ಈಗ ಅದರ ಕಷ್ಟವು ದಿನೇ ದಿನೇ ಹೆಚ್ಚುತ್ತಲಿದೆ. ಜನರು ತಮ್ಮ (ಕಸಬು) ಜೀವನ ವೃತ್ತಿಯನ್ನು ಹೇಗೆ ಜಾಗರೂಕತೆಯಿಂದ ಚುನಾಯಿಸಿ, ಆಮೇಲೆ ಅದಕ್ಕೆ ತಮ್ಮ ಶಕ್ತಿಯನ್ನೆಲ್ಲಾ ಯಾವ ರೀತಿ ವಿನಿಯೋಗಿಸುತ್ತಾರೆಯೋ, ಅದೇ ರೀತಿಯಲ್ಲಿಯೇ ಅವರು ತಮ್ಮ ರಾಜಕೀಯ ಕರ್ತವ್ಯಗಳನ್ನೂ ಜವಾಬ್ದಾರಿಗಳನ್ನೂ ಕಾಣಬೇಕು. ಈ ಕೆಲಸವನ್ನು ನಮ್ಮ ಶಾಸನ ಸಭೆಗಳ ಸದಸ್ಯರು (ಲೆಜಿಸ್ಲೆಟಿವ್ ಕೌನ್ಸಿಲಿನ ಮೆಂಬರು) ಗಳಾಗುವಷ್ಟು ಯೋಗ್ಯತೆ ಪಡೆದಿರುವ ವಿದ್ಯಾವಂತರುಗಳು ಕೈಕೊಳ್ಳಬೇಕೆಂದು ನಿರೀಕ್ಷಿಸುವುದು ನ್ಯಾಯವಾಗಿದೆ. ಅವರೆಲ್ಲರೂ ತಮ್ಮ ಜೀವನ ವೃತ್ತಿಯನ್ನು ಬಿಟ್ಟು ಈ ಕೆಲಸವನ್ನು ಕೈಕೊಳ್ಳಬೇಕೆಂಬುದು ನನ್ನ ನಿರೀಕ್ಷಣೆಯಲ್ಲ. ಆದರೆ ಪ್ರತಿಯೊಂದು ಜಿಲ್ಲೆ (ಡಿಸ್ಟ್ರಿಕ್ಟು) ಯಲ್ಲಿಯೂ ಒಬ್ಬೊಬ್ಬರಾದರೂ ಮುಂದೆ ಬಂದು, ತಮ್ಮ ಕಾಲವನ್ನೂ ಶಕ್ತಿಯನ್ನೂ ಸಾರ್ವಜನಿಕ ಕಾರ್ಯಗಳಿಗೆ ಇತೋಪ್ಯತಿಶಯವಾಗಿ ವಿನಿಯೋಗಿಸಲೆಂದು ನಿರೀಕ್ಷಿಸಲು ನಮ್ಮ ದೇಶಮಾತೆಗೆ ಹಕ್ಕುಂಟು. ಇಂತಹ ಮುಖಂಡರ ಸುತ್ತಮುತ್ತ ನಮ್ಮ ದೇಶದ ತರುಣರು ಸೇರಿ, ರಾಜಕೀಯವಾದ ದೇಶಸೇವೆಯಲ್ಲಿ ಬದ್ಧಕಂಕಣರಾಗಿ ನಿಂತಾಗ, ನಮ್ಮ ಸಾರ್ವಜನಿಕ ಜೀವನವು ಮತ್ತಷ್ಟು ಉತ್ತಮಗೊಳ್ಳುವುದರಲ್ಲಿ ಸಂದೇಹವಿಲ್ಲ. .

ನಮ್ಮ ರಾಜಕೀಯ ಸಂರಂಭದಿಂದ ಪ್ರಯೋಜನವಿಲ್ಲವೆಂದು ಹೇಳುವವರು ದೇಶಕ್ಕೆ ಅಪಕಾರ ಮಾಡುವವರಾಗುತ್ತಾರೆ. . . ನಮ್ಮ ಉದ್ದೇಶವು ನೆರವೇರಲು ಸಹಾಯಕೊಡುವುದು ನಮ್ಮಲ್ಲಿ ಪ್ರತಿಯೊಬ್ಬನಿಗೂ ಸಾಧ್ಯ. ಧನವುಳ್ಳವರು ಧನಸಹಾಯ ಮಾಡಬಹುದು; ವ್ಯವಧಾನವುಳ್ಳವರು ತಮ್ಮ ವಿರಾಮ ಕಾಲವನ್ನು ಈ ಕೆಲಸಕ್ಕೆ ಕೊಡಬಹುದು; ಬುದ್ಧಿ ಬಲವುಳ್ಳವರು ನಮ್ಮ ಸಾರ್ವಜನಿಕ ಹಿತಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಜನರಿಗೆ ಸದ್ಬೋಧನೆಮಾಡಿ, ಅವರ ಅಭಿಪ್ರಾಯಗಳನ್ನು ತಿದ್ದಿ ಬಲಪಡಿಸಬಹುದು; ನಮ್ಮ ತರುಣರು ದೇಶಸೇವಾ ಮತಪ್ರಚಾರಕರಾಗಿ ಹೊರಡಬಹುದು. ವಾಗಾಡಂಬರವಿಲ್ಲದೆ ಮಾಡಬೇಕಾದ ಕೆಲಸವು ಹೇರಳವಾಗಿದೆ. ಅದಕ್ಕೆ, ಹಿರಿಯರ ಮಾತನ್ನನುಸರಿಸಿ, ಜನರಲ್ಲಿ ಬೆರೆತು, ಸದ್ದು ಗಲಭೆಗಳನ್ನು ಮಾಡದೆ, ಶ್ರದ್ಧೆಯಿಂದ ಕಷ್ಟಪಡುವ ತರುಣರು ಅತ್ಯಾವಶ್ಯಕ.

ಈ ರೀತಿಯಲ್ಲಿ ನಾವು ನಮ್ಮಗಳ ವಿವಿಧವಾದ ಕರ್ತವ್ಯಗಳನ್ನು ವಹಿಸಿಕೊಂಡರೆ, ನಮ್ಮ ಪ್ರಯತ್ನಗಳು ಈ ದೇಶದ ರಾಜಕೀಯ ಮೋಕ್ಷ ಸಂಪಾದನೆಗೆ ತಕ್ಕ ಮಹಾಸಮಾರಂಭವಾಗಿ ಪರಿಣಮಿಸುವುವು. ಅಂತಹ ಮಹಾ ಸಮಾರಂಭದಲ್ಲಿ ನಮ್ಮ ಅಲ್ಪ ಮಾತ್ಸರ್ಯಗಳು ನಶಿಸಿ, ನಮ್ಮ ಅಂತಃಕಲಹಗಳು ಮಾಯವಾಗಿ, ನಮ್ಮ ಭರವಸೆಯು ಬೆಳಗಿ, ದೇಶಸೇವಾ ಯಜ್ಞಕ್ಕೆ ಬೇಕಾದ ತ್ಯಾಗವು ಆಚರಣೆಗೆ ಒಂದು, ಆ ಮೂಲಕ ನಮ್ಮ ದೇಶಮಾತೆಯು, ಮುಂದೆ ಯಾವ ಪದವಿಯನ್ನು ಆಕೆ ಪಡೆಯಲೆಂದು ನಾವು ಪ್ರತ್ಯಹವೂ ಬಯಸುತ್ತಿರುವೆವೋ ಮತ್ತು ಪ್ರತಿನಿಶಿಯೂ ಕಲವರಿಸುತ್ತಿರುವೆವೋ, ಆ ಉನ್ನತ ಪದವಿಯನ್ನು ಪಡೆಯುವಳು.

ನಾವು ಮಾಡಬೇಕಾಗಿರುವ ಮಹಾ ಪ್ರಯತ್ನಗಳಲ್ಲಿ ಅನೇಕಾವರ್ತಿ ಭಗ್ನಾಶರಾಗಲು ನಾವು ಸಿದ್ಧರಾಗಿರಬೇಕು. ನಮ್ಮ ಅಭಿವೃದ್ಧಿಯು ಸಾವಕಾಶವಾಗಿಯೇ ಇರುವುದೆಂದೂ, ಜಯವು ಮೊದಮೊದಲಿನಲ್ಲಿ ಅಲ್ಪವಾಗಿಯೇ ಇರುವುದೆಂದೂ ನಾವು ಈಗಲೇ ತಿಳಿದು ದೃಢಮನಸ್ಕರಾಗಬೇಕು. ನಿಶ್ಚಲಭಕ್ತಿಯಿಂದ ನಾವು ಕೆಲಸಮಾಡತೊಡಗಿದರೆ ನಮಗಿರುವ

ತೊಂದರೆಗಳು ಬಹುಕಾಲ ನಿಲ್ಲಲಾರವು; ಬರಬರುತ ಕಾಲಪುರುಷನು ನಮಗೆ ಸಹಾಯವಾಗುವನು.

ವಿಚಾರಿಸಿ ನೋಡಿದರೆ, ಸಂಪದ್ವಿಷಯದಲ್ಲಿ ನಮಗಿರುವ ಕಷ್ಟವು ನಮ್ಮ ರಾಜಕೀಯ ಕಷ್ಟಕ್ಕಿಂತ ದೊಡ್ಡದೇನೂ ಅಲ್ಲ. ಈ ಎರಡು ಕಷ್ಟಗಳೂ ಅಭೇದ್ಯವಾಗಿ ಪರಸ್ಪರ ಸೇರಿಕೊಂಡಿವೆ ಎಂದು ನನ್ನ ಅಭಿಪ್ರಾಯ. ಮಹಾಶಯರೆ, ಮಹಿಳೆಯರೆ—ಇಂಡಿಯಾ ದೇಶದ ಜನರು ಈಗ ನೆರವೇರಿಸ ಬೇಕಾಗಿರುವದರಷ್ಟು ದುಷ್ಕರವಾದ ಕರ್ತವ್ಯವನ್ನು ಪ್ರಪಂಚದಲ್ಲಿ ಯಾವ ಜನವೂ ಯಾವಾಗಲೂ ಕೈಕೊಂಡಿರಲಿಲ್ಲ. ಇಷ್ಟು ಕಷ್ಟವಾದ ಕೆಲಸವನ್ನು ದೇವರು ಏಕೆ ನಮಗೆ ನಿಯಮಿಸಿರುವನೋ,—ಇಷ್ಟು ಆಳವಾದ ಪ್ರವಾಹ ವನ್ನು ದಾಟಿಕೊಂಡು ಬರಬೇಕೆಂದು ಆಜ್ಞಾಪಿಸುವುದರಲ್ಲಿ, ಇಂತಹ ದುಸ್ಸಹವಾದ ಯುದ್ಧದ ಮಧ್ಯೆ ನಮ್ಮನ್ನು ಸಿಕ್ಕಿಸಿರುವುದರಲ್ಲಿ, ಆತನ ಸಂಕಲ್ಪವೇನಿರಬಹುದೋ—ಆತನೊಬ್ಬನೇ ಬಲ್ಲ. ಆದರೆ ಈ ಕೆಲಸವನ್ನು ನಾವು ಸಾಂಗವಾಗಿ ನೆರವೇರಿಸುವೆವೆಂದು ಮಾತ್ರ ನಮಗೆ ಭರವಸೆಯುಂಟು.

ಮಾತೃಭೂಮಿಯ ಸೇವೆಯನ್ನು ನಾವು ಶ್ರದ್ಧೆಯಿಂದಲೂ ಸ್ವಾರ್ಥ ತ್ಯಾಗ ಪೂರ್ವಕವಾಗಿಯೂ ಕೈಕೊಳ್ಳುವುದು ಈಗ ಅವಶ್ಯವಾಗಿದೆ. ಈ ಸೇವೆಗಿಂತಲೂ ಉತ್ತಮವಾದ, ಅಥವಾ ಶ್ರೇಷ್ಠವಾದ, ಅಥವಾ ಶ್ರೇಯ ಸ್ಕರವಾದ, ಅಥವಾ ಪವಿತ್ರವಾದ ಧರ್ಮವಿನ್ನಾವುದಿದೆ? ಇಂಡಿಯಾ ದೇಶದ ಹಿತಕ್ಕಾಗಿ ಶ್ರಮಪಡುವುದರಲ್ಲಿ ನಾವು ನಮ್ಮ ಜನ್ಮಭೂಮಿಗಾಗಿ, ನಮ್ಮ ತಾತ ಮುತ್ತಾತಂದಿರ ಭೂಮಿಗಾಗಿ, ನಮ್ಮ ಮಕ್ಕಳು ಮೊಮ್ಮ ಕ್ಕಳ ಭೂಮಿಗಾಗಿ, ಶ್ರಮಪಡುವೆವಲ್ಲವೆ? ಯಾವ ದೇಶದ ವಿಷಯದಲ್ಲಿ ದೇವರು ಪರಿಪರಿಯಾಗಿ ಅನುಗ್ರಹವನ್ನು ತೋರಿರುವನೋ,—ಆದರೂ ಯಾವುದನ್ನು ಮಾನವನು ತಕ್ಕಂತೆ ಸೇವಿಸಿಲ್ಲವೊ,—ಅಂತಹ ಪುಣ್ಯಭೂಮಿ ಗಾಗಿ ನಾವು ಈಗ ಕೆಲಸಮಾಡಬೇಕಾಗಿದೆ. ಈ ಕೆಲಸವನ್ನು ನಾವು ಭಗವತ್ಪ್ರೇರಣೆಯಾದಂತೆ ನೆರವೇರಿಸಿದರೆ, ನಮ್ಮ ಭಾರತಮಾತೆಯು ಅಭ್ಯು ದಯ ಮಾರ್ಗದಲ್ಲಿ ಬೇಗ ಬೇಗನೆ ಮುಂದೆ ನಡೆದು, ಪ್ರಪಂಚದ ಜನಪದಗಳ ಮಧ್ಯೆ ಪುನಃ ಮಾನ್ಯ ಪದವಿಯನ್ನು ಪಡೆಯುವಳು.

---

## ಸ್ವದೇಶೀ ಸಮಾರಂಭ

೧೯೦೭ನೆಯ ಇಸವಿ ಫೆಬ್ರುವರಿ ತಿಂಗಳಲ್ಲಿ ಲಕ್ನೋ ಪಟ್ಟಣದಲ್ಲಿ ಗೋಖಲೆಯವರು ಕೆಲವು ಉಪನ್ಯಾಸಗಳನ್ನು ಕೊಟ್ಟರು. ಅವುಗಳಲ್ಲಿ ಎರಡನೆಯದು "ಸ್ವದೇಶೀ" ವಿಷಯಕ ವಾದುದು. ಅದರಿಂದ ಈ ಕೆಳಗಿನ ವಾಕ್ಯಗಳು ಉದ್ಧೃತವಾಗಿವೆ. ಇಲ್ಲಿ ಸೂಚಿಸಿರುವ ಅಭಿಪ್ರಾಯಗಳೇ ಗೋಖಲೆಯವರ ಕಾಂಗ್ರೆಸ್ಸಿನ ಅಧ್ಯಕ್ಷೋಪನ್ಯಾಸದಲ್ಲಿಯೂ ವಿವೃತ ವಾಗಿವೆ :—

ಸ್ವದೇಶೀ ವ್ರತವು—ಅದರ ಉತ್ತಮೋತ್ತಮ ರೂಪದಲ್ಲಿ—ಬರಿಯ ಯಂತ್ರಕರ್ಮ ಕೈಗಾರಿಕೆಗಳಿಗೆ ಮಾತ್ರ ಸಂಬಂಧಪಟ್ಟ ಪ್ರಯತ್ನವಲ್ಲ; ಅದು ನಮ್ಮ ಜನರ ಜೀವಿಕೆಯ ಸಮಸ್ತ ವಿಷಯಗಳಲ್ಲಿಯೂ ಅನ್ವಯಿಸ ಬೇಕಾದದ್ದು. ಸ್ವದೇಶೀ ಮತವು ಅದರ ಅತ್ಯುತ್ತಮ ಸ್ವರೂಪದಲ್ಲಿ ಅಗಾಧವಾದ, ನಿರ್ಭರವಾದ, ಗಾಢವಾದ, ಸರ್ವವ್ಯಾಪಿಯಾದ ಮಾತೃ ಭೂವಾತ್ಸಲ್ಯ. ಈ ವಾತ್ಸಲ್ಯವು—ಯಾವುದೋ ಒಂದು ವಿಧದ ವೃತ್ತಿ ಯಲ್ಲಿ ಮಾತ್ರವಲ್ಲ,—ಎಲ್ಲ ವಿಧಗಳಲ್ಲಿಯೂ ತೋರ್ಪಡಲು ಪ್ರಯತ್ನಿ ಸುತ್ತದೆ. ಅದು ಮನುಷ್ಯನ ಅಂತರಂಗದಲ್ಲೆಲ್ಲಾ ಹೊಕ್ಕು, ಅವನನ್ನು ಎಲ್ಲ ರೀತಿಗಳಲ್ಲಿಯೂ ಉತ್ತಮನೆನಿಸಿದ ಹೊರತು ಸುಮ್ಮನಾಗದು. ಈ ಸ್ವದೇಶೀ ಮತವು ಈಗ ನಮ್ಮ ದೇಶದಲ್ಲಿ ಸ್ಥಿರವಾಗಿ ನೆಲೆಗೊಳ್ಳತಕ್ಕುದಾಗಿದೆ. ನಮ್ಮಲ್ಲಿ ಇತರ ಬಗೆಯ ಸಮಾರಂಭಗಳು ಆಗಾಗ ತಲೆದೋರಿ, ಸ್ವಲ್ಪಕಾಲ ಗದ್ದಲಮಾಡಿ, ತರುವಾಯ ಯಾವ ಗುರುತನ್ನೂ ಹಿಂದೆ ಬಿಡದೆ ಮಾಯ ವಾಗಿವೆ. ಸ್ವದೇಶೀ ಸಮಾರಂಭವು ಆ ಬಗೆಯದಲ್ಲವೆಂದು ಧೈರ್ಯದಿಂದ ಹೇಳಬಹುದಾಗಿ ನನಗೆ ತೋರುತ್ತದೆ. ನಮ್ಮ ಇಂಡಿಯಾ ದೇಶದ ನಿಜವಾದ ದುಃಖನಿವಾರಣೆಯು ಈ ಸಮಾರಂಭದಿಂದಲೇ ಆಗಬೇಕಾಗಿದೆಯೆಂದು ನನ್ನ ದೃಢವಾದ ನಂಬಿಕೆ.

ಮಹಾಶಯರೆ,—ಹಿಂದೆ ಮ|| ರಾನಡೆಯವರು ಹೇಳಿದ ಹಾಗೆ,— ರಾಜಕೀಯ ವಿಷಯಗಳಲ್ಲಿ ವಿದೇಶೀಯರಿಗಿರುವ ಪ್ರಾಬಲ್ಯವು ನಮ್ಮ ಗಮನವನ್ನಾಕರ್ಷಿಸುವ ರೀತಿಯಲ್ಲಿ, ಯಂತ್ರ ಕರ್ಮ ವ್ಯಾಪಾರಗಳಲ್ಲಿ ಅವರಿಗಿರುವ ಪ್ರಾಬಲ್ಯವು ನಮ್ಮ ಗಮನವನ್ನಾಕರ್ಷಿಸುತ್ತಿಲ್ಲ. ಈ

ಸಂಪತ್ಸಂಬಂಧಿಯಾದ ಪರಕೀಯ ಪ್ರಾಬಲ್ಯವು ಕಣ್ಣಿಗೆ ಅಷ್ಟಾಗಿ ಕಾಣ ತಕ್ಕುದಲ್ಲ; ಅದು ಗೂಢವಾಗಿ ಕೆಲಸ ಮಾಡುತ್ತದೆ. ನಮ್ಮ ರಾಜಕೀಯ ಪಾರವಶ್ಯದ ಕಷ್ಟಗಳು ಸುಲಭವಾಗಿ ಕಾಣಬರುತ್ತವೆ; ಪರದೇಶದವರು ಎಲ್ಲಾ ವಿಧದ ಅಧಿಕಾರವನ್ನೂ ತಮ್ಮ ಕೈಯಲ್ಲುಳಿಸಿಕೊಂಡು, ಈ ದೇಶದ ಜನರನ್ನು ತಮ್ಮ ಅಧೀನದಲ್ಲಿಟ್ಟುಕೊಂಡಿರುವುದನ್ನು ಕಣ್ಣಾರ ನೋಡು ತ್ತೇವೆ. ಈ ಸಂಗತಿಗಳನ್ನು ಪ್ರತಿದಿನವೂ ಗಮನಿಸಿ ಅನುಭವಿಸುತ್ತಿದ್ದೇವೆ. ನಮ್ಮ ಸಂಪತ್ಸಂಬಂಧವಾದ ಪರಾಧೀನತೆಯಾದರೋ, ಅತಿ ಮೋಹಕವಾದ ರೂಪದಲ್ಲಿ ನಮಗೆ ಬಂದಿದೆ. ನಮ್ಮ ಇಂಡಿಯದಲ್ಲಿ ಈಗ ಇರುವ ಹಾಗೆ, ಹಸನಾದ ಪದಾರ್ಥಗಳ ಮೂಲಕ—ತತ್ರಾಪಿ ಜನರಿಗೆ ದಿನಂಪ್ರತಿ ಬೇಕಾ ಗುವ ಪದಾರ್ಥಗಳ ಮೂಲಕ,—ವಿದೇಶೀಯ ಪ್ರಾಬಲ್ಯವು ಬಂದರೆ, ಜನರು ಆ ಪ್ರಾಬಲ್ಯದ ಗುರುತನ್ನರಿಯಲಾರದೆಯೇ ಅದನ್ನು ಬರಮಾಡಿಕೊಂಡು, ಅದರ ಪಾಶಕ್ಕೆ ಸಿಕ್ಕುವರು. ಈ ದುರವಸ್ಥೆಯು ಮಿತಿಮೀರಿದಾಗ ಹೊರತು, ಮಿಕ್ಕ ಕಾಲದಲ್ಲಿ ಅದರ ಕಡೆಗೆ ಜನರ ಗಮನವು ಹೋಗದು.

ಇಂಗ್ಲೀಷರು ಇಂಡಿಯದಲ್ಲಿ ಅವಲಂಬಿಸಿರುವ ರಾಜ್ಯತಂತ್ರದ ಕಾರಣದಿಂದ, ನಮ್ಮಲ್ಲಿಗೆ ಪರದೇಶದ ವಸ್ತುಗಳ ಆಮದು ಕ್ರಮೇಣ ಬೆಳೆದು, ಈಗ ನಮ್ಮ ದೇಶವು ಇತರ ಪ್ರತಿಯೊಂದು ದೇಶಕ್ಕಿಂತಲೂ ಹೆಚ್ಚಾಗಿ ವಿದೇಶೀಯ ಕಾರ್ಖಾನೆ ಕೈಗಾರಿಕೆಗಳನ್ನು ನಂಬಿಕೊಂಡಿರ ಬೇಕಾಗಿದೆ. ನಾವು ಹೊರಗಡೆಗೆ ರಫ್ತುಮಾಡುವ ಪದಾರ್ಥಗಳಲ್ಲಿ ಶೇಕಡಾ ಸುಮಾರು ೭೦ ಭಾಗವು ಭೂಮಿಯಿಂದ ಬೆಳೆದು ಬಂದು, ಹಸನು ಮಾಡಲ್ಪಡದಿರುವ, ಕಚ್ಚಾ ಸರಕು. ಈ ಕಚ್ಚಾ ಸರಕಿನಿಂದ ಪಕ್ಕಾ ಸಾಮಾನುಗಳನ್ನು ತಯಾರುಮಾಡುವುದಕ್ಕೆ ಬೇಕಾದ ಕುಶಲತೆಯೂ, ವ್ಯಾಪಾರೋತ್ಸಾಹವೂ, ಬಂಡವಾಳವೂ, ಜನಸಹಾಯವೂ ನಮಗಿದ್ದಿದ್ದರೆ ಎಷ್ಟೋ ಕಸಬು ಕೈಗಾರಿಕೆಗಳು ಈ ದೇಶದಲ್ಲಿ ಅಭಿವೃದ್ಧಿ ಹೊಂದಬಹು ದಾಗಿತ್ತು. ಆದರೆ ಈಗ ನಮ್ಮ ಕಚ್ಚಾ ಸರಕುಗಳು ಹೊರಗೆ ಹೋಗಿ, ಪಕ್ಕಾ ಸಾಮಾನುಗಳ ರೂಪದಲ್ಲಿ ಹೆಚ್ಚು ಬೆಲೆಯುಳ್ಳವಾಗಿ, ನಮ್ಮಲ್ಲಿಗೇ ವಾಪಸು ಬರುತ್ತಿವೆ. . . . . . .

ನಮ್ಮ ಸಂಪದಭಿವೃದ್ಧಿಗೆ ಈಗ ಇರುವ ಬಾಧಕಗಳಲ್ಲಿ ಮುಖ್ಯ ವಾದುವು ಯಾವುವು ? ಮೊದಲನೆಯದು,—ಪ್ರಪಂಚದ ಕಸಬು ಕೈಗಾರಿಕೆ ಗಳ ಈಗಿನ ಸ್ಥಿತಿಯ ವಿಷಯವಾಗಿ ನಮ್ಮ ದೇಶದಲ್ಲಿ ಎತ್ತೆತ್ತಲೂ ಇರುವ ಅಜ್ಞಾನ. ನಮ್ಮ ಸ್ಥಿತಿಯನ್ನು ಇತರರ ಸ್ಥಿತಿಯೊಡನೆ ಹೋಲಿಸಿ ನೋಡಿದರೆ ನಾವೇನಾಗಿದ್ದೇವೆ? ನಾವು ಹೀಗಿರುವುದಕ್ಕೂ ಅವರು ಹಾಗಿರುವುದಕ್ಕೂ ಕಾರಣವೇನು?—ಎಂಬ ವಿಚಾರಗಳು ನಮ್ಮಲ್ಲಿ ಕೆಲ ಮಂದಿಯ ವಿನಾ ಯಾರಿಗೂ ಗೊತ್ತಿಲ್ಲ. ಎರಡನೆಯದು,—ನಮ್ಮಲ್ಲಿ ಇರುವ ಬಂಡವಾಳ ಕಡಮೆ ; ಇರುವ ಅಲ್ಪಸ್ವಲ್ಪವೂ ಹೊರಗೆ ಬರುವುದು ಕಷ್ಟ. ಕಾರ್ಖಾನೆಗಳ ಏರ್ಪಾಟಿಗಾಗಿ ಜನರು ಅನ್ಯೋನ್ಯಭಾವದಿಂದ ಒಟ್ಟುಗೂಡಲು ಒಬ್ಬರಲ್ಲೊಬ್ಬರಿಗೆ ನಂಬುಗೆ ಸಾಲದು. ಆದಕಾರಣ ಪಾಲು ವ್ಯಾಪಾರದ ಪದ್ಧತಿ ಬೇರೂರಿಲ್ಲ. ಮೂರನೆಯದು,—ಕೈಗಾರಿಕೆ ಕುಶಲವಿದ್ಯೆಗಳಿಗೆ ಬೇಕಾದ ವಿಜ್ಞಾನಾಭ್ಯಾಸಕ್ಕೂ ಪ್ರಯೋಗ ಪರೀಕ್ಷೆ ಗಳಿಗೂ ಈ ದೇಶದಲ್ಲಿ ಅನುಕೂಲ್ಯಗಳು ಸಾಲವು. ನಾಲ್ಕನೆಯದು,— ಇಷ್ಟು ಬಗೆಯ ಕಷ್ಟಗಳಿದ್ದರೂ ಅವುಗಳಿಗೆ ಹೆದರದೆ, ಹೊಸ ಸಾಮಾನು ಗಳಾವುವನ್ನಾದರೂ ನಮ್ಮವರು ತಯಾರುಮಾಡಿದರೆ, ಅವು ಪ್ರಪಂಚದ ಇತರ ಎಲ್ಲಾ ಭಾಗಗಳಲ್ಲಿಯೂ ತಯಾರಾದ ಸಾಮಾನುಗಳೊಡನೆ ಪೋಟಾ ಪೋಟಿಗೆ ನಿಲ್ಲಬೇಕಾಗಿದೆ. ನಮ್ಮ ಸಾಮಾನುಗಳು ಪ್ರಾರಂಭದಶೆಯಲ್ಲಿ ಅಷ್ಟು ವಿಶೇಷ ನಯವಿಲ್ಲದೆಯೂ, ಬೆಲೆ ಸ್ವಲ್ಪ ಹೆಚ್ಚಾದುವಾಗಿಯೂ ಇರುವ ಕಾರಣ ಅವುಗಳ ಮಾರಾಟವು ಸುಲಭವಲ್ಲ. ಈ ರೀತಿ ನಮ್ಮ ಕಷ್ಟಗಳು ಬಹು ವಿಧವಾಗಿರುವುದರಿಂದ, ಸ್ವದೇಶೀ ಪ್ರಯತ್ನಕ್ಕೆ ಆಗ ಬೇಕಾದ ಸಹಾಯವು ಬಹು ವಿಧವಾಗಿರುವುದು. ಪ್ರಪಂಚದ ಇತರ ಭಾಗಗಳಲ್ಲಿ ಕಸಬು ಕೈಗಾರಿಕೆಗಳು ಹೇಗಿವೆಯೆಂಬುದನ್ನೂ, ಈ ದೇಶವು ಮುಂಬರಿಯಬೇಕಾದರೆ ಏನೇನು ಮಾಡಬೇಕೆಂಬುದನ್ನೂ ನಮ್ಮ ಜನರಿಗೆ ತಿಳಿಸಲು ಯಾರು ಯತ್ನಿಸುವನೋ ಆತನು ಸ್ವದೇಶೀ ಸಮಾರಂಭಕ್ಕೆ ಸಹಾಯಕನಾದವನು. ದೇಶದ ಕಸಬು ಕೈಗಾರಿಕೆಗಳ ಅಭಿವೃದ್ಧಿಗೆ ಯಾರು ಬಂಡವಾಳವನ್ನೊದಗಿಸುವನೋ ಆತನು ಸ್ವದೇಶೀ ಸಮಾರಂಭಕ್ಕೆ ಸಹಾ

ಯಕನಾದವನು. ಈ ದೇಶದ ವಿದ್ಯಾರ್ಥಿಗಳನ್ನು ವಿಜ್ಞಾನಶಾಸ್ತ್ರಾಭ್ಯಾಸಕ್ಕಾಗಿಯೂ ಕೈಗಾರಿಕೆಗಳನ್ನು ಕಲಿಯುವುದಕ್ಕಾಗಿಯೂ ಪರದೇಶಗಳಿಗೆ ಕಳುಹಿಸಲು ಯಾರು ಹಣವನ್ನು ಕೊಡುತ್ತಾರೆಯೋ, ಅಥವಾ ಯಾರು ತಾವೇ ಪರದೇಶಗಳಿಗೆ ಹೋಗಿಬಂದು ಈ ದೇಶದಲ್ಲಿ ಕಾರ್ಖಾನೆ ಕೈಗಾರಿಕೆಗಳನ್ನು ಸ್ಥಾಪಿಸುತ್ತಾರೆಯೋ, ಅವರೂ ಸ್ವದೇಶೀ ಸಮಾರಂಭಕ್ಕೆ ಸಹಾಯಕರಾದವರು. ಈ ಮೂರು ಬಗೆಗಳಲ್ಲಿಯೂ ಸ್ವದೇಶೀ ಪ್ರಯತ್ನಕ್ಕೆ ಸಹಾಯಮಾಡಬಲ್ಲವರು ಕೆಲ ಕೆಲವು ಮಂದಿ. ನಾವೆಲ್ಲರೂ ಸಹಾಯ ಮಾಡಲು ಸಾಧ್ಯವಾದ ನಾಲ್ಕನೆಯ ದಾರಿಯೂ ಒಂದುಂಟು. ಅದಾವುದೆಂದರೆ, ನಾವೆಲ್ಲರೂ ಸಾಧ್ಯವಾದ ಮಟ್ಟಿಗೂ ಸ್ವದೇಶೀ ವಸ್ತುಗಳನ್ನೇ ಉಪಯೋಗಿಸಿ, ಇತರರೂ ಹಾಗೆಯೇ ಮಾಡಬೇಕೆಂದು ಬೋಧಿಸುವುದು. ಇದರಿಂದ ಈ ದೇಶದಲ್ಲಿ ತಯಾರಾದ ಸಾಮಾನುಗಳಿಗೆ ಗಿರಾಕಿಯುಂಟಾಗಿ, ಹೊಸ ಹೊಸ ಕಸಬು ಕೈಗಾರಿಕೆಗಳು ಹುಟ್ಟಲು ಅವಕಾಶವಾಗುವುದು. . . . ಕಾಲಕ್ರಮದಲ್ಲಿ ಸ್ವದೇಶೀ ವಸ್ತುಗಳ ಹದವು ಉತ್ತಮವಾಗಿ, ಅವುಗಳ ಬೆಲೆಯು ಇಳಿಯುವುದು ಖಂಡಿತ. ಅವು ಗುಣದಲ್ಲಿಯೂ ಕ್ರಯದಲ್ಲಿಯೂ ವಿದೇಶೀ ವಸ್ತುಗಳಿಗೆ ಸಮನಾದಂದಿಗೆ ಅವುಗಳನ್ನು ಕೊಂಡುಕೊಳ್ಳೋಣ—ಎಂದರೆ, ಅದರಲ್ಲಿ ದೇಶಾಭಿಮಾನವೇನಿದೆ? ದೇಶೀಯ ವಸ್ತುಗಳ ಅಂದವು ಕಡಿಮೆಯಾಗಿ, ಬೆಲೆಯು ಹೆಚ್ಚಾಗಿರುವಾಗ ಅವುಗಳನ್ನು ಆದರಿಸಿದರೆ ತಾನೆ ಸ್ವದೇಶದ ಕಸಬು ಕೈಗಾರಿಕೆಗಳಿಗೆ ಆವಶ್ಯಕವಾದ ವಿಶೇಷ ಪ್ರೋತ್ಸಾಹವೂ ಸಂರಕ್ಷಣೆಯೂ ದೊರೆಯುವುದು? ಆದಕಾರಣ ಯಾರು ಸ್ವದೇಶೀ ವಸ್ತು ಸ್ವೀಕಾರವನ್ನು ಜನರಿಗೆ ಬೋಧಿಸುತ್ತಿದಾರೆಯೋ ಅವರು ಪುಣ್ಯ ಕೆಲಸವನ್ನು ಮಾಡುತ್ತಿದಾರೆ. ಅವರಿಗೆ ನಾನು ಹೇಳುವುದೇನೆಂದರೆ:—ಧೈರ್ಯದಿಂದ ಮುಂದೆ ನಡೆಯಿರಿ; ನಿಮ್ಮ ತತ್ತ್ವವನ್ನು ಉತ್ಸಾಹದಿಂದ ಉಪದೇಶಿಸಿರಿ.

---

## ವಿದ್ಯಾರ್ಥಿಗಳಿಗೆ ಹಿತೋಕ್ತಿ

ಗೋಖಲೆಯವರಿಗೆ ವಿದ್ಯಾರ್ಥಿಗಳಲ್ಲಿ ತುಂಬಾ ಮಮತೆ. ಅದರಂತೆಯೇ ವಿದ್ಯಾರ್ಥಿಗಳಿಗೂ ಗೋಖಲೆಯವರಲ್ಲಿ ಅತಿಶಯವಾದ ವಿಶ್ವಾಸಗೌರವಗಳಿದ್ದುವು. ಇಂಡಿಯಾ ದೇಶದ ನಾನಾ ಭಾಗಗಳಿಂದಲೂ ವಿದ್ಯಾರ್ಥಿದಶೆಯಲ್ಲಿದ್ದ ತರುಣರು ಅವರಿಗೆ ಕಾಗದ ಬರೆದು, ತಮ್ಮ ತಮ್ಮ ಚಿಂತೆಗಳನ್ನೂ, ಕಷ್ಟಗಳನ್ನೂ, ಸಂಕಲ್ಪಗಳನ್ನೂ ತಿಳಿಯಪಡಿಸಿ, ತಕ್ಕ ಬುದ್ಧಿವಾದವನ್ನು ಬೇಡುತ್ತಿದ್ದರು. ಈ ಕೋರಿಕೆಗಳನ್ನು ಗೋಖಲೆಯವರು ಶ್ರದ್ಧೆಯಿಂದ ವಿಚಾರಿಸಿ, ಆ ಬಾಲಕರಿಗೆ ಪ್ರೋತ್ಸಾಹಕರವೂ ಶ್ರೇಯಸ್ಕರವೂ ಆದ ರೀತಿಯಲ್ಲಿ ನೀತಿಗಳನ್ನು ಉಪದೇಶಿಸುತ್ತಿದ್ದರು. ಬಳಿಗೆ ಬಂದ ಹುಡುಗರನ್ನೆಲ್ಲಾ ಶ್ರದ್ಧೆಯಿಂದ ಮಾತನಾಡಿಸಿ, ವಿದ್ಯಾಭಿಲಾಷೆಯನ್ನು ಅವರಲ್ಲಿ ಮತ್ತಷ್ಟು ವೃದ್ಧಿಗೊಳಿಸಿ,—ದೇಶವನ್ನು ಮುಂದಕ್ಕೆ ತಂದು ಅದರ ಕೀರ್ತಿಯನ್ನು ಹೆಚ್ಚಿಸುವ ಭಾರವು ಆ ಹುಡುಗರಿಗೇ ಸೇರಿದುದೆಂದು ಗೋಖಲೆಯವರು ಬೇಸರವಿಲ್ಲದೆ ಬೋಧಿಸುತ್ತಿದ್ದರು. ೧೯೦೪ನೆಯ ಇಸವಿ ಜುಲೈ ೨೮ನೆಯ ತಾರೀಖು ಗುರುವಾರ ಮದ್ರಾಸಿನಲ್ಲಿ ಪಚ್ಚಿಯಪ್ಪನವರ ಕಾಲೇಜಿನ ವಿದ್ಯಾರ್ಥಿಗಳು ಅರ್ಪಿಸಿದ ಸನ್ಮಾನ ಪತ್ರಿಕೆಗೆ ಉತ್ತರವಾಗಿ ಗೋಖಲೆಯವರು ಅಪ್ಪಣೆಕೊಡಿಸಿದ ಉಪನ್ಯಾಸದಿಂದ ಈ ಕೆಳಗಣ ಹಿತವಾಕ್ಯಗಳನ್ನಾರಿಸಿರುವೆವು :—

ನನ್ನ ಜೀವಿತದಲ್ಲಿ ಕಳೆದ ಇಪ್ಪತ್ತು ವರ್ಷಗಳ ಬಹು ಭಾಗವನ್ನು ವಿದ್ಯಾರ್ಥಿಗಳ ಸಹವಾಸದಲ್ಲಿಯೇ ಕಳೆದಿರುವೆನು. ನನಗೆ ಆಗಿರುವ ಅತ್ಯಧಿಕವಾದ ಸುಖಾನುಭವಗಳೆಲ್ಲಾ ಅವರೊಡನೆ ಇದ್ದಾಗ ದೊರೆತುವು. ನಾನು ಮಾಡಿರುವ ಕಾರ್ಯಕಲಾಪವೆಂತಹುದಾದರೂ ಆಗಲಿ, ಅದರಲ್ಲಿ ಅತ್ಯುತ್ತಮವಾದುದೆಲ್ಲಾ ಅವರ ಹಿತಕ್ಕಾಗಿ ಮಾಡಲ್ಪಟ್ಟುದು. ಈ ನಮ್ಮ ಮಾತೃಭೂಮಿಯ ಪುರೋವೃದ್ಧಿಯ ವಿಷಯದಲ್ಲಿ ನಾನಿಟ್ಟುಕೊಂಡಿರುವ ಆಶೆಗಳೆಲ್ಲಕ್ಕೂ ಅವರೇ ಆಧಾರವಾಗಿರುವರು. ಆದಕಾರಣ ವಿದ್ಯಾರ್ಥಿಗಳೊಡನೆ ಸಮಾಗಮವಾಗುವ ಸಂದರ್ಭವು ದೊರೆತಾಗ ನಾನು ಸಂತೋಷಿಸುವುದು ಸ್ವಾಭಾವಿಕವಾಗಿಯೇ ಇದೆ.

ಶಾಸ್ತ್ರಪರಿಶೋಧನೆಗೂ ಪಾಂಡಿತ್ಯ ಸಂಪಾದನೆಗೂ ತಮ್ಮ ಜೀವಮಾನವನ್ನೆಲ್ಲ ವಿನಿಯೋಗಿಸುವಂತಹ ವಿದ್ಯಾವಂತರನ್ನು ತಯಾರುಮಾಡುವುದು ''ಯೂನಿವರ್ಸಿಟಿ'' ಅಥವಾ ವಿಶ್ವವಿದ್ಯಾಪೀಠಗಳ ಪ್ರಥಮೋದ್ದೇಶ್ಯವಾಗಿರಬೇಕೆಂದು ಎಲ್ಲರೂ ಒಪ್ಪಿರುವರು............ಆದರೆ ವಿಶ್ವವಿದ್ಯಾಲಯ

ಗಳಲ್ಲೋದಿದವರು ಮಾಡಬೇಕಾದ ಕರ್ತವ್ಯವಿನ್ನೊಂದುಂಟು. ಇದು ಬರಿಯ ನೋಟಕ್ಕೆ ಮೇಲೆ ಹೇಳಿದ ಕರ್ತವ್ಯದಷ್ಟು ಘನತೆಯುಳ್ಳದಾಗಿ ಕಾಣಬಾರದಿದ್ದರೂ, ದೇಶಾಭ್ಯುದಯ ದೃಷ್ಟಿಯಿಂದ ನೋಡಿದರೆ ಅದಕ್ಕಿಂತಲೂ ಇದು ಪ್ರಯೋಜಕತೆಯಲ್ಲಿ ಕಡಮೆಯದೇನೂ ಅಲ್ಲ. ಯೂನಿವರ್ಸಿಟಿ (ವಿಶ್ವವಿದ್ಯಾಲಯ) ಗಳು ನಿಮಗೆ ಕೊಡುತ್ತಿರುವ ನೂತನ ವಿದ್ಯೆಯು ನಿಮ್ಮಗಳ ಜೀವಮಾನದಲ್ಲಿ ಒಂದು ಹೊಸ ತತ್ತ್ವವೆಂದು ನೀವು ಒಪ್ಪಿ, ಅದರಿಂದ ಬರುವ ಶ್ರೇಷ್ಠತರವಾದ ಪ್ರೇರಣೆಗಳನ್ನು ಅಂಗೀಕರಿಸ ಬೇಕು. ಹಾಗೆಂದಮೇಲೆ—ನಿಮ್ಮ ವಿದ್ಯಾಭ್ಯಾಸವು "ಕಾಲೇಜನ್ನು" ಬಿಟ್ಟೊಡನೆಯೇ ಮುಗಿಯಕೂಡದೆಂದು ಅರ್ಥವಾಯಿತು. ವಿದ್ಯೆಯ ಪ್ರೇರಣೆಯು ಶ್ರೇಷ್ಠತರವಾದುದೆಂದು ನೀವು ಒಪ್ಪಿಕೊಂಡಮೇಲೆ, ಆ ವಿದ್ಯೆಯು ನಿಮಗೆ ಎಂದಿಗೂ ಬೇಡವಾಗಕೂಡದು. ನಮ್ಮ ದೇಶದ ತರುಣರು 'ಕಾಲೇಜನ್ನು' ಬಿಟ್ಟೊಡನೆಯೇ ಅವರ ವಿದ್ಯಾವ್ಯಾಸಂಗವು ಅವರನ್ನು ಬಿಟ್ಟುಹೋಗುವುದೆಂದು ಆಗಾಗ ನಮ್ಮನ್ನು ಇತರರು ಆಕ್ಷೇಪಿಸುವುದುಂಟು; ಅದಕ್ಕೆ ಕಾರಣವೂ ಉಂಟು. ಆ ಆಕ್ಷೇಪಣೆಯನ್ನು ಪರಿಹಾರಮಾಡಲು ನೀವುಗಳು ಪ್ರಯತ್ನಿಸಬೇಕು. ಹಾಗೆ ಮಾಡಿದರೆ ನೀವು ಮತ್ತುಷ್ಟು ವಿದ್ಯಾವಂತರೂ ಚತುರರೂ ಆಗಿ, ನಿಮ್ಮ ನಿಮ್ಮ ವೃತ್ತಿಗಳನ್ನು ನೆರವೇರಿಸಲು ಹೆಚ್ಚು ಅರ್ಹತೆಯನ್ನು ಸಂಪಾದಿಸಿಕೊಳ್ಳುವಿರಿ.

ಈಗ ಎತ್ತ ನೋಡಿದರೂ ಕರ್ತವ್ಯಗಳು ನಿಮಗಾಗಿ ಕಾದು ಕೊಂಡಿವೆ. ಈ ಪುರಾತನ ಭೂಮಿಯಲ್ಲಿ ನೀವು ಮಾಡಬೇಕಾದ ಕೆಲಸ ಗಳೆಷ್ಟೋ ಇವೆ: (೧) ಅಜ್ಞಾನದಲ್ಲಿಯೂ ಮೌಢ್ಯದಲ್ಲಿಯೂ ಮುಳುಗಿರುವ ಸಾಮಾನ್ಯ ಜನಸಮುದಾಯದ ಏಳಿಗೆಗೋಸ್ಕರ ನೀವು ಶ್ರಮಪಡಬೇಕಾ ಗಿದೆ. (೨) ನಮ್ಮ ಸೋದರೀಮಣಿಯರ ಉನ್ನತಿಗೋಸ್ಕರ ನೀವು ಯತ್ನಿಸಬೇಕಾಗಿದೆ. ದೇಶದ ಪ್ರಜಾ ಸಮೂಹದಲ್ಲಿ ಅರ್ಧಭಾಗವಾದ ಸ್ತ್ರೀಜನರು ಬುದ್ಧಿವ್ಯಾಪಾರದಿಂದ ದೂರವಾಗಿರುವುದು ಯಾವ ದೇಶಕ್ಕೂ ಹಿತಕರವಲ್ಲ. (೩) ನಮ್ಮ ಮತಧರ್ಮಗಳಲ್ಲಿ ಅನೇಕ ಸಂಪ್ರದಾಯಗಳು ಬಾಹ್ಯರೂಪದಲ್ಲಿ ಮಾತ್ರ ನಿಂತು, ಅವುಗಳ ಅಂತಸ್ತತ್ತ್ವವು ಲುಪ್ತ

ವಾಗಿದೆ. ಈ ಭಾಗದಲ್ಲಿಯೂ ಮಾಡಬೇಕಾದ ಕೆಲಸವಿದೆಯೆಂದು ನೀವು ತಿಳಿಯಬೇಕು. (೪) ಮೇಲಾಗಿ, ರಾಜಕೀಯದಲ್ಲಿ ದೇಶವೆಲ್ಲವೂ ಹೀನಸ್ಥಿತಿಯಲ್ಲಿದೆ. ಅದನ್ನು ಸರಿಪಡಿಸುವುದಕ್ಕಾಗಿ ತುಂಬಾ ಕಷ್ಟಪಡಬೇಕು. ಮತ್ತು (೫) ದೇಶದ ಕೈಗಾರಿಕೆ ಕುಶಲವಿದ್ಯೆಗಳ ಅಭಿವೃದ್ಧಿಗೂ ಅತಿ ತೀವ್ರವಾಗಿ ಗಮನಕೊಡುವುದು ಅವಶ್ಯಕ. ಹೀಗೆ ನಾನಾಭಾಗಗಳಲ್ಲಿ ನೀವು ನೆರವೇರಿಸಬೇಕಾದ ಕರ್ತವ್ಯಗಳಿವೆ. ಈ ಕರ್ತವ್ಯಗಳನ್ನು ನೀವು ವಿದ್ಯಾರ್ಥಿ ದಶೆಯನ್ನು ಬಿಟ್ಟು ಸಂಸಾರಿಗಳಾದೊಡನೆಯೇ ಕೈಗೊಳ್ಳಬೇಕು.

ಲೋಕದಲ್ಲಿ ಪ್ರಸಿದ್ಧಿಗೆ ಬಂದವರು ಮಾತ್ರವೇ ಪರೋಪಕಾರಿಗಳಾಗಿ ಜೀವಿಸಲರ್ಹರೆಂದು ನಾವು ಭಾವಿಸುವುದುಂಟು. ಅದು ತಪ್ಪು. ದೇಶದ ಘನತೆಯು ಅದರ ಸಾಮಾನ್ಯ ಜನರ ಯೋಗ್ಯತೆಗೆ ಅನುರೂಪವಾಗಿರುತ್ತದೆ. ಕೆಲವು ವರ್ಷಗಳ ಹಿಂದೆ ನಾನು ಇಂಗ್ಲೆಂಡಿಗೆ ಹೋಗಿದ್ದೆ. ಅಲ್ಲಿ ಮಹಾ ರಾಜ್ಯತಂತ್ರವಿಶಾರದರೂ, ಮಹಾ ವೀರರೂ, ಮಹಾ ಪಂಡಿತರೂ, ಮಹಾ ಧನಿಕರೂ ಇದ್ದುದೇನೋ ಸರಿ. ಆದರೆ ಇಂಗ್ಲೆಂಡು ದೇಶದ ಮಹತ್ತ್ವಕ್ಕೆ, ಅಲ್ಲಿಯ ಸಾಮಾನ್ಯ ಸ್ತ್ರೀಪುರುಷರಲ್ಲಿ ಕರ್ಮ ಶ್ರದ್ಧೆ, ಕರ್ತವ್ಯಜ್ಞಾನ, ದೇಶ ಸೇವಾ ನಿರತತೆ—ಇವು ಇಲ್ಲಿ ನಮ್ಮಲ್ಲಿರುವುದಕ್ಕಿಂತಲೂ ಹೆಚ್ಚಾಗಿದ್ದುದೇ ಕಾರಣವೆಂದು ನನಗೆ ಗೊತ್ತಾಯಿತು. ಸಾಧಾರಣ ಗಂಡಸರು ಹೆಂಗಸರುಗಳ ಮನೋವೃತ್ತಿ, ಅವರ ಶೀಲ, ಅವರ ಜೀವನಕ್ರಮ—ಇವುಗಳಿಂದಲೇ ದೇಶದ ಬಲಾಬಲಗಳು ಉಂಟಾಗುವುದು. ಶಾಸ್ತ್ರ ಪರಿಶೋಧನೆಯಿಂದಲೂ ಪಾಂಡಿತ್ಯ ವಿಶೇಷದಿಂದಲೂ ಪ್ರಪಂಚದ ಜ್ಞಾನ ಭಾಂಡಾಗಾರವನ್ನು ವೃದ್ಧಿಗೊಳಿಸುವ ಪುಣ್ಯವು ನಿಮಗೆ ದೊರೆಯದೆ ಇರಬಹುದು. ಆದರೆ ನೀವು ಪಡೆದಿರುವ ವಿದ್ಯೆಯ ಮಹಿಮೆಯಿಂದ, ಇತರರಿಗಿಂತಲೂ ಉತ್ತಮವಾದ ಮತ್ತು ಸಾರ್ಥಕವಾದ ರೀತಿಯಲ್ಲಿ ಬದುಕುವುದು ನಿಮ್ಮಲ್ಲಿ ಪ್ರತಿಯೊಬ್ಬನಿಗೂ ಸಾಧ್ಯವು. ನೀವು ಅಷ್ಟುಮಾತ್ರ ಮಾಡಿದರೆ, ಅದು ನಿಮ್ಮ ತರುವಾಯ ಬದುಕುವವರಿಗೆ ಮೇಲ್ಪಂಕ್ತಿಯಾಗಿ, ಆ ಮೂಲಕ ನಮ್ಮ ಜನಪದದ ನೀತಿಶಕ್ತಿಯು ವೃದ್ಧಿಹೊಂದುವುದು.

ಆದಕಾರಣ ಪ್ರತಿಯೊಬ್ಬ ವಿದ್ಯಾವಂತನೂ (೧) ತಾನು ಪಾಠಶಾಲೆಯನ್ನು ಬಿಟ್ಟಮೇಲೆಯೂ ಗ್ರಂಥಕಾಲಕ್ಷೇಪವನ್ನಿಟ್ಟುಕೊಳ್ಳುವುದರಿಂದಲೂ, (೨) ಮೇಲೆ ವಿವರಿಸಿದ (ಐದು) ಮಾರ್ಗಗಳ ಪೈಕಿ ಯಾವುದರಲ್ಲಾದರೂ ಸ್ವಜನ ಸೇವೆಯನ್ನು ಮಾಡುವುದರಿಂದಲೂ, (೩) ತನ್ನ ಸ್ವಂತ ಜೀವನ ಕ್ರಮದಲ್ಲಿ ಇತರರಿಗಿಂತಲೂ ನೀತಿವಂತನಾಗಿಯೂ ದೃಢವ್ರತನಾಗಿಯೂ ಕರ್ತವ್ಯಜ್ಞಾನವುಳ್ಳವನಾಗಿಯೂ ಇರುವುದರಿಂದಲೂ, ತನ್ನ ವಿದ್ಯೆಯನ್ನು ಸಾರ್ಥಕಗೊಳಿಸಬಹುದೆಂಬ ಅಂಶವನ್ನು ನೀವುಗಳು ಜ್ಞಾಪಕದಲ್ಲಿಡಬೇಕೆಂಬುದು ನನ್ನ ಕೋರಿಕೆ.

ಮಹಾಶಯರೆ, ಮಾತಿನಿಂದ ಕಾಲಹರಣೆ ಮಾಡುವುದು ನನ್ನ ಅಭಿಪ್ರಾಯವಲ್ಲ. ನಾವುಗಳೆಲ್ಲರೂ ಈಗ ಒಂದು ನೂತನ ದಿವಸದ ಅರುಣೋದಯ ವೇಳೆಯಲ್ಲಿದ್ದೇವೆ. ಇದರ ಮಧ್ಯಾಹ್ನವು ಹೇಗೆ, ಅಥವಾ ಎಷ್ಟು ಹೊತ್ತಿಗೆ, ಆದೀತೆಂಬುದನ್ನು ಯಾರೂ ಹೇಳಲಾರರು. ಆದರೆ ಈ ಸುದಿನದ ಪ್ರಾತಃಪ್ರಭೆಯನ್ನು ನೋಡುವಂತಾಗಿರುವುದೇ ಒಂದು ಭಾಗ್ಯವಿಶೇಷ. ಸರ್ವಜ್ಞನೂ ದಯಾಮಯನೂ ಆದ ಪರಮೇಶ್ವರನ ಆಜ್ಞೆಯಾದಂತೆ ನಾವು ಶಿಕ್ಷಣಾನುಭವ ಹೊಂದಿದ ಹಾಗೆಲ್ಲಾ ನಮಗೆ ಆ ಶುಭ ದಿನದ ಸಂದರ್ಶನವು ಹೆಚ್ಚು ಹೆಚ್ಚಾಗಿ ಲಭಿಸೀತೆಂದು ನಾನು ನಂಬಿದ್ದೇನೆ.

---

## ಅಂತ್ಯಜಾತಿಗಳವರ ಉದ್ಧಾರ

೧೯೦೩ನೆಯ ಇಸವಿ ಏಪ್ರಿಲ್ ೨೭ರಲ್ಲಿ ಧಾರವಾಡದ ಸಮಾಜ ಸಂಸ್ಕರಣ ಸಭೆಯಲ್ಲಿ ಗೋಖಲೆಯವರು ಈ ರೀತಿ ಭಾಷಣಮಾಡಿದರು :—

ಸಭಾಧ್ಯಕ್ಷರೆ, ಸಭಿಕರೆ:—ನಾನು ಈ ಕೆಳಗಣ ತೀರ್ಮಾನವನ್ನು ತಮ್ಮ ಸಮ್ಮತಿಗಾಗಿ ವಿಜ್ಞಾಪಿಸಬೇಕಾಗಿದೆ.

"ನಮ್ಮ ದೇಶದ ನಿಮ್ನಜಾತಿಗಳವರ ಈಗಿನ ಹೀನದಶೆಯು ಆ ಜನರ ದೃಷ್ಟಿಯಿಂದ ಮಾತ್ರವೇ ಅಲ್ಲದೆ ಒಟ್ಟು ದೇಶದ ಯೋಗಕ್ಷೇಮ ದೃಷ್ಟಿಯಿಂದ ಸಹ ಅತೃಪ್ತಿಕರವಾಗಿದೆಯೆಂದೂ, ಆ ಜನರಲ್ಲಿ ಸ್ವಗೌರವ ಬುದ್ಧಿಯನ್ನುಂಟುಮಾಡಿ ಅವರ ವಿದ್ಯಾಭ್ಯಾಸಕ್ಕೂ ಯೋಗ್ಯ ಜೀವನಕ್ಕೂ ಸೌಕರ್ಯಗಳನ್ನು ಕಲ್ಪಿಸುವುದರ ಮೂಲಕ ಅವರ ನೀತಿಯನ್ನೂ

ಸಾಮಾಜಿಕ ಸ್ಥಿತಿಯನ್ನೂ ಉತ್ತಮಗೊಳಿಸಲು ಸರ್ವ ಪ್ರಯತ್ನಗಳನ್ನೂ ಮಾಡುವುದು ಪ್ರತಿಯೊಬ್ಬ ದೇಶಾಭಿಮಾನಿಗೂ ಕರ್ತವ್ಯವೆಂದೂ ಈ ಸಭೆಯು ಅಭಿಪ್ರಾಯಪಟ್ಟಿರುತ್ತದೆ.''

ಮಹಾಶಯರೆ, ಬಲವತ್ತಾದ ಮಾತುಗಳನ್ನು ಅನಾವಶ್ಯಕವಾಗಿ ಉಪಯೋಗಿಸುವುದು ನನ್ನ ಪದ್ಧತಿಯಲ್ಲವಾದರೂ, ಈ ಮೇಲಣ ತೀರ್ಮಾನದ ಶಬ್ದಗಳು ನ್ಯಾಯವಾಗಿ ಎಷ್ಟು ಬಲವತ್ತರವಾಗಿರಬೇಕೋ ಅಷ್ಟು ಬಲವಾಗಿಲ್ಲವೆಂದು ನಾನು ಹೇಳಬೇಕಾಗಿದೆ. ಕೀಳುಜಾತಿಗಳವರ ಸ್ಥಿತಿಯು,—ಅವರನ್ನು ಕೀಳು ಜಾತಿಗಳವರೆಂದು ಕರೆಯುವುದೇ ಖೇದಕರವಾಗಿದೆ!—ಈ ತೀರ್ಮಾನವು ಸೂಚಿಸುವಂತೆ ಅತೃಪ್ತಿಕರವಾಗಿರುವುದು ಮಾತ್ರವೇ ಅಲ್ಲ ; ಅದು ನಮ್ಮ ಸಮಾಜದ ವ್ಯವಸ್ಥೆಗೆಲ್ಲಾ ಅಗೌರವವನ್ನುಂಟುಮಾಡುವಷ್ಟು ಶೋಚನೀಯವಾಗಿದೆ; ಮತ್ತು ಆ ಜಾತಿಗಳವರ ವಿಷಯದಲ್ಲಿ ನಮ್ಮ ವಿದ್ಯಾವಂತರು ತೋರಿಸುತ್ತಿರುವ ನಡತೆಯು ನಮಗೆ ತುಂಬಾ ವ್ಯಸನಕರವೂ ಅಪಮಾನಕರವೂ ಆಗಿದೆ. ಈ ವಿಷಯವನ್ನು ಕುರಿತು ಈಗ ಮಾತನಾಡುವುದರಲ್ಲಿ ಜಾತಿ ಕುಲಗಳ ಪೂರ್ವ ಚರಿತ್ರೆಯನ್ನು ಚರ್ಚಿಸುವುದು ನನ್ನ ಉದ್ದೇಶವಲ್ಲ. ನ್ಯಾಯ, ಭೂತದಯೆ ಮತ್ತು ದೇಶಾಭ್ಯುದಯ—ಈ ತತ್ತ್ವಗಳ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ ತೋರಿಬರುವ ಕೆಲವಂಶಗಳನ್ನು ಮಾತ್ರ ಸೂಚಿಸುವೆನು. ಮನುಷ್ಯ ಪ್ರಾಣಿಗಳ ಪೈಕಿ ಒಂದು ತರಗತಿಗೆ ಸೇರಿದ ಜನರು, ನಮ್ಮಂತೆಯೇ ದೇಹಧಾರಿಗಳಾಗಿ, ನಮ್ಮಂತೆಯೇ ಆಲೋಚನಾಪರವಾದ ಬುದ್ಧಿಯನ್ನೂ ಸುಖದುಃಖಾನುಭವವುಳ್ಳ ಮನಸ್ಸನ್ನೂ ಪಡೆದವರಾಗಿ ಇದ್ದರೂ, ಎಂದೆಂದಿಗೂ ಅವರು ಹೀನ ಸ್ಥಿತಿಯಲ್ಲಿಯೇ ನಿಂತು, ದೈನ್ಯದಿಂದಲೂ ದಾರಿದ್ರ್ಯದಿಂದಲೂ ಕಷ್ಟಪಡುತ್ತಾ, ನೀತಿಯಲ್ಲಿಯೂ ಮನೋವೃತ್ತಿಯಲ್ಲಿಯೂ ಅಧಮಭಾವವನ್ನು ಹೊಂದಿರುವುದೂ, ಅವರು ತಮ್ಮ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಂಡು ಏಳಿಗೆಗೆ ಬರಲು ಆಗದಂತೆ ಮಾಡುವ ತಡೆಕಟ್ಟುಗಳು ಶಾಶ್ವತವಾಗಿ ಉಂಟಾಗಿರುವುದೂ ಅತಿ ಕ್ರೂರವಾದ ಸಂಗತಿಯೆಂಬುದನ್ನು ನ್ಯಾಯಪರರಾದವರೆಲ್ಲರೂ ಒಪ್ಪುವರೆಂದು ನಾನು ನಂಬಿದ್ದೇನೆ. ಈ ಸಂಗತಿಯು ನಮ್ಮ ಧರ್ಮಬುದ್ಧಿಗೆ ಬಹು ದುಸ್ಸಹವಾಗಿದೆ. ಆ ಕೀಳುಜಾತಿಗಳವರ ಸ್ಥಿತಿಯು ನಮಗೇ ಒಂದುವೇಳೆ

ಬರುವುದೆಂದು ನಾವು ಭಾವಿಸಿದರೆ, ಅವರು ಅನುಭವಿಸುತ್ತಿರುವ ಅನ್ಯಾಯವು ಎಷ್ಟು ಘೋರವಾದುದೆಂಬುದು ಆಗ ನಮಗೆ ಗೊತ್ತಾಗುವುದು. ನಾವು, ಬೆಕ್ಕನ್ನು ಮುಟ್ಟಬಹುದು, ನಾಯಿಯನ್ನು ಮುಟ್ಟಬಹುದು, ಇತರ ಯಾವ ಪ್ರಾಣಿಯನ್ನಾದರೂ ಮುಟ್ಟಬಹುದು: ಆದರೆ ಈ ಕೀಳು ಜಾತಿಯ ಮಾನುಷ ಪ್ರಾಣಿಗಳನ್ನು ಮುಟ್ಟಿದರೆ ಮಾತ್ರ ಅದು ಅಶುಚಿ! ಆ ಜಾತಿಯವರಾದರೋ, ನಮ್ಮ ಈ ನಡೆವಳಿಕೆಯಲ್ಲಿ ತಪ್ಪೇನನ್ನೂ ಕಾಣದೆ, ನಾವು ಕೊಡುತ್ತಿರುವ ಮರ್ಯಾದೆಯೇ ತಮಗೆ ತಕ್ಕುದ್ದೆಂದು ಒಪ್ಪಿಕೊಂಡಿದ್ದಾರೆ; ಅವರ ಮನಸ್ಸು ಸಂಪೂರ್ಣವಾಗಿ ಅಧೋಗತಿಗೆ ಇಳಿದಿರುವುದೆಂಬುದು ಇದರಿಂದಲೇ ವ್ಯಕ್ತವಾಗುವುದಲ್ಲವೆ?

ದಿವಂಗತರಾದ ರಾನಡೆಯವರು ಬೊಂಬಾಯಲ್ಲಿ ಏಳೆಂಟು ವರ್ಷಗಳ ಹಿಂದೆ ಕೊಟ್ಟ ಉಪನ್ಯಾಸವೊಂದು ನನಗೆ ಜ್ಞಾಪಕದಲ್ಲಿದೆ. ಆಗ ನಮ್ಮ ದೇಶೀಯರಿಗೆ ದಕ್ಷಿಣ ಆಫ್ರಿಕದವರು ಕೊಡುತ್ತಿದ್ದ ಕಷ್ಟಗಳ ವಿಷಯದಲ್ಲಿ ಇಂಡಿಯದಲ್ಲೆಲ್ಲಾ ವಿಶೇಷ ರೋಷಾವೇಶವುಂಟಾಗಿತ್ತು. ನಮ್ಮ ಮಿತ್ರರಾದ ಮ|| ಗಾಂಧಿಯವರು ಆಗ ದಕ್ಷಿಣ ಆಫ್ರಿಕದಿಂದ ಇಲ್ಲಿಗೆ ಕೆಲವು ದಿನಗಳ ಮಟ್ಟಿಗೆ ಬಂದು,—ನಮ್ಮ ಜನರನ್ನು ನೆಟಾಲ್, ಕೇಪ್ ಕಾಲನಿ ಮತ್ತು ಟ್ರಾನ್ಸ್‌ವಾಲ್ ಪ್ರಾಂತಗಳ ಬಿಳಿಯ ಜನರು ಹೇಗೆ ಕಾಣುತ್ತಿದ್ದರೆಂಬುದನ್ನೂ, ನಮ್ಮವರು ಅಲ್ಲಿಯ ರಾಜವೀಧಿಗಳಲ್ಲಿ ತಿರುಗುವುದಕ್ಕೂ ರೈಲಿನ ಮೊದಲನೆಯ ತರಗತಿಯ ಗಾಡಿಗಳಲ್ಲಿ ಪ್ರಯಾಣ ಮಾಡುವುದಕ್ಕೂ ಹೇಗೆ ಸ್ವತಂತ್ರವಿಲ್ಲದವರಾಗಿದ್ದರೆಂಬುದನ್ನೂ, ನಮ್ಮವರನ್ನು 'ಹೊಟೇಲು'ಗಳೊಳಕ್ಕೂ ಇತರ ಸಾರ್ವಜನಿಕಸ್ಥಾನಗಳೊಳಕ್ಕೂ ಹೇಗೆ ಬಿಡುತ್ತಿರಲಿಲ್ಲವೆಂಬುದನ್ನೂ ವರ್ಣಿಸುತ್ತಿದ್ದರು. ಆಗ ನಮಗೆಲ್ಲರಿಗೂ ಕೋಪೋದ್ರೇಕವುಂಟಾಗಿ, ನಮ್ಮ ಜನರು ಬ್ರಿಟಿಷ್ ಚಕ್ರಾಧಿಪತ್ಯದ ಒಂದು ಭಾಗದಲ್ಲಿ ಆ ರೀತಿ ಅನ್ಯಾಯಕ್ಕೊಳಗಾಗಿರುವಾಗ ನಾವು ಬ್ರಿಟಿಷರ ಪ್ರಜೆಗಳೆಂದು ಜಂಭಕೊಚ್ಚಿಕೊಳ್ಳುವುದು ಅಪಹಾಸ್ಯಾಸ್ಪದವೆಂದು ಹೇಳುತ್ತಿದ್ದೆವು. ರಾನಡೆಯವರೂ ಈ ವಿಷಯದಲ್ಲಿ ಇತರರಂತೆಯೇ ಅಸಮಾಧಾನಗೊಂಡಿದ್ದರು. ಅವರು ಮ|| ಗಾಂಧಿಯವರಿಗೆ ಯಾವಾಗಲೂ ಸನ್ಮಂತ್ರಿಯಾಗಿದ್ದರು.

ಆದರೆ ಜನರ ಮನಸ್ಸು ಉದ್ರಿಕ್ತವಾಗಿರುವ ಸಂದರ್ಭದಲ್ಲಿ, ಆ ಉದ್ರೇಕವನ್ನು ನೀತಿ ವಿವೇಚನೆಯ ಕಡೆಗೆ ತಿರುಗಿಸುವುದು ರಾನಡೆಯವರ ಮಹತ್ವದ ವಿಶೇಷ ಲಕ್ಷಣವಾಗಿತ್ತು. ಆದಕಾರಣ, ದಕ್ಷಿಣ ಆಫ್ರಿಕದ ಶ್ವೇತವರ್ಣಿಗಳು ನಮ್ಮವರಿಗೆ ಮಾಡುತ್ತಿದ್ದ ಅನ್ಯಾಯದ ವಿಷಯದಲ್ಲಿ ಇತರರೆಲ್ಲರೂ ಕ್ರೋಧ ವಚನಗಳನ್ನಾಡುತ್ತಿದ್ದಾಗ, ರಾನಡೆಯವರು "ಈ ದೇಶದಲ್ಲಿ ನಾವು ಅಂತಹ ಪಾಪವೇನನ್ನೂ ಮಾಡಿಲ್ಲವೊ?"—ಎಂಬ ಪ್ರಶ್ನೆಯನ್ನೆತ್ತಿದರು. ಅವರ ಉಪನ್ಯಾಸದ ಹೆಸರು ನನಗೆ ಸರಿಯಾಗಿ ಸೆನಪಿನಲ್ಲಿಲ್ಲ; ಬಹುಶಃ ಆ ಉಪನ್ಯಾಸಕ್ಕೆ "ಪರೀಕ್ಷಾ ದೀಪವನ್ನೊಳಗಡೆಗೆ ತಿರುಗಿಸಿರಿ" ಎಂಬ ರೀತಿಯಲ್ಲಿ ಹೆಸರುಕೊಟ್ಟಿದ್ದರು. ಅದು ನಾನು ಕೇಳಿರುವ ಅತಿ ಶ್ರೇಷ್ಠವಾದ ಉಪನ್ಯಾಸಗಳಲ್ಲೊಂದು. ರಾನಡೆಯವರು ಆ ಭಾಷಣದ ಪ್ರಾರಂಭದಲ್ಲಿ, ಭಾರತೀಯರು ದಕ್ಷಿಣ ಆಫ್ರಿಕದಲ್ಲಿ ಸ್ವದೇಶ ಗೌರವಕ್ಕಾಗಿ ಪ್ರಾರಂಭಿಸಿದ್ದ ಹೋರಾಟದ ವಿಷಯವಾಗಿ ಸಹಾನುಭೂತಿಯನ್ನು ತೋರ್ಪಡಿಸಿ, ಆ ಮೇಲೆ ಈ ರೀತಿ ಕೇಳತೊಡಗಿದರು:—"ಅನ್ಯಾಯಕ್ಕೆ ಗುರಿಯಾಗಿ, ಕೆಳಕ್ಕೆ ತುಳಿಯಲ್ಪಟ್ಟಿರುವ ಭಾರತೀಯರ ವಿಷಯದಲ್ಲಿ ನಾವೀಗ ತೋರಿಸುತ್ತಿರುವ ಅನುತಾಪವೂ ವಾತ್ಸಲ್ಯವೂ ನಮ್ಮ ದೇಶದಿಂದ ಹೊರಕ್ಕೆ ಹೋದವರಿಗೆ ಮಾತ್ರವೇ ಸಲ್ಲತಕ್ಕುದೋ? ಅಥವಾ ಆ ಮಮತೆಯು ಅನ್ಯಾಯವನ್ನೂ ಕ್ರೌರ್ಯವನ್ನೂ ಅನುಭವಿಸುತ್ತಿರುವ ಎಲ್ಲ ಜನರಿಗೂ ವಿಸ್ತರಿಸತಕ್ಕುದೋ? ಪರದೇಶೀಯರನ್ನಾಕ್ಷೇಪಿಸುವುದೇನೋ ಸುಲಭ; ಆದರೆ ಹಾಗೆ ಆಕ್ಷೇಪಿಸುವವರು ಆತ್ಮಪರೀಕ್ಷೆಯನ್ನೂ ಮಾಡಿಕೊಂಡು ತಾವು ನಿರ್ದೋಷಿಗಳೆ?—ಎಂದು ವಿಚಾರಮಾಡುವುದು ಯುಕ್ತವಾಗಿದೆ." ಹೀಗೆಂದು ಎಚ್ಚರಿಕೆಕೊಟ್ಟ ಬಳಿಕ, ರಾನಡೆಯವರು ಈ ದೇಶದ ನಾನಾ ಭಾಗಗಳಲ್ಲಿ ಅಂತ್ಯಜಾತಿಯವರನ್ನು ನಾವು ಹೇಗೆ ಕಾಣುತ್ತಿರುವೆವೆಂಬುದನ್ನು ವರ್ಣಿಸಿದರು. ಅದನ್ನು ಕೇಳಿದವರಲ್ಲೆಲ್ಲ ನಾಚಿಕೆಯೂ ಖೇದವೂ ಆಗ್ರಹವೂ ವಿಶೇಷವಾಗಿ ತಲೆದೋರಿದುವು. ಈ ದೇಶದಲ್ಲಿ ಸ್ವಜನರಿಗೆ ಹಿಂಸೆಯೂ ಅನ್ಯಾಯವೂ ನಡೆಯುವುದನ್ನು ನೋಡಿ ಸುಮ್ಮನಿರತಕ್ಕವರಿಗೆ ದಕ್ಷಿಣ ಆಫ್ರಿಕದವರನ್ನು ಬೈಯಲು ಬಾಯುಂಟೆ? ಎಂದು ರಾನಡೆಯವರು ಕೇಳಿದರು. ಈ ಪ್ರಶ್ನೆಯು ಪ್ರಥಮತಃ ಕೇವಲ ನ್ಯಾಯವಿಚಾರದ ಪ್ರಶ್ನೆ.

ಎರಡನೆಯದಾಗಿ, ನಾನು ಮೇಲೆ ಹೇಳಿದಂತೆ ಅದು ಭೂತದಯಾ ಪರವಾದ ಪ್ರಶ್ನೆ. ಸರ್ವಸಮತ್ವವೂ, ಜಾತಿಪಕ್ಷಪಾತ ಕುಲಪಕ್ಷಪಾತ ಗಳನ್ನು ದೂರಮಾಡಿರುವ ಉದಾರಭಾವವೂ ಈ ಕಾಲದ ನಾಗರಿಕತೆಗೆ ಮುಖ್ಯ ಆಶಯಗಳೆನಿಸಿವೆ. ಈ ಲೋಕಕಾರುಣ್ಯ ಮತವನ್ನು ನಾವು ಗೌರವಿಸಿ, ಸಹಾಯಶೂನ್ಯರಾಗಿರುವ ನಮ್ಮ (ಅಂತ್ಯಜಾತಿಯ) ದೇಶೀಯು ರನ್ನು ಹೀನದಶೆಯಿಂದುದ್ಧರಿಸುವುದು ನಮಗೆ ಕರ್ತವ್ಯವಾಗಿದೆ.

ಮೂರನೆಯದಾಗಿ, ಇದು ಇಂಡಿಯಾ ದೇಶದ ಸ್ವಪ್ರಯೋಜನಕ್ಕೆ ಸಂಬಂಧಿಸಿದ ಪ್ರಶ್ನೆ. ನಮ್ಮ ದೇಶದವರಲ್ಲಿ (ಅಂತ್ಯಜಾತಿಗೆ ಸೇರಿದ) ಅನೇಕ ಲಕ್ಷ ಪ್ರಜೆಯು ಅಜ್ಞಾನದಲ್ಲಿಯೂ ಅನಾಗರಿಕತೆಯಲ್ಲಿಯೂ ಅಧಮತೆಯಲ್ಲಿಯೂ ಮುಳುಗಿದ್ದರೆ, ನಮ್ಮ ಜನೈಕ್ಯತೆಯೂ ಸಾರ್ವಜನಿಕ ಸಂಕಲ್ಪಗಳೂ ಹೇಗೆ ತಾನೆ ಸಿದ್ಧಿಸಿಯಾವು? ನಮ್ಮ ದೇಶಮಾತೆಯು ಹೇಗೆತಾನೆ ಪ್ರಪಂಚದ ಜನಪದಗಳ ಮಧ್ಯೆ ಉನ್ನತಪದವಿಯನ್ನಡರಿಯಾಳು? ನಾವು ಈ ಕೀಳುಜಾತಿಯ ಜನರನ್ನು ಬುದ್ಧಿಯಲ್ಲಿಯೂ ನೀತಿಯಲ್ಲಿಯೂ ಕ್ರಮೇಣ ಉತ್ತಮಪಡಿಸದಿದ್ದರೆ, ಅವರು ಹೇಗೆತಾನೆ ನಮ್ಮ ಅಭಿಪ್ರಾಯ ಗಳನ್ನು ತಿಳಿದು, ನಮ್ಮ ಪ್ರಯತ್ನಗಳನ್ನಂಗೀಕರಿಸಿ, ನಮ್ಮೊಡನೆ ಕಲೆತಾರು? ಈ ಜಾತಿಗಳವರಲ್ಲಿರುವ ಅಮೋಘವಾದ ಕಾಯಶಕ್ತಿ ಮನಶ್ಶಕ್ತಿಗಳು ಈಗ ನಮ್ಮ ದೇಶೋದ್ಧಾರ ಕಾರ್ಯಕ್ಕೆ ಉಪಯುಕ್ತವಾಗದೆಯೇ ಇರುವು ವಲ್ಲವೆ? ವಿವೇಚನ ಚತುರರೂ ದೂರದೃಷ್ಟಿಯುಳ್ಳವರೂ ಆಗಿದ್ದ ಶ್ರೀ ವಿವೇಕಾನಂದ ಸ್ವಾಮಿಗಳವರು ಇದೇ ರೀತಿ ಅಭಿಪ್ರಾಯಪಟ್ಟಿದ್ದರೆಂದು ನಾನು ಕೇಳಿದ್ದೇನೆ. ನಮ್ಮ ದೇಶದ ಎಲ್ಲಾ ಜಾತಿ ಪಂಗಡಗಳವರೂ— ಕೀಳು ಜಾತಿಯವರೆಂದು ಕರೆಯಲ್ಪಡುತ್ತಿರುವವರೂ ಸಹ—ದೇಶಸೇವಾ ಪ್ರಯತ್ನಗಳಿಗೆ ಸಹಾಯವಾಗಿ ಬಂದ ಹೊರತು, ನಾವು ಒಂದು ಜನಪದ ವೆನಿಸಿ ಉಚ್ಛ್ರಾಯ ಹೊಂದುವ ಭರವಸೆಯಿಲ್ಲ.

ಮೇಲಾಗಿ, ಈ ಅಂತ್ಯಜರು ಹಿಂದೂ ಮತಸ್ಥರೆನ್ನಿಸಿಕೊಂಡಿರುವ ವರೆಗೂ ನಮ್ಮ ಮನೆಗಳಿಗೆ ದೂರವಾಗಿ, ನಮ್ಮ ಸಮಾಜಕ್ಕೆ ಬಾಹಿರರಾಗಿರು ವುದೂ, ಅವರು ಷರಾಯಿ ಟೋಪಿ ಬೂಟ್ಸುಗಳನ್ನು ಧರಿಸಿ ಕ್ರಿಸ್ತಮತಕ್ಕೆ

ಸೇರಿದೊಡನೆಯೇ ನಮ್ಮ ಹಸ್ತಲಾಘವಕ್ಕೂ ಸಂಪೂರ್ಣ ಸನ್ಮಾನಕ್ಕೂ ಅರ್ಹರಾಗುವುದೂ ನಮ್ಮ ಗೌರವಕ್ಕೇ ಹಾನಿಯನ್ನುಂಟುಮಾಡುತ್ತಿದೆ ಯಲ್ಲವೆ? ಈ ಸಂಗತಿಯು ಸಮರ್ಪಕವಾದುದೆಂದು ಯಾವ ಬುದ್ಧಿ ಶಾಲಿಯೂ ಹೇಳಲಾರನು.

ಅಂತ್ಯಜರು ಬುದ್ಧಿಯಲ್ಲಿಯೂ ನೀತಿಯಲ್ಲಿಯೂ ಇತರರಿಗೆ ಸಮ ನಾಗುವಂತೆ ಮಾಡುವುದು ಒಂದುಸಲದ ಪ್ರಯತ್ನದಿಂದಲೇ ಸಾಧ್ಯವೆಂದು ಯಾರೂ ನಿರೀಕ್ಷಿಸಿಕೊಂಡಿಲ್ಲ. ಆ ಕೆಲಸಕ್ಕೆ ಸ್ವಲ್ಪಕಾಲ ಹಿಡಿಯುವುದು; ಅದು ನೆರವೇರಬೇಕಾದರೆ ಅವರಿಗೆ ವಿದ್ಯೆ ಕಲಿಸಿ, ಒಳ್ಳೆಯ ಜೀವನ ವೃತ್ತಿ ಗಳನ್ನು ಕಲ್ಪಿಸಿಕೊಡಲು ನಾವು ಪ್ರಯಾಸಪಡಬೇಕು. ಮಹಾಶಯರೆ, ನಮ್ಮ ದೇಶದ ಈಗಿನ ಸ್ಥಿತಿಯಲ್ಲಿ ಈ ಕೆಲಸಕ್ಕಿಂತ ಶ್ರೇಷ್ಠವಾದುದೂ ಪವಿತ್ರವಾ ದುದೂ ಯಾವುದೂ ನನಗೆ ತೋರುವುದಿಲ್ಲ.

---

## "ಮ್ಯುನಿಸಿಪಾಲಿಟಿ" ಅಥವಾ ಸ್ಥಳೀಯ ಸ್ವರಾಜ್ಯ

ಇತರ ಪ್ರಸಿದ್ಧ ರಾಜ್ಯಶಾಸ್ತ್ರಜ್ಞರಂತೆಯೇ ಗೋಖಲೆಯವರು "ಮ್ಯುನಿಸಿಪಾಲಿಟಿ" ಮತ್ತು "ಲೋಕಲ್ ಬೋರ್ಡು"ಗಳ ಅಭಿವೃದ್ಧಿಯಲ್ಲಿ ತುಂಬಾ ಆಸಕ್ತಿಯನ್ನು ತೋರಿಸುತ್ತಿದ್ದರೆಂಬುದನ್ನು ಹಿಂದೆ ನೋಡಿರುವೆವು. ಈ ಚಿಕ್ಕವುಗಳಾದ ಗ್ರಾಮದ ಅಥವಾ ನಗರದ "ಸ್ವರಾಜ್ಯ ಸಂಸ್ಥೆ"ಗಳಲ್ಲಿ ಪ್ರಜೆಗಳಿಗೆ ರಾಜಕೀಯ ಕಾರ್ಯಗಳ ಪ್ರಥಮ-ಪರಿಚಯವು ದೊರೆಯುವುದೆಂದೂ, ಅವುಗಳ ಆಡಳಿತವನ್ನು ಚೆನ್ನಾಗಿ ನಡೆಯಿಸಲು ಪ್ರಜಾ ಪ್ರತಿನಿಧಿಗಳು ಕಲಿತುಕೊಂಡರೆ ಆ ಮೂಲಕ ಅವರು ಹೆಚ್ಚು ರಾಜಕೀಯಾಧಿಕಾರಕ್ಕೆ ಅರ್ಹರಾಗುವರೆಂದೂ, ನಮ್ಮ ದೇಶದ ಸ್ವರಾಜ್ಯ ಸೋಪಾನದಲ್ಲಿ ಮ್ಯುನಿಸಿಪಾಲಿಟಿಯೆಂ ಬುದು ಮೊದಲನೆಯ ಮೆಟ್ಟಲೆಂದೂ ಅವರು ನಂಬಿದ್ದರು. ಈ ನಂಬಿಕೆಯನ್ನು ಅವರು ಈ ಕೆಳಗೆ ಉದಾಹರಿಸಿರುವ ವಾಕ್ಯಗಳಲ್ಲಿ ತಿಳಿಸಿರುವರು. ಅವರು ೧೯೧೦ನೆಯ ಇಸವಿ-ಫೆಬ್ರವರಿ ೧೨ರಲ್ಲಿ ಬೊಂಬಾಯಿ ಶಾಸನ ಸಭೆಯಲ್ಲಿ ಮ್ಯುನಿಸಿಪಾಲಿಟಿಗಳ ಕಾನೂನನ್ನು ಕುರಿತು ಕೊಟ್ಟ ಭಾಷಣದಿಂದ ಈ ವಾಕ್ಯಗಳನ್ನು ಆರಿಸಿರುವೆವು:—

ಜಾನ್ ಸ್ಟೂಅರ್ಟ್ ಮಿಲ್ ಎಂಬ ತತ್ತ್ವಶೋಧಕನು ಪ್ರಜಾಪ್ರತಿ ನಿಧಿ ಪ್ರಭುತ್ವದ ವಿಷಯವಾಗಿ ಬರೆದಿರುವ ಗ್ರಂಥದಲ್ಲಿ, "ಮ್ಯುನಿಸಿಪಲ್" ಸಂಸ್ಥೆಗಳ ಉದ್ದೇಶವು ಸ್ಥಳೀಯ ಕಾರ್ಯಗಳನ್ನು ದಕ್ಷತೆಯಿಂದ ನಡೆಯಿಸು-

ವುದು ಮಾತ್ರವಲ್ಲದೆ, ಜನರಲ್ಲಿ ಸಮಾಜಾಭಿಮಾನವನ್ನು ಹುಟ್ಟಿಸಿ, ಅವರ ಲೋಕ ವ್ಯವಹಾರ ವಿಚಕ್ಷಣೆಯನ್ನು ಅಭಿವೃದ್ಧಿಗೊಳಿಸುವುದೂ ಹೌದು—, ಎಂದು ಹೇಳಿರುವನು. ಮ್ಯುನಿಸಿಪಲ್ ಸಭೆಗಳ ಕಾರ್ಯವನ್ನು ವಿಚಾರಿಸುವುದರಲ್ಲಿ ನಾವು ಆ ಉದ್ದೇಶ್ಯಗಳೆರಡನ್ನೂ (ಮೊದಲಿನದೊಂದನ್ನೇ ಅಲ್ಲ) ದೃಷ್ಟಿಯಲ್ಲಿಡಬೇಕೆಂದು ನನ್ನ ವಿಜ್ಞಾಪನೆ. ಉತ್ತಮ ತೆರದ ಸಾರ್ವಜನಿಕ ಜೀವನವು ಈ ದೇಶದಲ್ಲಿ ಈಗತಾನೆ ಪ್ರಾರಂಭಿಸಿದೆ. ಈ ಜೀವನ ಕ್ರಮವನ್ನಿಲ್ಲಿಗೆ ತಂದವರೇ ಅದನ್ನು ದೃಢಪಡಿಸಿ, ಜಾಗರೂಕತೆಯಿಂದಲೂ ವಿಶ್ವಾಸದಿಂದಲೂ ಪ್ರೋತ್ಸಾಹಿಸಬೇಕು. ಸ್ಥಳೀಯ ಪ್ರಜಾಪ್ರಭುತ್ವವು ಸಮರ್ಪಕವಾಗಿ ನಡೆಯಬೇಕಾದರೆ, ಸರಕಾರೀ ಅಧಿಕಾರಿಗಳೂ ಮ್ಯುನಿಸಿಪಲ್ ಸಭಿಕರೂ ಪರಸ್ಪರ ಕಲೆತು ಕೆಲಸಮಾಡಬೇಕು. ಹಾಗೆ ಕಲೆಯುವುದು ರಾಜ ಪ್ರಜೆಗಳಿಬ್ಬರ ಸುಖ ಸಂಪತ್ತುಗಳಿಗೂ ಆವಶ್ಯಕ. . . . . .

ಸ್ಥಳೀಯ ಸ್ವರಾಜ್ಯವನ್ನು ನಾವು ಬಯಸುವುದಕ್ಕೆ ಕಾರಣಗಳೆರಡಿವೆ: (೧) ಅದರಿಂದ ಗ್ರಾಮಕಾರ್ಯಗಳು ಹೆಚ್ಚು ವಿಚಕ್ಷಣೆಯಿಂದ ನಡೆಯುತ್ತವೆ; (೨) ಅದು ಬೇರೆ ಬೇರೆ ಜಾತಿ ಪಂಗಡಗಳವರಿಗೆ ಬಹು ಕಾಲದಿಂದ ಬಂದಿರುವ ಭೇದ ಬುದ್ಧಿಯನ್ನು ಬಿಡಿಸಿ, ಐಕಮತ್ಯದಿಂದ ಸಾರ್ವಜನಿಕ ಹಿತಕ್ಕಾಗಿ ಕೆಲಸಮಾಡುವುದನ್ನು ಕಲಿಸಿಕೊಡುತ್ತದೆ. ಈ ದೇಶದ ಜಾತಿ ವಿಜಾತಿಗಳಲ್ಲಿ ಪರಸ್ಪರ ವೈಷಮ್ಯವಿರಲು ಕಾರಣಗಳು ಬೇಕಾದಷ್ಟಿವೆಯೆಂಬುದು ನಿಶ್ಚಯ. ಆದರೆ ಶಾಸನ ಸಭೆಯವರು, ದೇಶದ ಪುರೋವೃದ್ಧಿಯ ಮೇಲೆ ದೃಷ್ಟಿಯಿಟ್ಟು, ತಾವು ರಚಿಸುವ ಕಾನೂನುಗಳಲ್ಲಿ ಆ ವೈಷಮ್ಯಗಳನ್ನು ಅಂಗೀಕರಿಸಕೂಡದೆಂಬುದು ನನ್ನ ವಿಜ್ಞಾಪನೆ. ಸ್ಥಳೀಯ ಸ್ವರಾಜ್ಯದಲ್ಲಿ ಒಂದು ಜಾತಿಯವರ ಅಥವಾ ಒಂದು ಮತದವರ ಹಿತಕ್ಕೂ ಮತ್ತೊಂದು ಗುಂಪಿನವರ ಹಿತಕ್ಕೂ ವಿರೋಧವನ್ನುಂಟುಮಾಡಿಸತಕ್ಕ ವಿಷಯ ಯಾವುದೂ ಇಲ್ಲ. ಮ್ಯುನಿಸಿಪಾಲಿಟಿಗಳು ನೆರವೇರಿಸಬೇಕಾದ ನಿತ್ಯ ಕರ್ತವ್ಯಗಳ ಮತ್ತು ಐಚ್ಛಿಕ ಕರ್ತವ್ಯಗಳ ಪಟ್ಟಿಯನ್ನು ನೋಡಿದರೆ— ಕಸಾಬರ ಕಾರ್ಖಾನೆಯೊಂದರ ವಿನಾ—ಯಾವ ವಿಷಯದಲ್ಲಿಯೂ ಜಾತಿ ವಿಜಾತಿಗಳಿಗೆ ಪರಸ್ಪರ ವಿರೋಧವಾಗುವಂತಿಲ್ಲ. ಕಸಾಯಿ ಕಾರ್ಖಾನೆ

ಘುಂಥಾ ವಿಷಯದಲ್ಲಿ, ಯಾವ ಊರಿನಲ್ಲಾದರೂ ಹಿಂದೂ ಮ್ಯುನಿಸಿಪಲ್ ಕೌನ್ಸಿಲರ್ಸುಗಳು ಮಹಮ್ಮದೀಯರಿಗೆ ತಕ್ಕಂತೆ ಅನುಕೂಲಪಡಿಸಿಕೊಡುವುದಿಲ್ಲವೆಂದರೆ, ಆಗ ಸರಕಾರದವರೇ ಆ ಮ್ಯುನಿಸಿಪಾಲಿಟಿಯನ್ನು ನಿರ್ಬಂಧಿಸಿ ಮಾರ್ಗಕ್ಕೆ ತರಲು ಅಧಿಕಾರವಿದೆ. ಮ್ಯುನಿಸಿಪಲ್ ಸಭೆಗೆ ಜನರು ಜಾತಿವಾರಾಗಿ, ಅಥವಾ ಕೋಮುವಾರಾಗಿ, ಪ್ರತಿನಿಧಿಗಳನ್ನು ಚುನಾಯಿಸಬೇಕೆಂದರೆ, ಹಿಂದೂಗಳೆಲ್ಲಾ ಒಂದೇ ಪಂಗಡವೆಂದು ಹೇಳುವುದು ಹೇಗೆ? ಅವರಲ್ಲೇ ಎಷ್ಟೋ ಜಾತಿ ವಿಜಾತಿಗಳಿವೆ; ಅವುಗಳಲ್ಲಿ ಒಂದರಿಂದೊಂದಕ್ಕೆ ಎಷ್ಟೋ ದೂರವಿದೆ; ಆದಕಾರಣ ಅವುಗಳೆಲ್ಲವನ್ನೂ ಬೇರೆ ಬೇರೆ ಎಂದು ಎಣಿಸಬೇಕಾಗುವುದು. ಹಾಗಾದರೆ ಪಾರವೆಲ್ಲಿ?

---

## ಮಹಾದೇವ ಗೋವಿಂದ ರಾನಡೆಯವರು

### (೧)

ಈ ಮಹನೀಯರು ಗೋಖಲೆಯವರ ಗುರುಗಳೆಂಬುದನ್ನು ಹಿಂದೆ ಹೇಳಿದೆ. ಅವರು ದೈವಾಧೀನರಾದ ಸಮಯದಲ್ಲಿ ಗೋಖಲೆಯವರ ಮನಸ್ಸು ಹೇಗಿತ್ತೆಂಬುದನ್ನು ಅವರು ಆಗ ಇಂಗ್ಲೆಂಡಿನಲ್ಲಿದ್ದ ತಮ್ಮ ಶಿಷ್ಯರಾದ ಮ|| ಪರಂಜಪೆಯವರಿಗೆ ಬರೆದ ಕಾಗದದಿಂದ ತಿಳಿಯಬಹುದು. ಆ ಕಾಗದವು ಈರೀತಿ ಇದೆ:—

ಫರ್ಗ್ಯುಸನ್ ಕಾಲೇಜು,
ಪೂನಾ,
೧೫ನೆಯ ಎಪ್ರಿಲ್ ೧೯೦೧.

ಮತ್ಪ್ರಿಯರಾದ ಪರಂಜಪೆಯವರೇ,

ನಾನು ತಮಗೆ ಹಿಂದಿನ ಕಾಗದವನ್ನು ಬರೆದಂದಿನಿಂದೀಚೆಗೆ ನನ್ನ ಮಹಾಗುರುಗಳಾದ ಶ್ರೀಮಾನ್ ರಾನಡೆಯವರು ಕಾಲಾಧೀನರಾಗಿರುವರು. ಅವರ ಮರಣದಿಂದ ನನಗೆ ಏನಾಗಿರುವುದೆಂಬುದನ್ನು ನಾನು ನಿಮಗೆ ವಿವರಿಸಿ ಹೇಳಲರಿಯೆ. ನನ್ನ ಜೀವಿತದ ಮೇಲೆ ಹಠಾತ್ತಾಗಿ ಕತ್ತಲೆ ಕವಿದಿರುವಂತೆ ತೋರುತ್ತಿದೆ. ಸಾರ್ವಜನಿಕ ಕಾರ್ಯಗಳನ್ನು ಮಾಡುವುದರಿಂದ ದೊರೆಯಬಹುದಾದ ಸಂತೋಷದಲ್ಲಿ ಶ್ರೇಷ್ಠತಮವಾದ ಭಾಗವು ಇನ್ನು ಮೇಲೆ ನನ್ನ ಪಾಲಿಗೆ ಇಲ್ಲವಾಗಿಹೋಗಿದೆ. ರಾನಡೆಯವರು ತಮ್ಮ

ಅನುಪಮ ಜೀವಮಾನವನ್ನು ಯಾವ ಮಹೋದ್ದೇಶಗಳಿಗೆ ಧಾರೆಯೆರೆದಿದ್ದರೋ ಆ ಉದ್ದೇಶಗಳನ್ನು ಪ್ರೀತಿ ಪೂಜ್ಯಬುದ್ಧಿಗಳಿಂದ ಪೋಷಿಸಿ, ಅವರು ಬಿಚ್ಚಿ ಹಿಡಿದಿದ್ದ ಧ್ವಜವನ್ನು ನಮ್ಮ ದುರ್ಬಲ ಹಸ್ತಗಳಿಂದ ಸಾಧ್ಯವಿರುವ ಮಟ್ಟಿಗಾದರೂ ಮೇಲಕ್ಕೆತ್ತಿ ಹಿಡಿಯಲು ಪ್ರಯತ್ನಿಸಿ, ಸಾಮರ್ಥ್ಯವಿಲ್ಲದಿದ್ದರೂ ಸಂತತವಾದ ಶ್ರದ್ಧೆ ಭರವಸೆಗಳಿಂದ ಹೋರಾಡುವುದು ಇತರ ಬಹುಮಂದಿಗೆ ಹೇಗೆಯೋ ನನಗೂ ಹಾಗೆಯೇ ಕರ್ತವ್ಯವೆಂಬುದನ್ನು ನಾನು ಸ್ವಾಭಾವಿಕವಾಗಿ ಒಪ್ಪಿಕೊಳ್ಳುತ್ತೇನೆ. ಆದರೂ ಅದು ನನಗೆ ಇನ್ನು ಉತ್ಸಾಹವಿರಹಿತವಾದ ಕಾರ್ಯ ; ಅದರಲ್ಲಿ ಲೇಶಮಾತ್ರವನ್ನಾದರೂ ನೆರವೇರಿಸಲು ನನ್ನಂತಹವರಿಗೆ ಶಕ್ತಿ ಬಂದೀತೆ—ಎಂಬುದನ್ನು ನಾನು ಕಾಣಲಾರೆ. ಹೇಗಾದರೂ ಆಗಲಿ, ಪ್ರಯತ್ನವನ್ನೇನೋ ಮಾಡಬೇಕು ; ಮನುಷ್ಯಮಾತ್ರನ ಜವಾಬ್ದಾರಿಯು, ನಮ್ಮ ಸುಯೋಗದಿಂದ, ಅಷ್ಟಕ್ಕೆ ಮುಗಿಯುತ್ತದೆ.

ಮ|| ಫೆರೋಜ್‌ಷಾ ಮೇತಾ ಅವರು ವೈಸ್‌ರಾಯವರ ಶಾಸನ ಸಭೆಯಲ್ಲಿಯ ತಮ್ಮ ಸ್ಥಾನಕ್ಕೆ ರಾಜೀನಾಮೆ ಕೊಟ್ಟಿರುವರು. ಅವರ ಸೂಚನೆಯಂತೆ ಬೊಂಬಾಯಿ ಪ್ರಾಂತದ ಸಭೆಯವರು ನನ್ನನ್ನು ಆ ಸ್ಥಾನಕ್ಕೆ ಒಮ್ಮನಸ್ಸಿನಿಂದ ಚುನಾಯಿಸಿದ್ದಾರೆ. ಈ ಸಭೆಯಲ್ಲಿಯ ನನ್ನ ಸಹೋದ್ಯೋಗಿಗಳು ನನ್ನ ಮೇಲೆ ದೊಡ್ಡ ಗೌರವವನ್ನು ಹೊರಿಸಿರುವರೆಂಬುದನ್ನು ನಾನು ತಿಳಿದುಕೊಂಡಿದ್ದೇನೆ ; ಆದರೆ ಅದರ ಉತ್ತರಭಾರವೂ ದೊಡ್ಡದು. ನನ್ನ ಈ ಹೊಸಸ್ಥಾನದ ಕರ್ತವ್ಯಗಳನ್ನು ನನ್ನ ಮಿತ್ರರಿಗೂ ಮಹಾಜನರಿಗೂ ತೃಪ್ತಿಯಾಗುವ ರೀತಿಯಲ್ಲಿ ನೆರವೇರಿಸಲು ನನಗೆ ಶಕ್ತಿದೊರೆಯಲೆಂದು ಪ್ರಾರ್ಥನೆ ಮಾಡುತ್ತಿರುವುದೊಂದು ಮಾತ್ರ ನನಗೆ ಸಾಧ್ಯ.

ಸರ್ವದಾ ಸತ್ಯವಾಗಿ ನಿಮ್ಮವನಾದ,

**ಜಿ. ಕೆ. ಗೋಖಲೆ.**

**(೨)**

**ರಾನಡೆಯವರ ವಿಷಯವಾಗಿ ಗೋಖಲೆಯವರು ೧೯೦೩ ರಲ್ಲಿ ಬೊಂಬಾಯಿ ಪಟ್ಟಣದಲ್ಲಿ ಮಾಡಿದ ಭಾಷಣದಿಂದ ಈ ಕೆಳಗಿನ ಅಂಶಗಳು ಸಂಗ್ರಹಿಸಲ್ಪಟ್ಟಿವೆ :—**

ರಾನಡೆಯವರನ್ನು ಕುರಿತು ಮಾತನಾಡುವುದರಲ್ಲಿ, ಅವರು ಪಾವನ ಮಹಿಮಾನ್ವಿತರಾದ ಆಧುನಿಕ ಋಷಿಗಳೆಂಬುದನ್ನು ಕುರಿತು ಉಪನ್ಯಸಿಸ ಬಹುದು ; ಅಥವಾ ಅವರು ಭರತಭೂಮಿಯ ವಿಷಯದಲ್ಲಿ ಅಪಾರವಾದ ಪ್ರೇಮವನ್ನು ತೋರಿ, ಆಕೆಯ ಸೇವೆಯಲ್ಲಿ ವಿಶ್ರಾಂತಿಯಿಲ್ಲದೆ ದುಡಿದು, ಆ ಮೂಲಕ ಸ್ವದೇಶೀಯರಿಗೆ ಮೇಲ್ಪಂಕ್ತಿ ಹಾಕಿದ ದೇಶಭಕ್ತರೆಂಬುದನ್ನು ಕುರಿತು ಉಪನ್ಯಸಿಸಬಹುದು; ಅಥವಾ ಅವರು ಸ್ವಜನರ ರಾಜಕೀಯ ಸ್ಥಿತಿ, ಸಾಮಾಜಿಕ ವ್ಯವಸ್ಥೆ, ಮತಾಚಾರ, ಕಸಬು, ಕೈಗಾರಿಕೆ, ವಿದ್ಯೆ, ನೀತಿ—ಇವುಗಳನ್ನು ಸರಿಪಡಿಸುವ ವಿಷಯದಲ್ಲಿ ವಿಶಾಲ ದೃಷ್ಟಿಯನ್ನು ಪಡೆದಿದ್ದ ಸಂಸ್ಕಾರಕರ್ತರೆಂಬುದನ್ನು ಕುರಿತು ಉಪನ್ಯಸಿಸಬಹುದು ; ಅಥವಾ ಅವರು ವಿದ್ವಾಂಸರೆಂಬುದನ್ನಾಗಲಿ, ಬೋಧಕರೆಂಬುದನ್ನಾಗಲಿ, ಉದ್ಯೋಗಶೀಲರೆಂಬುದನ್ನಾಗಲಿ ಕುರಿತು ಉಪನ್ಯಸಿಸಬಹುದು; ಅಥವಾ ಅವರು ನಮ್ಮ ಅನೇಕ ಬಗೆಯ ದೇಶೀಯ ಸಮಾರಂಭಗಳ ವಿಷಯದಲ್ಲಿ ಸೂಚಿಸಿದ ಅಭಿಪ್ರಾಯಗಳನ್ನೂ, ಉಪದೇಶಗಳನ್ನೂ, ಮಾರ್ಗಗಳನ್ನೂ ಕುರಿತು ಉಪನ್ಯಸಿಸಬಹದು; ಹೀಗೆ ಹತ್ತು ಹನ್ನೆರಡು ಉಪನ್ಯಾಸಗಳನ್ನು ಕೊಟ್ಟರೂ, ಇನ್ನೂ ಹೇಳಬೇಕಾದ ವಿಷಯವು ಎಷ್ಟೋ ಉಳಿಯುವುದು.

ರಾನಡೆಯವರೊಡನೆ ಪರಿಚಿತರಾದವರಿಗೆಲ್ಲಾ ಮೊಟ್ಟ ಮೊದಲು ತೋರಿಬರುತ್ತಿದ್ದುದು ಆ ಮಹಾ ಪುರುಷರಲ್ಲಿ ವ್ಯಾಪ್ತವಾಗಿದ್ದ ನಿರ್ಮಲ ವಾದ, ಗಾಢವಾದ ಮತ್ತು ಅಗಾಧವಾದ ದೇಶಾಭಿಮಾನ. ನನ್ನ ಅನುಭವದಲ್ಲೆಲ್ಲಾ ಆ ರೀತಿ ಹಗಲಿರುಳೂ ದೇಶಹಿತ ಚಿಂತನೆಯಲ್ಲಿಯೇ ಮಗ್ನ ರಾಗಿದ್ದವರನ್ನು ಇನ್ನೊಬ್ಬರನ್ನು ಮಾತ್ರ ನಾನು ಬಲ್ಲೆ ; ಅವರು ಮ|| ರಾ|| ದಾದಾಭಾಯಿ ನವರೋಜಿಯವರು. . . .

ಇಂಡಿಯಾ ದೇಶದ ಪೂರ್ವ ಚರಿತ್ರೆಯು ನಮಗೆ ಅತಿ ಗೌರವಕರ ವಾದುದೆಂದು ರಾನಡೆಯವರು ತಿಳಿದಿದ್ದರು. ಆದರೂ ಅವರ ಮನಸ್ಸು ಪೂರ್ವ ಚರಿತ್ರೆಗಿಂತಲೂ ಹೆಚ್ಚಾಗಿ ನಮ್ಮ ಪ್ರಕೃತ ಸ್ಥಿತಿಯನ್ನೂ ಪುರೋಭಿವೃದ್ಧಿಯನ್ನೂ ಆಲೋಚಿಸುವುದರಲ್ಲಿ ಪ್ರವಿಷ್ಟವಾಗಿತ್ತು. ಇದೇ ಅವರು

ವಿವಿಧ ಸಂಸ್ಕರಣಗಳ ವಿಷಯದಲ್ಲಿ ತೋರಿದ ಅದ್ಭುತವಾದ ಮತ್ತು ಅಸಮಾನವಾದ ಪ್ರಯತ್ನಶೀಲತೆಗೆ ಮೂಲಕಾರಣ.

ರಾನಡೆಯವರ ವಿಷಯದಲ್ಲಿ ತೋರಿಬರುವ ಎರಡನೆಯ ಅಂಶವೇನೆಂದರೆ—ಅವರ ವಿಚಾರಶೀಲತೆ. ಯಾವ ವಿಷಯವೇ ಆಗಲಿ, ಅದನ್ನು ಸಮಾಧಾನ ಚಿತ್ತದಿಂದ ಗ್ರಹಿಸಿ, ಅದರ ನ್ಯಾಯಾನ್ಯಾಯಗಳ ಸೂಕ್ಷ್ಮತ್ವವನ್ನು ಕಂಡುಹಿಡಿದು, ದೂರಾಲೋಚನೆಯಿಂದ ಸರ್ವಸಮರ್ಪಕವಾದ ಸಿದ್ಧಾಂತವನ್ನು ಮಾಡಬಲ್ಲ ಶಕ್ತಿಯು ಅವರ ಬುದ್ಧಿಗೆ ಸ್ವಾಭಾವಿಕವಾಗಿತ್ತು. ಅವರು ಆತುರದಿಂದ ಯಾವ ವಿಷಯವನ್ನೂ ತೀರ್ಮಾನಿಸುತ್ತಿರಲಿಲ್ಲ; ವಿಷಯದ ಒಳಮರ್ಮವನ್ನು ಹುಡುಕಿ ಕಾರ್ಯಕಾರಣ ಭಾವವನ್ನು ಬೇರುಮುಟ್ಟ ಪರಿಶೋಧಿಸುವುದು ಅವರ ಪದ್ಧತಿ. ಅವರ ಅಭಿಪ್ರಾಯಗಳಿಗೆ ವಿಸ್ತಾರವಾದ ಗ್ರಂಥಪಠನೆಯೂ ಲೋಕಾನುಭವವೂ ಆಧಾರವಾಗಿದ್ದುವು. ಆ ಅಭಿಪ್ರಾಯಗಳು ಸಾವಧಾನವಾದ ಪರ್ಯಾಲೋಚನೆಯ ಫಲಿತಾಂಶಗಳಾಗಿದ್ದ ಕಾರಣ, ಅವುಗಳ ಉಪದೇಶವು ಅವರ ಹೃದಯ ಗುಹೆಯಿಂದ ಉದ್ಘೋಷಿತವಾಗಿ ಬರುತ್ತಿತ್ತು. ಅವರ ವಿವೇಚನ ದೃಷ್ಟಿಯು ಸರ್ವತೋಮುಖವಾಗಿ ಹರಡಿ, ನಮ್ಮ ದೇಶೀಯ ಸಮಾರಂಭಗಳೆಲ್ಲವನ್ನೂ ಆವರಿಸಿತ್ತು. ನಮ್ಮ ರಾಜಕೀಯ ಸ್ವಾತಂತ್ರ್ಯ ಸಂಪಾದನೆ, ರಾಜ್ಯತಂತ್ರದಲ್ಲಿಯ ಕೊರತೆಗಳ ತಿದ್ದುಪಾಟು, ಸ್ತ್ರೀ ಮೌಢ್ಯ ಪರಿಹಾರ, ಶಿಶುವಿವಾಹ ನಿಷೇಧ, ವಿತಂತು ಕಷ್ಟನಿವಾರಣೆ, ಅಂತ್ಯ ಜಾತ್ಯುದ್ಧರಣ, ಅರ್ಥವಿದ್ಯಾಪ್ರಚಾರ, ಭಗವದಾರಾಧನ ಕ್ರಮ ಪರಿಷ್ಕರಣ—ಈ ಎಲ್ಲಾ ವಿಷಯಗಳಲ್ಲಿಯೂ ರಾನಡೆಯವರ ಶ್ರದ್ಧೆಯು ಏಕಪ್ರಕಾರವಾಗಿ ಅತಿಶಯವಾಗಿತ್ತು. ಈ ಸಂಸ್ಕರಣಗಳ ಆವಶ್ಯಕತೆಯನ್ನು ಅವರು ಕಂಡಿದ್ದುದಲ್ಲದೆ,—ಅವೆಲ್ಲಕ್ಕಿಂತ ಮೇಲಾಗಿ, ಪ್ರತಿಯೊಬ್ಬ ಮನುಷ್ಯನೂ ಆತ್ಮಶುದ್ಧಿಯನ್ನು ಪಡೆದು, ತನ್ನ ಆಶೆಗಳನ್ನು ನಿರ್ಮಲಪಡಿಸಿ, ತನ್ನ ಉದ್ದೇಶಗಳನ್ನು ಉನ್ನತಿಗೊಳಿಸಿ, ತನ್ನ ದಿನಚರ್ಯೆಯಲ್ಲಿ ಜನ್ಮಸಾಫಲ್ಯದ ಮೇಲೆ ದೃಷ್ಟಿಯಿಟ್ಟು ಧೈರ್ಯದಿಂದ ನಡೆಯಬೇಕೆಂಬುದನ್ನೂ ರಾನಡೆಯವರು ತಿಳಿದಿದ್ದರು. ಈ ವಿಷಯಗಳಲ್ಲಿ ಅವರು ತಮ್ಮ ಅಭಿಪ್ರಾಯಗಳನ್ನು ನಿರ್ಭೀತರಾಗಿ, ಶ್ರದ್ಧೆಯಿಂದ, ಸಾರಿ ಸಾರಿ

ಹೇಳುತ್ತಿದ್ದರು. ಆ ಬೋಧನೆಯು ಭಾಷಾ ವೈಪರೀತ್ಯದಿಂದಾಗಲಿ, ಭಾವ ವೈಪರೀತ್ಯದಿಂದಾಗಲಿ ಎಂದೂ ಕೆಡಲಿಲ್ಲ. ಮತ್ತು ಅವರಿಗೊದಗಿದ ಕಷ್ಟ ನಷ್ಟಗಳ ದೆಸೆಯಿಂದ ಅವರ ಅಭಿಪ್ರಾಯಗಳು ವ್ಯತ್ಯಾಸ ಹೊಂದಲಿಲ್ಲ.

ರಾನಡೆಯವರ ಗುಣ ವಿಶೇಷಗಳಲ್ಲಿ ಮತ್ತೊಂದಾವುದೆಂದರೆ—ಅವರ ಉದ್ಯೋಗ ಶೀಲತೆ. ಆ ಮಹನೀಯರು ತಮ್ಮ ಜೀವಮಾನದಲ್ಲಿ ಮಾಡಿದ ಕಾರ್ಯಕಲಾಪವನ್ನು ನೋಡಿದವನು—ಅವರ ಮಹತ್ತರವಾದ ಬುದ್ಧಿಯು ಜ್ಞಾನಾರ್ಜನೆಯಲ್ಲಿಯೂ, ಅಸದೃಶವಾದ ಜ್ಞಾನದಾನದಲ್ಲಿಯೂ ಎಡೆಬಿಡದೆ ಪ್ರವೃತ್ತವಾಗಿದ್ದುದನ್ನು ನೋಡಿದವನು,—ಆಶ್ಚರ್ಯಭರಿತನೂ ಸ್ತಬ್ಧನೂ ಆಗದಿರನು. ಅವರಿಗೆ ಕೆಲಸ ಮಾಡುವುದರಲ್ಲಿ ಸಾಮರ್ಥ್ಯವು ಅದ್ಭುತ ವಾಗಿದ್ದುದು ಮಾತ್ರವಲ್ಲದೆ, ಕೆಲಸವೇ ಪರಮಾನಂದಕರವಾಗಿತ್ತು. ಈ ಕಾಲದಲ್ಲಿ ನಿರುತ್ಸಾಹವೇ ನಮಗೆ ತಟ್ಟಿರುವ ದೊಡ್ಡ ಶಾಪವೆಂದು ಅವರು ಪದೇ ಪದೇ ಹೇಳುತ್ತಿದ್ದರು. ಅಸಂಗತಗಳಾದ ಅಭಿಪ್ರಾಯಗಳನ್ನು ಅವರು ಸಹಿಸಿದ್ದಾರು; ಉಚಿತಗಳಲ್ಲದ ಪ್ರಯತ್ನಗಳನ್ನು ಅವರು ಸಹಿಸಿದ್ದಾರು; ಆದರೆ ಉತ್ಸಾಹ ಶೂನ್ಯತೆಯನ್ನು ಮಾತ್ರ ಅವರು ಸಹಿಸಲಾರದವರಾಗಿದ್ದರು. ಉತ್ಸಾಹ ಶೂನ್ಯತೆಯು ಅವರನ್ನು ದುಃಖಭರಿತರನ್ನಾಗಿ ಮಾಡುತಲಿತ್ತು. ಅವರು ಯಾವ ಕೆಲಸಕ್ಕೆ ಕೈ ಹಾಕಿದರೂ ಅದೊಂದು ಮಹಾವ್ರತವೆಂಬಂತೆ ಭಾವಿಸಿ ಅದನ್ನು ನೆರವೇರಿಸುತ್ತಿದ್ದರು. ಅವರಿಗೆ ತಮ್ಮ ಸರಕಾರೀ ಉದ್ಯೋಗದ ಕೆಲಸಗಳ ಭಾರವೇ ಯಥೇಷ್ಟವಾಗಿತ್ತು. ಆದರೂ ದೇಶಸೇವೆಗಾಗಿ ನಾನಾ ರೀತಿಗಳಲ್ಲಿ, ಇತರರು ನಾಲ್ಕಾರು ಮಂದಿ ಒಟ್ಟಿಗೆ ಎಷ್ಟು ಕೆಲಸ ಮಾಡಬಹುದೋ ಅದಕ್ಕಿಂತ ಹೆಚ್ಚು ಕೆಲಸವನ್ನು, ಅವರೊಬ್ಬರೇ ಮಾಡಿದರು. ಅವರ ಮನಸ್ಸಿನ ಅಭಿನಿವೇಶವು ಅನೇಕ ವಿಷಯಗಳಲ್ಲಿದ್ದಿತು. ತತ್ತ್ವಶಾಸ್ತ್ರ, ದೇವತಾ ವಿಷಯಕಶಾಸ್ತ್ರ, ಸಮಾಜ ಶಾಸ್ತ್ರ, ಚರಿತ್ರೆ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ—ಇವುಗಳಲ್ಲೆಲ್ಲಾ ರಾನಡೆಯವರ ಆಸಕ್ತಿಯು ಸಮವಾಗಿತ್ತು.

ಈ ನಾನಾ ಶಾಸ್ತ್ರಗಳಲ್ಲಿ ಅವರಿಗೆ ವಿಸ್ತಾರವಾದ ಗ್ರಂಥಪರಿಚಿತಿ ಯಿದ್ದಿತಲ್ಲದೆ, ಅವುಗಳಲ್ಲಿ ಹೊಸ ಹೊಸದಾಗಿ ಕಂಡುಹಿಡಿದ ಅಂಶಗಳನ್ನೂ

ಅವರು ತಕ್ಕಮಟ್ಟಿಗೆ ತಿಳಿದುಕೊಳ್ಳುತ್ತಿದ್ದರು. ರಾಜಕೀಯ ವಿಚಾರದಲ್ಲಾದರೋ, ಸುಮಾರು ಹಾಗ ಶತಮಾನಕಾಲ ಅವರು ಪೂನಾ ಸಾರ್ವಜನಿಕ ಸಭೆಗೆ ಮುಖ್ಯೋತ್ತೇಜಕರಾಗಿದ್ದು, ಅದರ ತ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾದ ಪ್ರಬಂಧಗಳ ಪೈಕಿ ಮೂರರಲ್ಲಿ ಎರಡು ಭಾಗದಷ್ಟನ್ನು ಸ್ವತಃ ಬರೆದಿದ್ದರು. . . . . ಸಮಾಜ ಸಂಸ್ಕರಣ ಸಭೆಯನ್ನು ಪ್ರತಿಷ್ಠಿಸಿದವರು ಅವರೇ ; ಅದಕ್ಕಾಗಿ ಅವರು ಪಡುತ್ತಿದ್ದ ಶ್ರಮೆಯು ದೇವ ಮಾಸವರ್ರ್ವರ ಮೆಚ್ಚಿಕೆಗೂ ಯೋಗ್ಯವಾದುದು. ಅವರು ಅರ್ಥಶಾಸ್ತ್ರ ಶೋಧಕರಾಗಿಯೂ ಬೋಧಕರಾಗಿಯೂ ಇದ್ದರಲ್ಲದೆ, ಕೈಗಾರಿಕೆ ಕುಶಲವಿದ್ಯೆಗಳಿಗೆ ಸಂಬಂಧಪಟ್ಟ ವಾರ್ಷಿಕ ಸಭೆಯನ್ನೂ ಪ್ರದರ್ಶನವನ್ನೂ ಸ್ಥಾಪಿಸಿದವರಲ್ಲಿ ಅವರೊಬ್ಬರು. ಅವರು ಮಹಾರಾಷ್ಟ್ರದ ಚರಿತ್ರೆಯೊಂದನ್ನು ಬರೆದಿದ್ದಾರೆ. ಬೊಂಬಾಯಿಲ್ಲಿದ್ದಾಗ ಅವರು "ಯೂನಿವರ್ಸಿಟಿ"ಯ ವಿಚಾರಗಳಲ್ಲಿಯೂ ಪ್ರಮುಖರಾಗಿದ್ದರು. ಇವೆಲ್ಲವುಗಳ ಜೊತೆಗೆ, ಅವರು ಭರತಖಂಡದ ನಾನಾ ಭಾಗಗಳಲ್ಲಿಯೂ ಇದ್ದ ತಮ್ಮ ಮಿತ್ರರೊಡನೆಯೂ ಶಿಷ್ಯರೊಡನೆಯೂ ಪತ್ರ ಪ್ರಸಂಗವನ್ನಿಟ್ಟಿದ್ದರು. ಅನೇಕ ವರ್ಷ ಅವರು ದಿಸಂಪ್ರತಿ ಕನಿಷ್ಠ ಪಕ್ಷ ಇಪ್ಪತ್ತು ಕಾಗದಗಳನ್ನು ಬರೆಯುತ್ತಿದ್ದರು. ದೇಶಸೇವೆ ಮಾಡಲು ಆತುರರಾಗಿದ್ದವರಲ್ಲಿ ಅವರು ಪರಮಾದರವನ್ನು ತೋರಿ, ಅಂತಹ ಪ್ರತಿಯೊಬ್ಬರೊಡನೆಯೂ ಲೇಖನದ್ವಾರಾ ಸಂಬಂಧ ಬೆಳೆಯಿಸುತ್ತಿದ್ದರು. ನಮ್ಮ ಶ್ಲಾಘನೆಗೆ ಪಾತ್ರವಾಗಬೇಕಾದುದು ಅವರು ಮಾಡಿದ ಕೆಲಸಗಳ ಘನತೆ ಅಥವಾ ವಿಸ್ತಾರ ಮಾತ್ರವೇ ಅಲ್ಲ. ಆ ಕೆಲಸಗಳನ್ನು ಅವರು ಯಾವ ಭಾವದಿಂದ ಮಾಡಿದರೆಂಬುದು ಇನ್ನಷ್ಟು ಆಶ್ಚರ್ಯಕರವಾಗಿದೆ.

ಅವರು ೧೮೭೬ರಲ್ಲಿ ಹೇಳಿದ ಒಂದು ಮಾತು ನನ್ನ ಸ್ಮೃತಿಯಲ್ಲಿ ಸ್ಥಿರವಾಗಿ ನಿಂತಿದೆ. ಆ ವರ್ಷ ಸೋಲಾಪುರ, ಬಿಜಾಪುರ ಪ್ರಾಂತಗಳಲ್ಲಿ ದುರ್ಭಿಕ್ಷವುಂಟಾಗಿತ್ತು. ಆಗ ನಾನು ಸಾರ್ವಜನಿಕ ಸಭೆಯ ಕಾರ್ಯದರ್ಶಿಯಾಗಿದ್ದೆನು. ಆ ಸಭೆಯವರು ಕ್ಷಾಮಪೀಡಿತರಾಗಿದ್ದ ಜನರ ಸ್ಥಿತಿಯನ್ನು ವಿಶದಗೊಳಿಸಲು ಬೇಕಾದ ಸಂಗತಿಗಳನ್ನು ಸಂಗ್ರಹಿಸಿ, ಒಂದು ಅರ್ಜಿಯನ್ನು ಬರೆದು ಸರಕಾರಕ್ಕೆ ಕಳುಹಿಸಿದ್ದರು. ಸರಕಾರದವರಾದರೋ-

"ನಿಮ್ಮ ಅರ್ಜಿಯ ಅಂಶಗಳು ಗಮನಕ್ಕೆ ಬಂದಿವೆ"—ಎಂಬ ಅರ್ಥ ಪಂಕ್ತಿಯ ಜವಾಬನ್ನು ನಮಗೆ ಕಳುಹಿಸಿದರು. ಇದರಿಂದ ನನಗೆ ತುಂಬಾ ಆಶಾಭಂಗವುಂಟಾಗಿ, ಮಾರನೆಯದಿನ ಸಾಯಂಕಾಲ ನಾನು ರಾನಡೆಯವ ರೊಡನೆ ವ್ಯಾಯಾಮಾರ್ಥವಾಗಿ ನಡೆಯುತ್ತಿದ್ದಾಗ—"ನಾವು ಇಷ್ಟೊಂದು ಶ್ರಮಪಟ್ಟು ಬರೆದ ಅರ್ಜಿಗಳಿಗೆ ಸರಕಾರದವರು ಈ ರೀತಿ ಉತ್ತರಕೊಡು ವುದಾದರೆ ಪ್ರಯೋಜನವೇನು?" ಎಂದು ಕೇಳಿದೆನು. ಅದಕ್ಕವರು ಹೀಗೆ ಸಮಾಧಾನ ಹೇಳಿದರು:—"ನಮ್ಮ ದೇಶದ ಈಗಿನ ಸ್ಥಿತಿಯಲ್ಲಿ ನಾವು ಮಾಡಬೇಕಾಗಿರುವ ಕರ್ತವ್ಯವು ನಿನಗೆ ತಿಳಿದಂತಿಲ್ಲ. ನಮ್ಮ ಅರ್ಜಿಗಳು ಹೆಸರಿನಲ್ಲಿ ಸರಕಾರಕ್ಕೆ ಬರೆಯಲ್ಪಟ್ಟಿದ್ದರೂ, ಯಥಾರ್ಥದಲ್ಲಿ ಅವು ಜನರಿಗೆ ಬರೆಯಲ್ಪಟ್ಟುವೇ. ಈ ವಿಷಯಗಳಲ್ಲಿ ಹೇಗೆ ಆಲೋಚನೆ ಮಾಡಬೇಕೆಂಬುದನ್ನು ಅವು ಜನರಿಗೆ ಕಲಿಸಿಕೊಡುತ್ತವೆ. ಬೇರೆ ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ ಈ ಕೆಲಸವನ್ನು ನಾವು ಬಹುಕಾಲ ಮಾಡ ಬೇಕು; ಏಕೆಂದರೆ, ಈ ಬಗೆಯ ರಾಜಕೀಯ ವ್ಯವಹಾರವು ನಮ್ಮ ದೇಶಕ್ಕೆ ತೀರಾ ಹೊಸದು. ಅದಲ್ಲದೆ, ಸರಕಾರದವರು ನಮ್ಮ ಹೇಳಿಕೆ ಯನ್ನು ಗಮನಿಸಿದೇವೆಂದು ಹೇಳಿದರೂ ಅದೊಂದು ಲಾಭವೇ".

ರಾನಡೆಯವರ ನಡತೆಯಲ್ಲಿ ಮತ್ತೊಂದು ವಿಶೇಷವೇನೆಂದರೆ— ಅವರು ಯಾವ ಕಾರ್ಯವನ್ನಾದರೂ, ಎಷ್ಟು ಸಣ್ಣದನ್ನಾದರೂ, ಮಾಡಲು ಸಿದ್ಧರಾಗಿರುತ್ತಿದ್ದುದು. ದೇವಸ್ಥಾನವನ್ನು ಕಟ್ಟುವುದರಲ್ಲಿ ಮುಖ್ಯ ಶಿಲ್ಪಿಯ ಅಧಿಕಾರವೇ ತಮಗೆ ಬೇಕೆಂದು ಅವರು ಹಟ ಹಿಡಿಯುತ್ತಿರಲಿಲ್ಲ; ಕಟ್ಟಡಕ್ಕೆ ಬೇಕಾದ ಇಟ್ಟಿಗೆ ಕಲ್ಲುಗಳನ್ನು ಬೆನ್ನಿನಮೇಲೆ ಹೊತ್ತುಕೊಂಡು ಬರುವುದಕ್ಕೂ ಅವರು ಸಿದ್ಧರಾಗಿರುತ್ತಿದ್ದರು. ದೇಶಸೇವಾಕಾರ್ಯದಲ್ಲಿ, ಸಾರ್ವಜನಿಕ ಹಿತಕ್ಕಾಗಿ ತಾವು ಒಂದು ಅಗೌರವವನ್ನು ಸಹಿಸುವುದು ಆವಶ್ಯಕವೆಂದು ತೋರಿದಲ್ಲಿ, ಅದಕ್ಕೂ ಅವರು ಹಿಂದೆಗೆಯುತ್ತಿರಲಿಲ್ಲ. ಇದಕ್ಕೆ ದೃಷ್ಟಾಂತವಾಗಿ ೧೮೮೫ರಲ್ಲಿ ಒಂದು ಸಂಗತಿ ನಡೆಯಿತು. ಆ ವರ್ಷ, ಲಾರ್ಡ್ ರಿಪ್ಪನ್‌ರವರ ಉದಾರಶಾಸನದಂತೆ, ನಮ್ಮ "ಮ್ಯುನಿಸಿಪಲ್" ಸಂಸ್ಥೆಗಳು ತಿದ್ದುಪಾಟಾದವು. ಪ್ರಜೆಗಳು ಪ್ರತಿನಿಧಿಗಳನ್ನಾರಿಸುವ

ಪದ್ಧತಿಯು ಮೊದಲಾದುದು ಆಗಲೇ. ಪೂನಾ ಪಟ್ಟಣದಲ್ಲಿ ಆಗ ಪ್ರತಿನಿಧಿಗಳ ಚುನಾವಣೆಯ ಗದ್ದಲವು ವಿಶೇಷವಾಗಿತ್ತು. ಆ ವರ್ಷಕ್ಕೆ ಮುಂಚೆ ಪೂನಾದಲ್ಲಿ ಮ್ಯುನಿಸಿಪಲ್ ಆಡಳಿತವು ಸರಕಾರೀ ಅಧಿಕಾರಿಗಳದಾಗಿಯೇ ಇತ್ತು. ಆಗ ನಡೆಯಬೇಕಾಗಿದ್ದ ವೂರ್ಪಾಟಿನ ಮೂಲಕ ಮ್ಯುನಿಸಿಪಲ್ ಅಧಿಕಾರವು ಪ್ರಜಾಪ್ರತಿನಿಧಿಗಳಿಗೆ ದೊರೆಯಬೇಕೆಂದು ರಾನಡೆಯವರು ತುಂಬಾ ಕುತೂಹಲಪಟ್ಟಿದ್ದರು. ಆದರೆ ಆಗ ಪುಣೆಯ ಮತ್ತೊಬ್ಬ ಪ್ರಸಿದ್ಧ ನಾಗರಿಕರಾಗಿದ್ದ ಮ||ರಾ|| ಕುಂಟೆಯವರು ದುರದೃಷ್ಟವಶಾತ್ ಸರಕಾರೀ ನೌಕರರ ಪಕ್ಷಕ್ಕೆ ಬೆಂಬಲವಾಗಿ ನಿಂತರು. ರಾನಡೆಯವರೂ ಕುಂಟೆಯವರೂ ಚಿಕ್ಕಂದಿನಿಂದಲೂ ಸಹಪಾಠಿಗಳಾಗಿಯೂ ಸ್ನೇಹಿತರಾಗಿಯೂ ಇದ್ದರು. ಆದರೂ, ಕುಂಟೆಯವರು ಸರಕಾರೀ ನೌಕರರ ಪಕ್ಷವನ್ನು ವಹಿಸಿದ ವಿಷಯದಲ್ಲಿ ರಾನಡೆಯವರು ತಮ್ಮ ಅಸಮಾಧಾನವನ್ನು ತೀಕ್ಷ್ಣ ವಚನಗಳಿಂದ ತಿಳಿಯಪಡಿಸಿದರು. ವಾಕ್ಪ್ರವೀಣರಾಗಿದ್ದ ಕುಂಟೆಯವರು ಅದಕ್ಕೆ ಪ್ರತಿಯಾಗಿ ಪ್ರಜಾಪಕ್ಷಕ್ಕೆ ವಿರೋಧವಾದ ಸಭೆಗಳನ್ನು ಸೇರಿಸಲು ಮೊದಲುಮಾಡಿದರು. ಇದರಿಂದ ಸ್ವಲ್ಪಕಾಲ ಕೋಪ ತಾಪಗಳು ಉಲ್ಬಣವಾಗಿ, ಈ ಹೋರಾಟವನ್ನು ಸರಕಾರವು ವಿಪರ್ಯಯವಾಗಿ ಎಣಿಸುವಂತೆ ಕಂಡುಬಂದಿತು. ಆಗ ಕುಂಟೆಯವರನ್ನು ಸಮಾಧಾನಗೊಳಿಸುವುದು ಎಲ್ಲರಿಗೂ ಲೇಸೆಂದು ರಾನಡೆಯವರಿಗೆ ತೋರಿತು. ಆ ಉದ್ದೇಶದಿಂದ ಅವರು ಕುಂಟೆಯವರು ಸೇರಿಸಿದ್ದ ಒಂದು ಸಭೆಗೆ ಹೋದರು. ತಮ್ಮನ್ನು ಕುಂಟೆಯವರು ಪ್ರತಿಯೊಂದು ಸಭೆಯಲ್ಲಿಯೂ ಯಥೇಷ್ಟವಾಗಿ ದೂಷಿಸುತ್ತಿದ್ದರೆಂಬುದು ರಾನಡೆಯವರಿಗೆ ಅದಕ್ಕೆ ಮೊದಲೇ ತಿಳಿದಿತ್ತು. ಆದರೂ ರಾನಡೆಯವರು ಕುಂಟೆಯವರ ಭಾಷಣವನ್ನು ಕೇಳಲು "ರಾಸ್ತೇ" ಪೇಟೆಯಲ್ಲಿಯ ಸಭಾಗೃಹಕ್ಕೆ ಬಂದರು. ಆಗ ನಾವೆಲ್ಲರೂ ನೆಲದಮೇಲೆ ಕುಳಿತಿದ್ದೆವು. ಕುಂಟೆಯವರು ಆ ಹಜಾರದ ಒಂದು ಕಡೆಯ ಗೋಡೆಯ ಬಳಿ ನಿಂತು ಉಪನ್ಯಸಿಸುತ್ತಿದ್ದರು; ಇನ್ನೊಂದು ಕೊನೆಯ ಗೋಡೆಯಲ್ಲಿ ಹಜಾರದ ಬಾಗಿಲಿತ್ತು. ಕುಂಟೆಯವರು ಮಾತನಾಡಲಾರಂಭಿಸಿ ಕೆಲವು ನಿಮಿಷಗಳಾದ ಮೇಲೆ ರಾನಡೆಯವರು ಆ ಸಭಾಮಂದಿರವನ್ನು ಅಕಸ್ಮಾ

ತ್ತಾಗಿ ಪ್ರವೇಶಿಸಿ, ಅದರ ಬಾಗಿಲ ಸಮೀಪದಲ್ಲಿ ಇತರರಂತೆಯೇ ನೆಲದ ಮೇಲೆ ಕೂತುಕೊಂಡರು. ತತ್‌ಕ್ಷಣವೇ ಕುಂಟೆಯವರು ಹಿಂದಕ್ಕೆ ತಿರುಗಿ, ರಾನಡೆಯವರ ಕಡೆಗೆ ಬೆನ್ನುಮಾಡಿ ಗೋಡೆಗಭಿಮುಖವಾಗಿ ನಿಂತು, ಕೆಲವು ಮಾತುಗಳನ್ನು ಗೊಣಗುಟ್ಟಿ ಕುಳಿತುಬಿಟ್ಟರು. ಕೂಡಲೇ ರಾನಡೆಯವರು ಎದ್ದು ಅವರ ಬಳಿಗೆ ಹೋಗಿ ಅವರ ಪಕ್ಕದಲ್ಲಿ ಕುಳಿತರು. ಸಭೆಯು ಮುಗಿಯಿತು. ರಾನಡೆಯವರು ಕುಂಟೆಯವರನ್ನು ತಮ್ಮೊಡನೆ ತಮ್ಮ ಗಾಡಿಯಲ್ಲಿ ವಾಯು ವಿಹಾರಾರ್ಥವಾಗಿ ದಯಮಾಡಬೇಕೆಂದು ಪ್ರಾರ್ಥಿಸಿದರು. ಕುಂಟೆಯವರು ಒರಟುತನದಿಂದ "ನಿಮ್ಮ ಗಾಡಿಯಲ್ಲಿ ಬರಲು ಇಷ್ಟವಿಲ್ಲ" ಎಂದು ಒದರಿ, ತಮ್ಮ ಸ್ವಂತ ಗಾಡಿಯನ್ನು ಹತ್ತಿದರು. ರಾನಡೆಯವರು ಅವರನ್ನೇ ಅನುಸರಿಸಿ—"ಒಳ್ಳೆಯದಾಯಿತು; ನನ್ನೊಡನೆ ನನ್ನ ಗಾಡಿಯಲ್ಲಿ ನೀವು ಬಾರದಿದ್ದರೆ ನಿಮ್ಮೊಡನೆ ನಿಮ್ಮ ಗಾಡಿಯಲ್ಲಿ ನಾನು ಬರುವೆನು" ಎಂದು ಹೇಳುತ್ತ ಕುಂಟೆಯವರ ಗಾಡಿಯೊಳಕ್ಕೇ ಪ್ರವೇಶಿಸಿದರು. ಇಷ್ಟಾದಮೇಲೆ ರಾನಡೆಯವರನ್ನು ದೂರಮಾಡುವುದು ಕುಂಟೆಯವರಿಗೆ ಅಸಾಧ್ಯವಾಯಿತು. ಅವರಿಬ್ಬರೂ ಗಾಡಿಯಲ್ಲಿ ಕುಳಿತು ದೂರ ಒಟ್ಟಿಗೆ ಹೋಗಿ, ಹಿಂದಿರುಗಿ ಬಂದಾಗ ಎಲ್ಲವೂ ಸಮಾಧಾನ ಸ್ಥಿತಿಗೆ ಬಂದಿತ್ತು. ಕುಂಟೆಯವರ ಕೋಪವು ತಣ್ಣಗಾಗಿ, ಅವರು ಪ್ರಜಾಪಕ್ಷಕ್ಕೆ ತೋರಿಸಿದ್ದ ವಿರೋಧವು ಮಾಯವಾಗಿತ್ತು.

ಇಷ್ಟು ಹೊತ್ತೂ ನಾನು ರಾನಡೆಯವರ ಸರ್ವಗ್ರಾಹಿಯಾದ ಬುದ್ಧಿ, ಸಮಾಹಿತವಾದ ಮನಸ್ಸು, ದೇಶಭಕ್ತಿ, ಕಾರ್ಯೋತ್ಸಾಹ ಇವುಗಳನ್ನು ಕುರಿತು ಪ್ರಸ್ತಾವಿಸಿದ್ದೇನೆ. ಅವರ ಉದಾತ್ತ ಭಾವವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುವೆನು. ಅವರ ಸ್ವಭಾವವು ಸಾಧು ಸಹಜವಾದುದು. ಅದು ಅವರ ಬುದ್ಧಿ ಕುಶಲತೆಗಿಂತಲೂ ಹೆಚ್ಚಾಗಿ ಇಂಡಿಯಾದೇಶದ ನಾನಾ ಭಾಗಗಳವರ ವಿಶ್ವಾಸವನ್ನೂ ಗೌರವವನ್ನೂ ಅವರಿಗೆ ಸಂಪಾದಿಸಿಕೊಟ್ಟಿತ್ತು. ಅವರ ಬಳಿಗೆ ಹೋದ ಕಿರಿಯ ವಯಸ್ಸಿನವರು ಅವರ ಸಾನ್ನಿಧ್ಯದ ಪವಿತ್ರತೆಯ ಮಹಿಮೆಗೊಳಗಾಗಿ, ದುರುಕ್ತಿಗಳನ್ನಾಡುವುದಕ್ಕೆ ಮಾತ್ರವಲ್ಲದೆ ದುರಾಲೋಚನೆಗಳನ್ನು ಯೋಚಿಸುವುದಕ್ಕೂ

ಮನಸ್ಸು ಬಾರದವರಾಗಿರುತ್ತಿದ್ದರೆಂಬುದು ಅತಿಶಯೋಕ್ತಿಯಲ್ಲ. ನನ್ನ ಅನುಭವದಲ್ಲಿ ಆ ವಿಧದ ಮಹಿಮೆಯುಳ್ಳವರು ಇನ್ನೊಬ್ಬರುಮಾತ್ರ ಇರುವರು. ಅವರು ದಾದಾಭಾಯಿ ನವರೋಜಿಯವರೇ.

ರಾನಡೆಯವರ ಗುಣಗಳಲ್ಲೆಲ್ಲಾ ಅತ್ಯಂತ ಪ್ರಧಾನವಾದುದು ಅವರ ಸ್ವಾರ್ಥತ್ಯಾಗ. ನಾನು ಮೇಲೆ ಹೇಳಿರುವಂತೆ, ಅವರು ಅನೇಕ ಮಾರ್ಗಗಳಲ್ಲಿ ಅವಿಚ್ಛಿನ್ನವಾಗಿ ಕೆಲಸಮಾಡುತ್ತಿದ್ದರು ; ಆದರೆ ಅದಕ್ಕೆ ಸಲ್ಲಬೇಕಾದ ಮನ್ನಣೆಯನ್ನು ಎಂದೂ ಅಪೇಕ್ಷಿಸಿದವರಲ್ಲ. ಇತರರನ್ನು ಕೀರ್ತಿವಂತರಾಗಲು ಮುಂದೆ ಬಿಟ್ಟು, ತಾವು ಹಿಂದೆ ಗೋಪ್ಯವಾಗಿ ಕೆಲಸ ಮಾಡುವುದೇ ರಾನಡೆಯವರಿಗೆ ಇಷ್ಟವಾಗಿತ್ತು. ಇತರರಿಗೆ ಪ್ರಾಶಸ್ತ್ಯ ಕೊಡುವುದೇ ಅವರ ತಾತ್ಪರ್ಯ. ''ನಾನು ಇದನ್ನು ಮಾಡಿದೆ, ನಾನು ಅದನ್ನು ಮಾಡಿದೆ''-ಎಂದು ರಾನಡೆಯವರು ಹೇಳಿದ್ದನ್ನು ಯಾರೂ ಕೇಳಿ ಅರಿಯರು. ಅವರ ಶಬ್ದಕೋಶದಲ್ಲಿ 'ನಾನು' ಎಂಬ ಮಾತೇ ಇದ್ದಂತೆ ತೋರುವುದಿಲ್ಲ.

ಅಷ್ಟು ತಿಳಿದವರಾಗಿದ್ದರೂ ತಾವು ಅಲ್ಪಜ್ಞರೆಂದೇ ಭಾವಿಸಿಕೊಂಡು ಆತ್ಮ ಶಿಕ್ಷಣವನ್ನು ಮಾಡಿಕೊಳ್ಳುತಿದ್ದುದು ಅವರ ಮಹಾಗುಣಗಳಲ್ಲಿ ಮತ್ತೊಂದು . . . . . . . . . . ತಮ್ಮ ಮತ್ತು ತಮ್ಮ ಅಭಿಪ್ರಾಯಗಳ ವಿಷಯವಾಗಿ ಬಂದ ದೂಷಣ ಭೂಷಣಗಳನ್ನೆಲ್ಲಾ—ಮುಖ್ಯವಾಗಿ ದೂಷಣೆಗಳನ್ನೆಲ್ಲಾ—ಅವರು ಶ್ರದ್ಧೆಯಿಂದ ತಿಳಿದುಕೊಂಡು, ಅದರಿಂದ ತಮ್ಮ ನಡೆನುಡಿಗಳನ್ನು ತಿದ್ದಿ ಸರಿಪಡಿಸಿಕೊಳ್ಳಲು ಪುನಃಪುನಃ ಯತ್ನಿಸುತ್ತಿದ್ದರು. . . . . ಅವರ ಮತ್ತೊಂದು ಸದ್ಗುಣವು ಪರೋಪಕಾರತತ್ಪರತೆ. ಅವರು ಸರ್ವರಿಗೂ ಸುಲಭರಾಗಿ, ಎಂತಹ ಅಲ್ಪರಿಗಾದರೂ ಎಷ್ಟುಹೊತ್ತಿನಲ್ಲಾದರೂ ಸಿಕ್ಕುತ್ತಿದ್ದರು. ಅವರಿಗೆ ಕಾಗದ ಬರೆದ ಮೇಲೆ ಜವಾಬು ಪಡೆಯದಿದ್ದವನಿಲ್ಲ. ಆರ್ತನಾಗಿ ಬಂದವನಿಗೆ ವಿಶ್ವಾಸವನ್ನು ತೋರಿ,—ಸಹಾಯ ಮಾಡುವುದು ತಮ್ಮಿಂದ ಸಾಧ್ಯವಾಗಲಿ, ಆಗದಿರಲಿ,—ಅವನ ಹೇಳಿಕೆಯನ್ನು ತಾಳ್ಮೆಯಿಂದ ಕೇಳುತ್ತಿದ್ದರು. ಈ ವಿನಯಭಾವವು ಅವರ ನಿತ್ಯ ಧರ್ಮದಲ್ಲಿ ಒಂದಂಶವಾಗಿತ್ತು.

ಎಂಬ ಆಟವನ್ನು ಕಲಿತುಕೊಂಡು, ಆ ಆಟದಲ್ಲಿ ಪ್ರವೀಣರೆನಿಸಿದ್ದ ಕಾಲೆನ್‌ಬಾಕ್‌ರವರನ್ನು ಸೋಲಿಸಿಯೂ ಬಿಟ್ಟರು. ಆ ಮೇಲೆ ಅವರು, ನಾನು ಬರಿಯ ಆಟದಲ್ಲಿ ಆಸಕ್ತಿಯಿಲ್ಲದವನೆಂಬ ಶಂಕೆಯಿಂದ, ನನಗೆ ಈ ರೀತಿ ಸ್ನೇಹ ವಚನಗಳಿಂದ ಹೇಳಿದರು :— 'ನಾನು ಯೂರೋಪಿಯನರೊಡನೆ ಹೀಗೆ ಪಂಥಮಾಡುವುದೇಕೆ ? ನಿಮಗೆ ಗೊತ್ತಿದೆಯೆ ? ನಾವು ಎಲ್ಲ ವಿಷಯಗಳಲ್ಲಿಯೂ ಅವರಿಗಿಂತ ಕಡಿಮೆಯೆಂದು ಹೇಳುವುದುಂಟು. ಆದರೆ, ನಾವು ಅವರಿಗಿಂತ ಉತ್ತಮರೆಂದು ತೋರಿಸುವುದು ನನ್ನಿಂದ ಆಗದಿದ್ದರೂ, ಅವರಿಗೆ ಸಮವಾಗಿಯಾದರೂ ನಾವು ಇರಲಾಗುವುದು ಎಂಬುದನ್ನು ತೋರಿಸುವುದೇ ನನ್ನ ಉದ್ದೇಶ.''

ಆ ಪ್ರಯಾಣದ ಕಾಲದಲ್ಲಿ ಗೋಖಲೆಯವರು ನಮ್ಮ ದೇಶಕ್ಕಾಗಿ ಮಾಡಬೇಕಾಗಿರುವ ಕಾರ್ಯಗಳನ್ನೆಲ್ಲ ನನಗೆ ವಿವರಿಸಿ, ಒಂದು ವಿಶೇಷವಾದ ಮಾತನ್ನು ಹೇಳಿದರು. ಅದೇನೆಂದರೆ :—'' ಇಂಡಿಯದಲ್ಲಿ ನಮ್ಮ ನಡತೆಯು ತಕ್ಕಮಟ್ಟಿಗೆ ಇಲ್ಲ. ನಾವು ರಾಜಕೀಯ ವಿಚಾರದಲ್ಲಿ ಧರ್ಮೋತ್ಸಾಹವನ್ನು ತೋರಬೇಕಾಗಿದೆ.''

ಗೋಖಲೆಯವರು ತಮ್ಮ ಮತವನ್ನು ಮೈಯ ಮೇಲ್ಗಡೆ ತೋರಿಸಿಕೊಂಡಿರಲಿಲ್ಲ ; ಅದು ಅವರ ಜೀವನದಲ್ಲಿ ವ್ಯಾಪಿಸಿತ್ತು. ಅವರು ಸೋಕಿದುದೆಲ್ಲ ಪರಿಶುದ್ಧವಾಯಿತು ; ಅವರು ನಡೆದ ಕಡೆಯೆಲ್ಲ ಪರಿಮಳದ ಸಾನ್ನಿಧ್ಯವಾಯಿತು.

## (೩)

೧೯೨೧ರಲ್ಲಿ ಯಾರೋ ಒಬ್ಬರು ಗಾಂಧಿಯವರನ್ನು ಕುರಿತು—'' ನೀವು ಬಾಲಗಂಗಾಧರ ತಿಲಕರನ್ನು ಅನುಸರಿಸಿ ಕೆಲಸಮಾಡುತ್ತಿದ್ದೀರಿ ; ನೀವು ಗೋಖಲೆಯವರ ಶಿಷ್ಯರೆಂದು ಹೇಳಿಕೊಳ್ಳುವುದು ಅಸಂಗತ '' ಎಂದು ಆಕ್ಷೇಪಿಸಿ ಕಾಗದ ಬರೆಯಲು, ಅದಕ್ಕೆ ಪ್ರತ್ಯುತ್ತರವಾಗಿ ಗಾಂಧಿಯವರು ಒಂದು ದೊಡ್ಡ ಲೇಖನವನ್ನು ಪ್ರಕಟಿಸಿ ಅದರಲ್ಲಿ ಹೀಗೆ ಹೇಳಿದರು :—

'' ನಾನು ಗೋಖಲೆಯವರನ್ನು ಮೊದಲನೆಯ ಸಾರಿ ೧೮೯೬ರಲ್ಲಿ ಫರ್ಗುಸನ್ ಕಾಲೇಜಿನ ಪ್ರಾಕಾರದೊಳಗಿದ್ದ ಅವರ ಮನೆಯಲ್ಲಿ ಕಂಡೆನು. ಅದು ಒಬ್ಬ ಹಳೆಯ ಸ್ನೇಹಿತನನ್ನು ಕಂಡಂತೆ ಇತ್ತು ; ಅಥವಾ, ಬಹುಕಾಲ ಅಗಲಿದ್ದ ಬಳಿಕ ತಾಯಿಯನ್ನು ಮರಳಿ ಕಂಡಂತೆ ಆಯಿತೆಂದರೆ ಇನ್ನೂ ಸರಿಯಾಗುವುದು. ಅವರ ಸೌಮ್ಯವುಳ್ಳ ಮುಖವು ನನ್ನ ಕಷ್ಟಗಳನ್ನೆಲ್ಲಾ ಪರಿಹರಿಸಿತು. ಅವರು ನನ್ನ ವಿಷಯವನ್ನೂ ದಕ್ಷಿಣ ಆಫ್ರಿಕದಲ್ಲಿ ನಾನು ಮಾಡುತ್ತಿದ್ದ ಕೆಲಸದ ವಿಷಯವನ್ನೂ ಕುರಿತು ಮಾಡಿದ ವಿಚಾರಣೆಯ ರೀತಿಯು ನನ್ನ ಹೃದಯದಲ್ಲಿ ಅವರನ್ನು ಶಾಶ್ವತ ಪದಾರೂಢರನ್ನಾಗಿ ಮಾಡಿತು. ಅವರಿಂದ ನಾನು ಅಪ್ಪಣೆ ತೆಗೆದುಕೊಂಡು ಹೊರಟಾಗ, ' ನೀವೀಗ ನನ್ನವರು '—ಎಂದು ಮನಸ್ಸಿನಲ್ಲಿಯೇ ಎಂದುಕೊಂಡೆನು. ಅಲ್ಲಿಂದೀಚೆಗೆ ಗೋಖಲೆಯವರು ನನ್ನನ್ನು ಎಂದೂ ಮರೆತಿರಲಿಲ್ಲ.

ಅವರು ನನ್ನನ್ನು ತಮ್ಮ ಕೈಯಿಂದ ಹಿಡಿದು ತಿದ್ದಿದರು. ನನ್ನ ಮಾತು, ನನ್ನ ಉಡಿಗೆ, ನನ್ನ ನಡಿಗೆ, ನನ್ನ ಊಟ—ಇವೆಲ್ಲವುಗಳ ವಿಷಯದಲ್ಲಿಯೂ ಅವರು ಚಿಂತೆಪಡುತ್ತಿದ್ದರು. ನನ್ನಲ್ಲಿ ಅವರಿಗಿದ್ದ ಮಮತೆಗಿಂತ ನಮ್ಮ ತಾಯಿಯ ಮಮತೆಯು ಕೂಡ ಹೆಚ್ಚಿನದಾಗಿರಲಿಲ್ಲ. ನಮ್ಮಿಬ್ಬರಿಗೂ ಪರಸ್ಪರ ಭಿನ್ನಭಾವವು ಎಷ್ಟು ಮಾತ್ರವೂ ಇರಲಿಲ್ಲ. ರಾಜಕೀಯ ಕಾರ್ಯಕರ್ತನಲ್ಲಿ ಯಾವ ಯಾವ ಗುಣಗಳಿರಬೇಕೆಂದು ನಾನು ತಿಳಿದುಕೊಂಡಿದ್ದೆನೋ ಅವೆಲ್ಲವೂ ಅವರಲ್ಲಿದ್ದಂತೆ ನನ್ನ ದೃಷ್ಟಿಗೆ ಕಾಣುತ್ತಿತ್ತು :—ಸ್ಫಟಿಕದಲ್ಲಿರುವಂತಹ ನೈರ್ಮಲ್ಯ, ಹುಲ್ಲೆಗರುವಿನಲ್ಲಿರುವಂತಹ ಸೌಮ್ಯ, ಸಿಂಹದಲ್ಲಿರುವಂತಹ ಧೈರ್ಯ, ಮಿತಿಮೀರಿಲ್ಲವೇ ಎನ್ನಿಸುವಷ್ಟರ ಮಟ್ಟಿನ ಉದಾರಭಾವ. ರಾಜ್ಯಕಾರ್ಯಕ್ಷೇತ್ರದಲ್ಲಿ ನನ್ನ ಕಣ್ಣಿಗೆ ಸಕಲಗುಣ ಪರಿಪೂರ್ಣರಾದ ಆದರ್ಶಪುರುಷರಾಗಿರುವವರು ಅವರೇ''.

---

## ಯೂರೋಪಿಯನರಿಂದ ಸನ್ಮಾನ

೧೯೧೮ನೆಯ ಇಸವಿ ಮಾರ್ಚಿ ೨೨ರಲ್ಲಿ ಭರತಖಂಡದ ಮಹಾರಾಜಧಾನಿಯಾದ ದೆಹಲೀ ಪಟ್ಟಣದಲ್ಲಿ ವೈಸ್‌ರಾಯರವರ ಸಾರ್ವದೇಶೀಯ ಶಾಸನ ಸಭೆಯ ಭವನದಲ್ಲಿ ಗೋಖಲೆಯವರ ಶಿಲಾಪ್ರತಿಮೆಯೊಂದು ಪ್ರತಿಷ್ಠಿಸಲ್ಪಟ್ಟಿತು. ಆ ಪ್ರತಿಮೆಯನ್ನು ಆ ಸಭೆಯ ಐರೋಪ್ಯ ಸದಸ್ಯರು ಮಾತ್ರವೇ ಚಂದಾ ಹಾಕಿ ತಯಾರುಮಾಡಿಸಿದ್ದರು. ಯೂರೋಪಿಯನರು ಗೋಖಲೆಯವರಲ್ಲಿಟ್ಟಿರುವ ಗೌರವವನ್ನು ಸೂಚಿಸಬೇಕೆಂಬುದೇ ಅದರ ಉದ್ದೇಶ. ಆ ಪ್ರತಿಮೆಯನ್ನು ಪ್ರಕಾಶಗೊಳಿಸಿರುವ ಸಮಯದಲ್ಲಿ ರಾಜ್ಯಕೋಶಾಧ್ಯಕ್ಷರಾದ ಸರ್ ವಿಲಿಯಂ ಮೇಯರ್ ಮಹಾಶಯರು ಈ ರೀತಿ ಹೇಳಿದರು :—

" ಪ್ರಜಾಪ್ರಮುಖರಿಗೆ ಇರಬೇಕಾದ ಗುಣಗಳು ಗೋಖಲೆಯವರಿಗೆ ಹುಟ್ಟುತಲೇ ಬಂದಿದ್ದವು. ಅವರು ದೃಢವ್ರತರು; ಆದರೂ ಸದ್ಯಕ್ಕೆ ಸಾಧ್ಯವಾವುದೆಂಬದನ್ನರಿತು ನಡೆಯಬಲ್ಲ ರಾಜ್ಯತಂತ್ರಜ್ಞರು. ಬೇಕಾದಾಗ ಅವರು ಜಾಗರೂಕತೆಯಿಂದ ಚುರುಕಾದ ರೀತಿಯಲ್ಲಿ ಸರ್ಕಾರವನ್ನು ಆಕ್ಷೇಪಿಸಬಲ್ಲವರಾಗಿದ್ದರು; ಆದರೆ ಆವಶ್ಯಕವಾದಾಗ ಮಾತ್ರವೇ,—ಸಂಪೂರ್ಣವಾಗಿ ವಿಷಯವನ್ನು ತಿಳಿದುಕೊಂಡಮೇಲೆಯೇ,—ಆಕ್ಷೇಪಿಸುವರು. ಮತ್ತು ಬರಿಯ ಆಕ್ಷೇಪಣೆಗಳಿಂದಲೇ ತೃಪ್ತರಾಗುತ್ತಿರಲಿಲ್ಲ; ಅವರಲ್ಲಿ ಉಪಯುಕ್ತವಾದ ಸಲಹೆಗಳು ಹೇರಳವಾಗಿದ್ದುವು. ಅವರ ಅದ್ಭುತ ಮೇಧಾಶಕ್ತಿಯನ್ನು ಪುಷ್ಟೀಕರಿಸುವುದಕ್ಕೆ ಶ್ರೇಷ್ಠಗಳಾದ ಬಾಹ್ಯಲಕ್ಷಣಗಳೂ, ದೃಢಸಂಕಲ್ಪವೂ, ಸ್ವಚ್ಛವಾದ ಅಕೃತ್ರಿಮ ಭಾವವೂ, ಸಾರ್ವಜನಿಕ ಹಿತಾರ್ಥವಾದ ಆತ್ಮನಿವೇದನೆಯೂ, ಸ್ನೇಹಸಂಪಾದಕವಾದ ಪ್ರತಿಭಾವಿಶೇಷವೂ, ಉಪದೇಶಕ್ಕೆ ಸುಲಭವೂ ಅನುಷ್ಠಾನಕ್ಕೆ ಕಷ್ಟವೂ ಆದ ಪ್ರತಿವಾದಿ ಸಹನೆಯೂ ಸೇರಿದ್ದುವು. . . . ಅಂತಹ ಗುಣನಿಧಿಯಾದ

೧೮೯೭ನೆಯ ಇಸವಿಯಲ್ಲಿ ಅಮರಾವತಿಯಿಂದ "ಕಾಂಗ್ರೆಸ್" ಸಭೆಯನ್ನು ಮುಗಿಸಿಕೊಂಡು, ನಾನೂ ಅವರೂ ಹಿಂದಿರುಗುತ್ತಿದ್ದೆವು. ಗಾಡಿಯಲ್ಲಿ ನಾವಿಬ್ಬರೇ ಇದ್ದೆವು. ಬೆಳಗಿನಜಾವ ಸುಮಾರು ನಾಲ್ಕು ಘಂಟೆಯ ಹೊತ್ತಿನಲ್ಲಿ ನಿದ್ದೆಮಾಡುತ್ತಿದ್ದ ನನಗೆ, ಗಾಡಿಯಲ್ಲಿ ಯಾರೋ ಹಾಡಿದಂತಾಗಿ, ಥಟಕ್ಕನೆ ಎಚ್ಚರವಾಯಿತು. ಕಣ್ತೆರದು ನೋಡಲು, ರಾನಡೆಯವರು ಎದ್ದು ಕುಳಿತು, ಕೈಯಿಂದ ತಾಳಹಾಕುತ್ತ, ಸಾಧು ತುಕಾರಾಮನ ಎರಡು ಕೀರ್ತನೆಗಳನ್ನು ಪುನಃಪುನಃ ಹಾಡುತ್ತಿದ್ದುದನ್ನು ಕಂಡೆನು. ಅವರ ಧ್ವನಿಯು ಅಷ್ಟೇನೂ ಮಧುರವಾದುದಲ್ಲ; ಆದರೆ ಅವರ ಗಾನರಭಸದಿಂದ ನನ್ನ ಅಂತರಂಗವೆಲ್ಲವೂ ಪರಿಪೂರಿತವಾಗಿ, ನಾನೂ ಎದ್ದು ಕುಳಿತು ಆ "ಅಭಂಗ" (ಮರಾಠೀ ಕೀರ್ತನೆ)ಗಳನ್ನು ಕೇಳಿದೆನು. ಅವುಗಳ ಅರ್ಥವೇನೆಂದರೆ:

"ಯಾರು ಅನಾಥರಿಗೂ ಆಪತ್ತಿನಲ್ಲಿರುವವರಿಗೂ ಬಂಧುವಾಗುತ್ತಾನೆಯೋ ಆತನೇ ನಿಜವಾದ ಸಾಧು ಆತನಲ್ಲಿ ದೇವರು ಪ್ರತ್ಯಕ್ಷನಾಗಿರುತ್ತಾನೆ."

"ನಮ್ರಭಾವವುಳ್ಳವನಾಗಿ ಸಾಧುಗಳ ಚರಣವನ್ನು ಸೇವಿಸು. ದೇವರನ್ನು ಕಾಣುವುದಕ್ಕೆ ಅದೇ ಸುಲಭೋಪಾಯ."

ಈ ಪದ್ಯಗಳನ್ನು ನಾನು ಕೇಳಿದೊಡನೆಯೆ, ರಾನಡೆಯವರು ಅವುಗಳನ್ನು ಆಚರಣೆಗೆ ತಂದುಕೊಳ್ಳಲು ಹೇಗೆ ಪ್ರಯತ್ನಿಸುತ್ತಿದ್ದರೆಂಬುದೂ ಆ ತತ್ತ್ವೋಪದೇಶವು ಎಷ್ಟು ಸರಳವೂ ಎಷ್ಟು ಮಹಿಮಾವಿಶಿಷ್ಟವೂ ಆದುದೆಂಬುದೂ ನನ್ನ ಮನಸ್ಸಿಗೆ ಚೆನ್ನಾಗಿ ಗೋಚರವಾಯಿತು. ನನ್ನ ಜೀವಮಾನದಲ್ಲಿ ಆ ನಿಮಿಷವೇ ಅತ್ಯಂತ ಪುಣ್ಯಭರಿತವಾದುದು. ಆ ಅನುಭವ ಕುಸುಮವು ನನ್ನ ಸ್ಮೃತಿವನದಲ್ಲಿ ಎಂದೆಂದಿಗೂ ಬಾಡಲಾರದು.

---

## ದಾದಾಭಾಯಿ ನವರೋಜಿಯವರು

೧೯೦೫ನೆಯ ಇಸವಿ ಸೆಪ್ಟಂಬರ್ ತಿಂಗಳಲ್ಲಿ ದಾದಾಭಾಯಿ ನವರೋಜಿಯವರ ೮೧ನೆಯ ವರ್ಷ ವರ್ಧಂತ್ಯುತ್ಸವ ಪ್ರಯುಕ್ತ ಬೊಂಬಾಯಿ ಪಟ್ಟಣದಲ್ಲಿ ಮಹಾಸಭೆಯೊಂದು ನಡೆಯಿತು. ಆಗ ಗೋಖಲೆಯವರು ಅಗ್ರಾಸನವನ್ನಲಂಕರಿಸಿ ಮಾಡಿದ ಉಪನ್ಯಾಸದಿಂದ ಈ ಕೆಳಗಣ ವಾಕ್ಯಾವಳಿಯನ್ನು ಸಂಗ್ರಹಿಸಿದೆ:—

ಮಹಾಶಯರೆ,—ಈ ದಿನ ಇಲ್ಲಿ ಇಷ್ಟೊಂದು ದೊಡ್ಡದಾಗಿ ಸಭೆ ನೆರೆದಿರುವುದರ ಅರ್ಥವೇನು? ದಾದಾಭಾಯಿಯವರು ಲಕ್ಷೋಪಲಕ್ಷ ಮಂದಿ ಸ್ವದೇಶೀಯರ ಹೃದಯದಲ್ಲಿ,—ಅವರ ಜಾತಿ ಮತ ಭೇದಗಳಿಂದ ಬಾಧಿತರಾಗದೆ,—ರಾಜಾಧಿರಾಜರು ಮತ್ಸರಿಸಬಹುದಾದಂತಹ ಉನ್ನತ ಪದವಿಯನ್ನು, ಮಹಾತ್ಮರಾದ ಲೋಕಾಚಾರ್ಯರುಗಳು ತಮ್ಮ ಶಿಷ್ಯ ಕೋಟಿಯ ಮಧ್ಯೆ ಅಲಂಕರಿಸಬಹುದಾದಂಥಾ ಉಚ್ಚಸ್ಥಾನವನ್ನು, ಪಡೆದಿರಲು ಕಾರಣವೇನು? ನಮಗೆ ಅವರು ಮಹಾ ರಾಜಕೀಯ ಪ್ರಮುಖರಾಗಿ—ಅದರಲ್ಲಿಯೂ ಕಳೆದ ಅರ್ಧ ಶತಮಾನಕಾಲ ಅಗ್ರಗಣ್ಯರಾಗಿ—ಇರುವರೆಂಬುದು ಮಾತ್ರವೇ ಅಲ್ಲ. ನಮ್ಮ ದೇಶದಲ್ಲಿ ಶ್ರೇಷ್ಠವೂ ಉತ್ತಮವೂ ಆದ ಅಂಶಗಳು ಯಾವ ಯಾವುವು ಉಂಟೋ ಅವೆಲ್ಲವೂ ಅವರಲ್ಲಿ ಮೂರ್ತೀಭವಿಸಿವೆ; ಮತ್ತು ನಮ್ಮ ಜನಪದ ಭಾವಕ್ಕೆಲ್ಲಾ ಅವರು ಪವಿತ್ರ ರೂಪಿಯಾದ ಪ್ರತಿನಿಧಿಯಾಗಿರುವರು. ಆದಕಾರಣದಿಂದಲೇ ನಮ್ಮ ಅತ್ಯಂತ ಅಗಾಧವಾದ ಭಕ್ತಿಯನ್ನು ನಾವು ಅವರಿಗೆ ಸಮರ್ಪಿಸುತ್ತಿದ್ದೇವೆ. ಈ ಪದವಿಯು ಅವರಿಗೆ ನಮ್ಮಲ್ಲನೇಕರು ಹುಟ್ಟುವುದಕ್ಕೆ ಮುಂಚೆಯೇ ದೊರೆತಿತ್ತು. ನಮ್ಮೊಳಗನೇಕರಲ್ಲಿ ಜನಪದಭಾವ ಸಂಬಂಧವಾದ ಕರ್ತವ್ಯ ಬುದ್ಧಿಯು ಮೊದಲು ಉತ್ಪನ್ನವಾದುದು ಅವರ ಬೋಧನೆಯ ಮತ್ತು ಅವರ ವರ್ತನೆಯ ಮಹಿಮೆಯಿಂದಲೇ. ಮಹಾಶಯರೆ, ಎಂಭತ್ತು ವರ್ಷಗಳ ಕೆಳಗೆ, ದಾದಾಭಾಯಿಯವರು ಜನ್ಮವೆತ್ತಿದ ಕಾಲದಲ್ಲಿ, ಅವರು ಒಂದಾನೊಂದು ದಿನ ಸಮಸ್ತ ಭರತವರ್ಷದ ಪ್ರತಿನಿಧಿಯಾಗಿ ನಿಲ್ಲುವ ಯೋಗವುಳ್ಳವರೆಂದು ಯಾರಾದರೂ ಹೇಳಿದ್ದಿದ್ದರೆ ಆತನನ್ನು ಹುಚ್ಚನೆಂದು ಕರೆಯುತ್ತಿದ್ದರು..............ಆಗ ಪಾಶ್ಚಾತ್ಯ ವಿದ್ಯಾಪ್ರಚಾರವು ಇನ್ನೂ ಮೊದಲಾಗಿರಲಿಲ್ಲ. ಈ ವಿಶಾಲವಾದ ದೇಶದ ನಾನಾ ಭಾಗಗಳವರು ಒಂದೇ ವಿಧದ ಮನೋಗತದಿಂದಲೂ ಒಂದೇ ವಿಧದ ಉದ್ದೇಶದಿಂದಲೂ ಒಟ್ಟುಗೂಡಿಯಾರೆಂದು ಆಗ ಊಹಿಸುವುದು ಕೂಡ ಅಸಾಧ್ಯವಾಗಿತ್ತು. ಆಗ ಯಾವುದು ದುರೂಹ್ಯವಾಗಿತ್ತೋ ಅದು ಈಗ ಪ್ರತ್ಯಕ್ಷವಾಗಿರುವ ಸಂಗತಿಯು, ಬ್ರಿಟಿಷ್ ಸರಕಾರದವರಿಗೆ—ಅವರು ವಿದ್ಯಾಪ್ರಚಾರದಲ್ಲಿ

ತೋರಿಸಿರುವ ಔದಾರ್ಯ ವಿಚಕ್ಷಣೆಗಳ ವಿಷಯದಲ್ಲಿ—ಅಪಾರವಾದ ಗೌರವವನ್ನುಂಟುಮಾಡತಕ್ಕದಾಗಿದೆ. ಈ ರೀತಿ (ಇಂಗ್ಲಿಷ್ ವಿದ್ಯೆಯ ಪ್ರಭಾವದಿಂದ) ದೇಶದಲ್ಲುಂಟಾದ ಹೊಸ ಏರ್ಪಾಟಿನ ನಿಜವಾದ ಅರ್ಥವನ್ನು ಗ್ರಹಿಸಿ, ಆ ಮೂಲಕ ಸ್ವಜನರಿಗೆ ಆಗಬಹುದಾದ ಶುಭಪರಂಪರೆಯನ್ನು ತಿಳಿದು, ಆಶುಭಗಳನ್ನು ಸಾಧಿಸುವ ಕಾರ್ಯದಲ್ಲಿ ಕಾಯಾ ವಾಚಾ ಮನಸಾ ಪ್ರವೃತ್ತರಾದ ಕೀರ್ತಿಯು ದಾದಾಭಾಯಿಯವರಿಗೂ, ಅವರೊಡನೆ ಕೆಲಸಮಾಡಿದ ನಮ್ಮ ದೇಶಾಭಿಮಾನಿಗಳ ಪ್ರಥಮ ಪಂಕ್ತಿಗೂ ಸಲ್ಲತಕ್ಕದಾಗಿದೆ. ಅಂದಿನಿಂದೀಚೆಗೆ ನಮ್ಮ ದೇಶಸೇವಕರಲ್ಲಿ ಒಂದು ತಲೆಮೊರೆಯವರು ಅದೃಶ್ಯರಾಗಿದ್ದಾರೆ; ಇನ್ನೊಂದು ತಲೆಮೊರೆಯವರಲ್ಲಿ ಕೆಲವರು ಮಾತ್ರ ಇನ್ನೂ ಜೀವಿಸಿದ್ದಾರೆ—ಇವರು ನಮಗೆ ಆದರ್ಶವಾಗಿ ಚಿರಕಾಲ ಜೀವಿಸಿರಲಿ! ಆದರೆ ದಾದಾಭಾಯಿಯವರು ಈ ಅರವತ್ತು ವರ್ಷಕಾಲವೂ ನಮ್ಮ ಸಮಾರಂಭಗಳಿಗೆ ಮುಂದಾಳಾಗಿ ನಿಂತಿರುವರು. ವಾರ್ಧಕ್ಯವಾಗಲಿ ಆಶಾಭಂಗವಾಗಲಿ ಅವರ ಉತ್ಸಾಹವನ್ನು ಕಡಿಮೆಮಾಡಿಲ್ಲ; ಸ್ವದೇಶೀಯರಮೇಲೆ ಅವರಿಗಿರುವ ಪ್ರೇರಕಶಕ್ತಿಗೆ ಅವರ ಪರದೇಶವಾಸದಿಂದ ಚ್ಯುತಿಯುಂಟಾಗಿಲ್ಲ. ನಮ್ಮ ರಾಜಕೀಯ ವ್ಯವಹಾರವು ಸಣ್ಣದಾಗಿ ಆರಂಭಿಸಿ ಈಗಿನ ದೊಡ್ಡ ಪರಿಮಾಣಕ್ಕೆ ಬೆಳೆದಿರುವುದನ್ನು ಅವರು ಪಿತೃವಾತ್ಸಲ್ಯದಿಂದ ನೋಡುತ್ತ ಬಂದಿದಾರೆ. ಅದರ ಜಯಾಪಜಯಗಳು ತಮ್ಮ ಸ್ವಂತ ಜೀವಿತದ ಜಯಾಪಜಯಗಳೆಂದು ಅವರು ಎಣಿಸಿಕೊಂಡಿದಾರೆ. ಅದರ ಸರ್ವರೂಪ ಸರ್ವಾವಸ್ಥೆಗಳನ್ನೂ ಅವರು ಬಲ್ಲರು. ಆದಕಾರಣ ಈ ದಿನ ಅವರ ಜನ್ಮದಿವಸೋತ್ಸವವನ್ನು ನಾವು ನೆರವೇರಿಸುವುದರಲ್ಲಿ ನಮ್ಮ ಸರ್ವ ಸಮಾರಂಭಗಳಿಗೂ ಸರ್ವಕುತೂಹಲಗಳಿಗೂ ಯಾರು ಅರ್ಧ ಶತಮಾನದ ಹಿಂದಿನಿಂದಲೂ ಆದರ್ಶಪ್ರಾಯರಾಗಿ ಬಂದಿರುವರೋ ಅವರಿಗೆ ಗೌರವವನ್ನು ತೋರಿಸುತ್ತಿದ್ದೇವೆ. ನಮ್ಮ ಭೂಮಾತೆಯ ಸೇವೆಯಲ್ಲಿ ಸಂಪೂರ್ಣ ದೀಕ್ಷೆ ಹೊಂದಿದ ಆ ಧನ್ಯಜೀವಕ್ಕೆ ದೀರ್ಘಾಯುವನ್ನು ದಯಪಾಲಿಸಿರುವುದಕ್ಕಾಗಿ ಸರ್ವಮಂಗಳಪ್ರದನಾದ • ದೇವರಿಗೆ ವಿನಯಪೂರ್ವಕವಾದ ಕೃತಜ್ಞತೆಯು ನಮ್ಮ ಹೃದಯ ಮಧ್ಯದಿಂದ ಪ್ರವಹಿಸುತ್ತಲಿದೆ.

ಮಹಾಶಯರೆ, ಅದೆಂತಹ ಜೀವನ! ಅದರ ಮನೋಹರವಾದ ಪರಿಶುದ್ಧತೆಯೋ, ಅದರ ಸಾತ್ತ್ವಿಕತೆಯೋ, ಅದರ ಸೌಮ್ಯಸಹಿತವಾದ ಕ್ಷಮಾಗುಣವೋ, ಅದರ ಉತ್ಕೃಷ್ಟವಾದ ಸ್ವಾರ್ಥತ್ಯಾಗವೋ, ಅದರ ಉನ್ನತವಾದ ದೇಶವಾತ್ಸಲ್ಯವೋ, ಅದರ ಅಕ್ಷಯವಾದ ಪ್ರೇಮವೋ, ಅದರ ಮಹೋದ್ದೇಶ ಪರಾಯಣತೆಯೋ—ಈ ಗುಣಗಳನ್ನು ಮನಸ್ಸಿಗೆ ತಂದುಕೊಂಡರೆ ನಾವು ಒಂದು ಪವಿತ್ರ ಕ್ಷೇತ್ರದಲ್ಲಿರುವಂತೆ ತೋರುವುದು. ಯಾವ ಜನರಲ್ಲಿ ದಾದಾಭಾಯಿಯವರಂಥವರು ಹುಟ್ಟುವರೋ—ಅಂಥವರು, ರಾನಡೆಯವರು ಹೇಳಿದಂತೆ, ಲಕ್ಷಕ್ಕೊಬ್ಬರಾದರೂ ಸರಿ—ಆ ಜನರಿಗೆ ಪುರೋಭಿವೃದ್ಧಿಯ ಭರವಸೆಯು ಖಂಡಿತವಾಗಿಯೂ ಉಂಟು. . . .

ಅವರ ಜೀವನದಿಂದ ತೋರಿಬರುವ ನೀತಿಗಳನ್ನು ದೃಷ್ಟಿಯಲ್ಲಿರಿಸಿ, ಅವುಗಳನ್ನು ಮನಸ್ಸಿನಲ್ಲಿಯೂ ಕಾರ್ಯದಲ್ಲಿಯೂ ನೀವು ಅನುಷ್ಠಾನಕ್ಕೆ ತರುವಿರೆಂದು ನನ್ನ ಕೋರಿಕೆ. ಮಹಾಶಯರೆ, ಪ್ರೇಮಜ್ಞಾನ ಪರಿಪೂರ್ಣನಾದ ಭಗವಂತನು ಪ್ರಪಂಚದ ಬೇರೆ ಬೇರೆ ಜನರಿಗೆ ಬೇರೆ ಬೇರೆ ಕಾಲಗಳಿಗೆ ತಕ್ಕಂತೆ ಸನ್ಮಾರ್ಗಪ್ರದೀಪಕರಾದ ಮಹಾಪುರುಷರನ್ನು ಕಳುಹಿಸುತ್ತಾನೆ. ಈಗ ಈ ದೇಶದವರಿಗೆ ಆತನು ದಾದಾಭಾಯಿಯವರನ್ನು ಈ ರೀತಿ ಅನುಗ್ರಹಿಸಿರುವನೆಂಬುದಕ್ಕೆ ಸಂಶಯವಿಲ್ಲ. ನನಗೆ ತಿಳಿದಿರುವುದರಲ್ಲಿ ಪ್ರಪಂಚದಲ್ಲೆಲ್ಲಾ ಅತ್ಯುತ್ತಮರೂಪದ ದೇಶಭಕ್ತಿ ಯಾವುದೋ ಅದಕ್ಕೆ ಅವರು ದೃಷ್ಟಾಂತಪ್ರಾಯರಾಗಿದ್ದಾರೆ. ಅಂತಹ ಉನ್ನತಭಾವವನ್ನು ಪಡೆಯುವುದು ನಮಗೆ ಸಾಧ್ಯವಲ್ಲವೆಂಬುದು ನಿಜ. ಅವರ ಅಜೇಯವಾದ ಚಿತ್ತಸ್ಥೈರ್ಯವನ್ನೂ, ಅವರ ಅದ್ಭುತವಾದ ಉದ್ಯೋಗ ಶಕ್ತಿಯನ್ನೂ, ಅವರ ಉದಾತ್ತಭಾವವನ್ನೂ ಪಡೆದಿರುವವರು ಅತಿವಿರಳ. ಆದರೆ ಅವರಂತೆ ಜಾತಿ ಮತ ಮಾತ್ಸರ್ಯಗಳನ್ನು ಬಿಟ್ಟು ನಮ್ಮ ದೇಶದಲ್ಲಿ ಪ್ರೀತಿಯಿಡುವುದು ನಮಗೆಲ್ಲರಿಗೂ ಸಾಧ್ಯ. ಅವರು ಯಾವ ಮಹೋದ್ದೇಶಕ್ಕಾಗಿ ಇಷ್ಟು ದೀರ್ಘಕಾಲ ನಿಶ್ಚಲಚಿತ್ತದಿಂದ ಶ್ರಮಪಟ್ಟಿರುವರೋ ಅದಕ್ಕಾಗಿ ಸ್ವಲ್ಪಮಟ್ಟಿಗಾದರೂ ಸ್ವಸುಖತ್ಯಾಗ ಮಾಡುವುದು ನಮಗೆಲ್ಲರಿಗೂ ಸಾಧ್ಯ. ಮುಖ್ಯವಾಗಿ, ಸ್ವದೇಶ ಪ್ರಯೋಜನಕ್ಕಾಗಿ ಸ್ವಪ್ರಯೋಜನವನ್ನು ಬಿಡು

ವುದೇ ದಾದಾಭಾಯಿಯವರ ಜೀವನದಿಂದ ನಾವು ಕಲಿಯಬಹುದಾದ ಪಾಠಗಳಲ್ಲಿ ಬಹಳ ದೊಡ್ಡದು. ಅದನ್ನು ನಮ್ಮ ದೇಶದ ಯುವಕರು ಕೊಂಚ ಮಟ್ಟಿಗಾದರೂ ಆಚರಣೆಗೆ ತಂದರೆ, ನಮ್ಮ ಈಗಿನ ಸ್ಥಿತಿಯು ಎಷ್ಟು ನಿರುತ್ಸಾಹಕರವಾಗಿ ಕಂಡರೂ, ನಮ್ಮ ಭವಿಷ್ಯದ್ಯೋಗವು ಶುಭಸಮನ್ವಿತ ವಾಗುವುದು ಖಂಡಿತ.

---

# ಗುಣಕೀರ್ತನೆ

---

ಗೋಖಲೆಯವರ ವಿಷಯದಲ್ಲಿ ತಮ್ಮ ಗೌರವ ಕೃತಜ್ಞತೆಗಳನ್ನೂ ಅವರ ಮೃತಿಯ ವಿಷಯದಲ್ಲಿ ದುಃಖವನ್ನೂ ಸೂಚಿಸುವುದಕ್ಕಾಗಿ ಇಂಡಿಯಾ ದೇಶದಲ್ಲಿರುವ ನಾನಾ ಜಾತಿ ನಾನಾ ಪಂಗಡಗಳವರೂ ಸಭೆಗಳನ್ನು ನಡಿಸಿದರೆಂದು ಹಿಂದೆ ಹೇಳಿದೆ. ಆ ಕಾಲದಲ್ಲಿ ಪ್ರಮುಖ ಜನರು ಮಾಡಿದ ನೂರಾರು ಉಪನ್ಯಾಸಗಳಲ್ಲಿ ಅತಿ ಮುಖ್ಯವಾದ ಕೆಲವುಗಳ ಸಾರಾಂಶವನ್ನು ಮಾತ್ರ ಇಲ್ಲಿ ಸಂಗ್ರಹಿಸಿರುವೆವು.

## ಸರ್ ಎಂ. ವಿಶ್ವೇಶ್ವರಯ್ಯನವರ ಪರಿತಾಪ

ಗೋಖಲೆಯವರು ದೈವಾಧೀನರಾದ ವಿಷಯದಲ್ಲಿ ಪರಿತಾಪವನ್ನು ಸೂಚಿಸುವುದಕ್ಕಾಗಿ ೧೯೧೫ನೆಯ ಫೆಬ್ರುವರಿ ೨೫ನೆಯ ತಾರೀಖು ಗುರುವಾರ ಬೆಂಗಳೂರು ಪಟ್ಟಣದಲ್ಲಿ ಸಾವಿರಾರು ಮಂದಿ ಪ್ರಮುಖಜನರೂ ವಿದ್ಯಾರ್ಥಿಗಳೂ ಸಭೆ ಸೇರಿದ್ದರು. ಆ ಸಂದರ್ಭದಲ್ಲಿ ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರು ಅಪ್ಪಣೆಕೊಡಿಸಿದ ಉಪನ್ಯಾಸದ ಸಾರಾಂಶವೇನೆಂದರೆ :—

ಗೋಖಲೆಯವರನ್ನು ನಾನು ೨೫ ವರ್ಷಗಳಿಂದ ಬಲ್ಲೆನು. ನಾನು ಪೂನಾದಲ್ಲಿದ್ದ ಹದಿನೈದು ವರ್ಷವೂ ಅವರೂ ನಾನೂ ಪ್ರತಿದಿನವೂ ಒಂದು "ಕ್ಲಬ್" ಅಥವಾ ವಿನೋದಮಂದಿರದಲ್ಲಿ ಸೇರುತ್ತಿದ್ದೆವು. ಅದನ್ನು ಅವರೂ ಇತರ ಕೆಲ ಮಂದಿ ಸ್ನೇಹಿತರೂ ನಾನೂ ಸೇರಿ ಸ್ಥಾಪಿಸಿದ್ದೆವು. ರಾನಡೆಯವರೂ ಗೋಖಲೆಯವರೂ ಅದರ ಕಾರ್ಯ ನಿರ್ವಾಹಕ ಸಭೆಯ ಮೆಂಬರುಗಳಾಗಿದ್ದರು ; ನಾನು ಕಾರ್ಯದರ್ಶಿಯಾಗಿದ್ದೆನು. ೧೯೦೨ರಲ್ಲಿ ಅವರು ಪೂನಾ ಮ್ಯುನಿಸಿಪಾಲಿಟಿಯ ಆನರೆರಿ ಪ್ರೆಸಿಡೆಂಟ್ (ಮಾನ್ಯ ಅಧ್ಯಕ್ಷ)ರಾಗಿರಲು ಒಪ್ಪಿಕೊಂಡರು. ಆ ಪಟ್ಟಣದ ಜಲಮಾರ್ಗಗಳನ್ನು ಉತ್ತಮಗೊಳಿಸುವ ಕೆಲಸದಲ್ಲಿ ಅವರೂ ನಾನೂ ಕೂಡ ಸೇರಲು ಅವಕಾಶವಾಯಿತು.

ಗೋಖಲೆಯವರು ವಿಶೇಷ ಶ್ರಮಪಟ್ಟು ಕೆಲಸಮಾಡುತ್ತಿದ್ದರು ; ಅವರಲ್ಲಿ ಅದ್ಭುತವಾದ ಬುದ್ಧಿಯೂ ಅಧಿಕವಾದ ಚಿತ್ತಸ್ಥೈರ್ಯವೂ ಇದ್ದವು. ಚಿಕ್ಕವಯಸ್ಸಿನಿಂದಲೂ ಅವರು ತಮ್ಮ ಚರ್ಚಾಶಕ್ತಿಯನ್ನು ಆಶ್ಚರ್ಯಕರವಾದ ರೀತಿಯಲ್ಲಿ ತಿದ್ದಿಕೊಂಡಿದ್ದರು. ಅವರು ತಾಳ್ಮೆಯುಳ್ಳವರಾಗಿಯೂ, ಪ್ರತಿಯೊಂದು ವಿಷಯವನ್ನೂ ಎರಡು ಪಕ್ಷಗಳಿಂದಲೂ

ಆಲೋಚಿಸುವವರಾಗಿಯೂ ಇದ್ದುದರಿಂದ, ಯಾವಾಗಲೂ ವಿಪರೀತ ಭಾವನೆಗಳಿಗೆ ಮನಸ್ಸಿನ ಲ್ಲೆಡೆ ಕೊಡುತ್ತಿರಲಿಲ್ಲ. ಅವರು ತಮ್ಮ ಆಶೆಗಳಿಗೆ ಮಿತಿಯನ್ನು ಗೊತ್ತುಮಾಡಿಕೊಂಡಿದ್ದರು.

ಅವರ ಮರಣದಿಂದ ನಮ್ಮಲ್ಲಿ ಕೆಲವರಿಗೆ ಆಪ್ತಮಿತ್ರನನ್ನು ಕಳೆದುಕೊಂಡ ದುಃಖ; ಇನ್ನು ಕೆಲವರಿಗೆ, ಪರಾಕ್ರಮಿಯಾದ ಮುಖಂಡನೂ ಕಾರ್ಯವಾದಿಯೂ ಹೋದನೆಂಬ ದುಃಖ; ಸಮಸ್ತ ಬ್ರಿಟಿಷ್ ಚಕ್ರಾಧಿಪತ್ಯಕ್ಕೂ, ಗೌರವಾರ್ಹನಾದ ಪ್ರಜೆಯೂ ಲೋಕೋಪಕಾರಿಯಾಗಿ ಬಾಳಿ ಚಿರಸ್ಥಾಯಿಯಾದ ಕೀರ್ತಿಯನ್ನು ಬಿಟ್ಟ ರಾಜ್ಯತಂತ್ರ ನಿಪುಣನೂ ಅದೃಶ್ಯನಾದನೆಂಬ ದುಃಖ. ಅಂತಹ ಮಹನೀಯನನ್ನು ನಾವು ಪುನಃ ಕಾಣಬೇಕಾದರೆ ಬಹುಕಾಲ ಹಿಡಿದೀತು.

---

## ತಿಲಕರವರ ಶೋಕ

ಗೋಖಲೆಯವರು ಪರಂಧಾಮಕ್ಕೆ ತೆರಳಿದ ಬಳಿಕ, ಅವರ ಶರೀರವನ್ನು ಯಜ್ಞೇಶ್ವರನಿಗರ್ಪಿಸುವುದಕ್ಕೆ ಮುಂಚೆ, ಬಾಲ ಗಂಗಾಧರ ತಿಲಕರವರು ಆ ಬಳಿ ಸೇರಿದ್ದ ದೊಡ್ಡ ಗುಂಪನ್ನು ಸಂಬೋಧಿಸಿ ಈ ರೀತಿ ಹೇಳಿದರು ;—

ಭಾರತಮಾತೆಯ ಶಿರೋರತ್ನವಾದ, ಮಹಾರಾಷ್ಟ್ರದ ದಿವ್ಯಾಭರಣವಾದ, ದೇಶಭಕ್ತರ ರಾಜರಾದ ಗೋಖಲೆಯವರು ಚಿತೆಯಮೇಲೆ ದೀರ್ಘನಿದ್ರೆಯನ್ನು ಹೊಂದಿದ್ದಾರೆ. ಅವರ ಮೇಲೆ ದೃಷ್ಟಿಯಿಟ್ಟು, ಅವರು ಹಾಕಿದ ದಾರಿಯಲ್ಲಿ ನಡೆಯಿರಿ. ಅವರೇನೋ ಕೃತಕೃತ್ಯರಾಗಿ ನಮ್ಮನ್ನು ಬಿಟ್ಟು ಹೊರಟುಹೋದರು. ಆದರೆ ಅವರ ಸ್ಥಾನಕ್ಕೆ ಬರಲು ನಮ್ಮಲ್ಲಿ ಯಾರಾದರೂ ಇರುವರೆ? ಯುದ್ಧದಲ್ಲಿ ಜಯಶಾಲಿಯಾಗಿ ಶಾಶ್ವತ ಯಶಸ್ಸನ್ನು ಸಂಪಾದಿಸಿ, ವೀರಸ್ವರ್ಗವನ್ನು ಸೇರುವವನಂತೆ ಅವರು ಹೊರಟಿರುವರು. ಆ ರೀತಿ ದೇಶಸೇವಾ ಕರ್ತವ್ಯವನ್ನು ಮಾಡಿದೆನೆಂದು ಭಗವಂತನಲ್ಲಿ ವಿಜ್ಞಾಪಿಸಬಲ್ಲವರು ಅತಿವಿರಳ. ಗೋಖಲೆಯವರನ್ನು ನಾನು ಬಾಲ್ಯದಿಂದ ಬಲ್ಲೆ. ಅವರು ಮೊದಲಿನಿಂದಲೂ ನಮ್ಮಂತೆ ಸಾಮಾನ್ಯರಾಗಿದ್ದರು. ಅವರೇನೂ ಇನಾಂದಾರರಲ್ಲ, ಜಹಗೀರ್‌ದಾರರಲ್ಲ, ರಾಜಕುವರರಲ್ಲ ; ಸ್ವಸಾಮರ್ಥ್ಯದಿಂದಲೂ, ಶ್ರದ್ಧೆಯಿಂದಲೂ, ಕಾರ್ಯಶೀಲತೆಯಿಂದಲೂ ಅವರು ಉನ್ನತಿಗೆ ಬಂದವರು. . . . . ಅವರ ದೇಹವು ಅದೃಶ್ಯವಾಗಿದ್ದರೂ, ಅವರು ತೋರಿದ ಜೀವನಕ್ರಮವು ಪ್ರಕಾಶಮಾನವಾಗಿರುವುದು. ಮಹಾಶಯರೆ, ನಾವು ಅದನ್ನನುಸರಿಸಲು ತ್ರಿಕರಣಪೂರ್ವಕವಾಗಿ ಪ್ರಯತ್ನಪಟ್ಟರೆ ಸ್ವರ್ಗದಲ್ಲಿರುವ ಅವರಿಗೆ ಸಂತೋಷವುಂಟಾಗುವುದು.

---

## ಗಾಂಧಿಯವರ ಭಕ್ತಿ

### (೧)

ಗೋಖಲೆಯವರ ವಿಷಯದಲ್ಲಿ ಮ|| ಗಾಂಧಿಯವರು ಅನೇಕ ಉಪನ್ಯಾಸಗಳನ್ನು ಮಾಡಿರುವರಲ್ಲದೆ ಅನೇಕ ಲೇಖನಗಳಲ್ಲಿಯೂ ಅವರ ಪ್ರಭಾವವನ್ನು ಕೊಂಡಾಡಿರುವರು. ೧೯೧೫ನೆಯ ಇಸ್ವಿ ಮೇ ತಿಂಗಳಲ್ಲಿ ಬೆಂಗಳೂರು ಪಟ್ಟಣದಲ್ಲಿ ಗೋಖಲೆಯವರ ಭಾವ ಚಿತ್ರವನ್ನು ಪ್ರಕಾಶಗೊಳಿಸುವ ಸಂದರ್ಭದಲ್ಲಿ ಗಾಂಧಿಯವರು ಹೀಗೆ ಹೇಳಿದರು :—

ಗೋಖಲೆಯವರು ನನ್ನ ರಾಜಕೀಯ ಗುರುಗಳು. ಭಾರತೀಯರೆಲ್ಲರಿಗೂ ಅವರು ಹಾಗೆಯೇ ಎಂದು ನಾನು ಭಾವಿಸಿದ್ದೇನೆ. ಈ ನನ್ನ ಶಿಷ್ಯತನವನ್ನು ನಾನು ೧೮೯೬ ರಲ್ಲಿಯೇ ಪ್ರಸಿದ್ಧಿಗೊಳಿಸಿದೆನು. ಆ ಗುರುವನ್ನು ಆಶ್ರಯಿಸಿದುದಕ್ಕಾಗಿ ನಾನು ಎಂದಿಗೂ ಪಶ್ಚಾತ್ತಾಪಪಡಬೇಕಾದುದಿಲ್ಲ.

ಸ್ವದೇಶವನ್ನು ಪ್ರೀತಿಸುವ ಪ್ರತಿಯೊಬ್ಬ ಭಾರತೀಯನೂ ದೇಶವನ್ನು ಬಾಯಿ ಮಾತಿನಿಂದ ಹೊಗಳುವುದರಲ್ಲಿ ತೃಪ್ತನಾಗದೆ, ದೇಶದ ರಾಜಕೀಯ ಜೀವನವನ್ನೂ ರಾಜ್ಯ ಸಂಸ್ಥೆಗಳನ್ನೂ ಧರ್ಮಮಯವಾಗಿ ಮಾಡುವುದರಲ್ಲಿ ತದೇಕಧ್ಯಾನಿಯಾಗಿರಬೇಕೆಂದು ಗೋಖಲೆಯವರು ನನಗೆ ಕಲಿಸಿದರು ; ನನ್ನ ಜೀವನವನ್ನು ಅವರು ಪ್ರೇರಿಸಿದರು ; ಈಗಲೂ ಪ್ರೇರಿಸುತ್ತಿರುವರು. ಆ ಪ್ರೇರಣೆಯಿಂದ ನಾನು ಆತ್ಮ ಪರಿಶೋಧನೆಮಾಡಿಕೊಂಡು ಧರ್ಮನಿಷ್ಠನಾಗಬೇಕೆಂದು ಆಶಿಸಿದ್ದೇನೆ.

ಆ ಋಷಿಸದೃಶರಾದ ರಾಜ್ಯಕಾರ್ಯಕರ್ತರ ಬಳಿ ನಾನು ಕಡೆಯವರೆಗೂ ಇದ್ದೆನು ; ಅವರಲ್ಲಿ ಅಹಂಭಾವವನ್ನೆಷ್ಟು ಮಾತ್ರವೂ ಕಾಣಲಿಲ್ಲ. ಅವರು ಪ್ರಸಿದ್ಧರಾಗಬೇಕೆಂದು ಆಶಿಪಟ್ಟಿದ್ದರೂ ಕೂಡ, ಅದು ತಮಗೆ ಜನರ ಹೊಗಳಿಕೆ ದೊರೆಯಲೆಂಬ ಭಾವದಿಂದ ಅಲ್ಲ, ತಮ್ಮ ದೇಶಕ್ಕೆ ಆ ಮೂಲಕ ಒಳ್ಳೆಯದಾಗಲೆಂಬ ಆಶೆಯಿಂದ. ಅವರು ತಮ್ಮಲ್ಲಿದ್ದ ಪ್ರತಿಯೊಂದು ಶಕ್ತಿಯನ್ನೂ ಅಭಿವೃದ್ಧಿಪಡಿಸಿಕೊಂಡುದು ಲೋಕದ ಸ್ತೋತ್ರಕ್ಕೋಸ್ಕರ ವಲ್ಲ, ಸ್ವದೇಶದ ಲಾಭಕ್ಕೋಸ್ಕರ. ಅವರು ಜನರ ಹೊಗಳಿಕೆಗಾಗಿ ಕಷ್ಟಪಡಲಿಲ್ಲ ; ಅದು ತಾನಾಗಿ ಅವರಲ್ಲಿಗೆ ಬಂದು ಬೇಡವೆಂದರೂ ಅವರ ಮೇಲೆ ವರ್ಷಿಸುತ್ತಿತ್ತು.

### (೨)

ಪೂನಾದಲ್ಲಿ ೧೯೧೫ನೆಯ ಜುಲೈ ತಿಂಗಳಲ್ಲಿ ಮಾಡಿದ ಒಂದು ಉಪನ್ಯಾಸದಲ್ಲಿ ಗಾಂಧಿಯವರು ಹೀಗೆ ಹೇಳಿದರು :—

ಒಂದಾವರ್ತಿ ಗೋಖಲೆಯವರೂ ಕಾಲೆನ್‌ಬಾಕ್ ಎಂಬ (ಜರ್ಮನ್ ಜಾತಿಯ) ಮಿತ್ರನೂ ನಾನೂ ಹಡಗಿನಲ್ಲಿ ಇಂಗ್ಲೆಂಡಿನಿಂದ ದಕ್ಷಿಣ ಆಫ್ರಿಕಕ್ಕೆ ಪ್ರಯಾಣಮಾಡು ತ್ತಿದ್ದೆವು. ಗೋಖಲೆಯವರು ಆಗ—ಆ ಪ್ರಯಾಣಕಾಲದಲ್ಲಿಯೇ—"ಕಾಯಿಟ್ಸ್"